ಎಂ.ಫಿಲ್. ಪದವಿಯ ಸಂಪ್ರಬಂಧ

# ಸಾರಾ ಅಬೂಬಕ್ಕರ್ ಅವರ ಕಥಾಸಾಹಿತ್ಯದಲ್ಲಿ ಮಹಿಳೆ


ಸಂಶೋಧನ ವಿದ್ಯಾರ್ಥಿ

ಬಿ.ಆರ್. ಜಯಕುಮಾರಿ

ಮಾರ್ಗದರ್ಶಕರು

ಪ್ರೊ. ಎಚ್.ಎಸ್. ಹರಿಶಂಕರ್



ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ಬೆಂಗಳೂರು
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರದ
ಮೂಲಕ
ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದೆ

2007

192

ಎಂ.ಫಿಲ್. ಪದವಿಯ ಸಂಪ್ರಬಂಧ

192

ಸಾರಾ ಅಬೂಬಕ್ಕರ್ ಅವರ

# ಕಥಾ ಸಾಹಿತ್ಯದಲ್ಲಿ ಮಹಿಳೆ

ಸಂಶೋಧನ ವಿದ್ಯಾರ್ಥಿ

**ಬಿ.ಆರ್. ಜಯಕುಮಾರಿ**

ಮಾರ್ಗದರ್ಶಕರು

**ಪ್ರೊ. ಎಚ್.ಎಸ್. ಹರಿಶಂಕರ್**

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ, ಬೆಂಗಳೂರು

ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರದ

ಮೂಲಕ

ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದೆ

**2007**

## ದೃಢೀಕರಣ ಪತ್ರ

ಬಿ.ಎಂ. ಶ್ರೀ. ಸ್ಮಾರಕ ಪ್ರತಿಷ್ಠಾನ, ಬೆಂಗಳೂರಿನ ಎಂ.ವಿ.ಸಿ. ಸ್ನಾತಕೋತ್ತರ ಸಂಶೋಧನಾ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾನಿಲಯಕ್ಕೆ ೨೦೦೬-೨೦೦೭ನೇ ಸಾಲಿನ ಎಂ.ಫಿಲ್. ಪದವಿಗಾಗಿ **"ಸಾರಾ ಅಬೂಬಕ್ಕರ್ ಅವರ ಕಥಾ ಸಾಹಿತ್ಯದಲ್ಲಿ ಮಹಿಳೆ"** ಎಂಬ ಸಂಪ್ರಬಂಧವನ್ನು **ಪ್ರೊ. ಎಚ್.ಎಸ್. ಹರಿಶಂಕರ್** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಸಲ್ಲಿಸುತ್ತಿದ್ದೇನೆ.

ಈ ಸಂಪ್ರಬಂಧ ನನ್ನ ಸ್ವಂತ ಬರವಣಿಗೆಯಾಗಿದ್ದು ಇದರ ಯಾವುದೇ ಭಾಗವನ್ನು ಈವರೆಗೆ ಬೇರೆಲ್ಲೂ ಪ್ರಕಟಪಡಿಸಿಲ್ಲ ಎಂದು ಈ ಮೂಲಕ ದೃಢೀಕರಿಸುತ್ತೇನೆ.

ದಿನಾಂಕ: 3.8.2007
ಸ್ಥಳ: ಬೆಂಗಳೂರು

ಸಹಿ
ಬಿ.ಆರ್. ಜಯಕುಮಾರಿ
(ಬಿ.ಆರ್. ಜಯಕುಮಾರಿ)

# ದೃಢೀಕರಣ ಪತ್ರ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ಬೆಂಗಳೂರಿನ ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನಾ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾನಿಲಯಕ್ಕೆ ೨೦೦೬-೦೭ನೇ ಸಾಲಿನ ಎಂ.ಫಿಲ್. ಪದವಿಗಾಗಿ **"ಸಾರಾ ಅಬೂಬಕ್ಕರ್ ಅವರ ಕಥಾ ಸಾಹಿತ್ಯದಲ್ಲಿ ಮಹಿಳೆ"** ಎಂಬ ಸಂಪ್ರಬಂಧವನ್ನು ನನ್ನ ಸಂಶೋಧನಾ ವಿದ್ಯಾರ್ಥಿ ಶ್ರೀಮತಿ ಬಿ.ಆರ್.ಜಯಕುಮಾರಿ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ.

ಈ ಸಂಪ್ರಬಂಧ ವಿದ್ಯಾರ್ಥಿಯ ಸ್ವಂತ ಬರವಣಿಗೆಯಾಗಿದ್ದು ಇದರ ಯಾವುದೇ ಭಾಗವನ್ನು ಬೇರೆಲ್ಲೂ ಪ್ರಕಟಿಸಿಲ್ಲ ಎಂದು ಈ ಮೂಲಕ ದೃಢೀಕರಿಸುತ್ತೇನೆ.

ದಿನಾಂಕ: 3.8.2007
ಸ್ಥಳ: ಮೈಸೂರು

ಸಹಿ

ಎಚ್.ಎಸ್. ಹರಿಶಂಕರ್

(ಪ್ರೊ. ಎಚ್.ಎಸ್. ಹರಿಶಂಕರ್)

# ಪರಿವಿಡಿ



| | | |
|---|---|---|
| ಅಧ್ಯಾಯ-೧ | ಸಂಶೋಧನೆ ಉದ್ದೇಶ ಮತ್ತು ವ್ಯಾಪ್ತಿ | ೧ |
| ಅಧ್ಯಾಯ-೨ | ಇಸ್ಲಾಂ ಧಾರ್ಮಿಕ ಹಿನ್ನೆಲೆ | ೯ |
| ಅಧ್ಯಾಯ-೩ | ಜೀವನ ಮತ್ತು ಸಾಧನೆ | ೧೫ |
| ಅಧ್ಯಾಯ-೪ | ಕಥಾ ಸಾಹಿತ್ಯದ ಸ್ವರೂಪ | ೧೮ |
| ಅಧ್ಯಾಯ-೫ | ಕಾದಂಬರಿ ಮತ್ತು ಕತೆಗಳ ವಸ್ತು | ೨೧ |
| ಅಧ್ಯಾಯ-೬ | ಕಥಾ ಸಾಹಿತ್ಯದಲ್ಲಿ ಕೇಂದ್ರ ನೆಲೆಯಾಗಿ ಮಹಿಳೆ | ೨೪ |
| ಅಧ್ಯಾಯ-೭ | ಕಾದಂಬರಿಗಳಲ್ಲಿ ಚಿತ್ರಣಗೊಂಡಿರುವ ಧಾರ್ಮಿಕ ಮತ್ತು ಸಾಮಾಜಿಕ ಸಮಸ್ಯೆಗಳು | ೨೭ |
| ಅಧ್ಯಾಯ-೮ | ಕತೆಗಳಲ್ಲಿ ಚಿತ್ರಣಗೊಂಡಿರುವ ಧಾರ್ಮಿಕ ಮತ್ತು ಸಾಮಾಜಿಕ ಸಮಸ್ಯೆಗಳು | ೪೩ |
| ಅಧ್ಯಾಯ-೯ | ಕಾದಂಬರಿ ಮತ್ತು ಕತೆಗಳಲ್ಲಿ ಹೆಣ್ಣು ಗಂಡಿನ ಸಂಬಂಧಗಳ ಚಿತ್ರಣ | ೭೬ |
| ಅಧ್ಯಾಯ-೧೦ | ಕಾದಂಬರಿ ಮತ್ತು ಕತೆಗಳಲ್ಲಿ ಹೆಣ್ಣಿನ ಕೌಟುಂಬಿಕ ಬದ್ಧತೆ | ೮೫ |
| ಅಧ್ಯಾಯ-೧೧ | ಕಥಾ ಸಾಹಿತ್ಯದಲ್ಲಿ ವೈಯಕ್ತಿಕ, ಕೌಟುಂಬಿಕ, ಸಾಮಾಜಿಕ ಸ್ಥಿತಿ | ೯೦ |
| ಅಧ್ಯಾಯ-೧೨ | ಕನ್ನಡ ಸಾಹಿತ್ಯದ ಮೇಲೆ ಸಾರಾ ಅವರ ಪ್ರಭಾವ | ೯೬ |
| | ಉಪಸಂಹಾರ | ೯೯ |

ಅಧ್ಯಾಯ-೧

# ಸಂಶೋಧನೆಯ ಉದ್ದೇಶ ಮತ್ತು ವ್ಯಾಪ್ತಿ

'ಮಹಿಳಾ ಸಂವೇದನೆ'ಯನ್ನು ಕುರಿತ ಅಧ್ಯಯನಕ್ಕೆ ಮೊದಲು ಭಾರತೀಯ ಸಂದರ್ಭದಲ್ಲಿ 'ಮಹಿಳೆ' ರೂಪುಗೊಂಡ ನೆಲೆಯನ್ನು ಗ್ರಹಿಸುವುದು ಮುಖ್ಯ. ಪಿತೃಪ್ರಧಾನ ವ್ಯವಸ್ಥೆಯಲ್ಲಿ ಎಲ್ಲಾ ಕಾಲಘಟ್ಟದಲ್ಲಿಯೂ ಮಹಿಳೆ ಎರಡನೆಯ ದರ್ಜೆಯವಳಾಗಿಯೇ ಗುರುತಿಸಲ್ಪಟ್ಟವಳು. ಅವಳು ಯಾವ ಸಾಮಾಜಿಕಸ್ತರದಲ್ಲೇ ಇರಲಿ, ಸ್ಥಾನ-ಗೌರವಗಳನ್ನು ಪಡೆದಿರಲಿ, ಅಂದಂದಿನ ಸಮಾಜ 'ಹೆಣ್ಣು' ಎಂಬ ಕಾರಣಕ್ಕೆ ತನ್ನದೇ ಆದ ಮಿತಿಗಳನ್ನು ಸಾರ್ವತ್ರಿಕ ನೆಲೆಯಲ್ಲಿ ವಿಧಿಸಿದ್ದು ಎಲ್ಲರಿಗೂ ತಿಳಿದ ಸಂಗತಿ. ಇಂಥ ಮಿತಿಯಲ್ಲಿಯೇ ಸಿಕ್ಕ ಅವಕಾಶಗಳನ್ನೇ ಬಳಸಿಕೊಂಡು ತನ್ನ ಅಂತಃಶ್ಶಕ್ತಿಯನ್ನು ಹೊರಹೊಮ್ಮಿಸಿದ್ದಾಳೆ. ಇದರ ಜೊತೆಗೆ ಮಹಿಳೆಯರಿಗೆ ವಿಶಿಷ್ಟ ಗೌರವ ಪ್ರಕಟವಾಗುತ್ತಿದ್ದ ಕಾಲಮಾನದಲ್ಲಿಯೇ ಅವಳನ್ನು ಹೀನಾಯವಾಗಿ ನಡೆಸಿಕೊಳ್ಳುತ್ತಿದ್ದ ವೃತ್ತಾಂತಗಳೂ ಇವೆ.

ವೈದಿಕ ವರ್ಣವ್ಯವಸ್ಥೆಯ ತಾರತಮ್ಯ ನೀತಿ, ಧರ್ಮಶಾಸ್ತ್ರಗಳು ಹುಟ್ಟು ಹಾಕಿದ ಲಿಂಗ-ಜಾತಿ-ರಾಜಕಾರಣ ಮತ್ತು ಪುರುಷ ಪ್ರಭುತ್ವದ ಏಕಲಿಂಗ ಚೌಕಟ್ಟಿನಲ್ಲಿ ಜಡಗೊಂಡಿದ್ದ ಭಾರತದ ಸಾಂಸ್ಕೃತಿಕ ರಚನೆಯನ್ನು ಮಾನವೀಯಗೊಳಿಸುವ ಪ್ರಯತ್ನಗಳು ವೇದೋಪನಿಷತ್ತುಗಳ ಕಾಲದಿಂದಲೂ ನಡೆದು ಬಂದಿದೆ. ಭಾರತೀಯ ಚಿಂತನೆಗಳನ್ನು ಮತ್ತು ಸಮಾಜ ವ್ಯವಸ್ಥೆಯನ್ನು ಆಳವಾಗಿ ಪ್ರಭಾವಿಸಿದ ಲಿಂಗಭೇದದ ಗ್ರಹಿಕೆಗಳು ಮತ್ತು ವಿರಕ್ತ ಧರ್ಮದರ್ಶನಗಳು ಗಟ್ಟಿಗೊಳಿಸಿದ ಸ್ತ್ರೀವಿರೋಧಿ ನಂಬಿಕೆಗಳ ಕಾರಣವಾಗಿ ಇತಿಹಾಸದುದ್ದಕ್ಕೂ ಭಾರತೀಯ ಮಹಿಳೆ ಲೌಕಿಕ ಮತ್ತು ಪಾರಮಾರ್ಥಿಕ ನೆಲೆಗಳಲ್ಲಿ ತಿರಸ್ಕಾರ, ಅವಹೇಳನಕ್ಕೆ ಗುರಿಯಾಗುತ್ತಾ ಬಂದಿದ್ದಾಳೆ. ಆದರೆ ಕಾಲಕಾಲಕ್ಕೆ ಉದಯಿಸಿದ ಭಾರತೀಯ ಧರ್ಮದರ್ಶನಗಳು ಸ್ತ್ರೀಸಮುದಾಯದ ಸಂಕಷ್ಟಗಳಿಗೆ ಸ್ಪಂದಿಸುತ್ತಾ ಬಂದಿದೆ. ಶಕ್ತಿ ರಾಜಕಾರಣದಿಂದಾಗಿ ಸಹಜ ಬದುಕಿನ ಅವಕಾಶಗಳಿಂದ ವಂಚಿತರಾದ ಬಹುಸಂಖ್ಯಾತ ಜನವರ್ಗದಲ್ಲಿ ಅರಿವು, ಆತ್ಮಪ್ರಜ್ಞೆ ಮೂಡಿಸುವ ಪ್ರಯತ್ನದಲ್ಲಿ ಬೌದ್ಧ, ಜೈನ ಧರ್ಮಗಳ, ಶೈವ, ವೈಷ್ಣವ ಇತ್ಯಾದಿ ಭಕ್ತಿ ಪಂಥಗಳ ಕೊಡುಗೆ ಹಿರಿದಾದುದು.

ಮಾನವತಾವಾದಿಗಳಾದ ಧಾರ್ಮಿಕ ನಾಯಕರ ಉದಾರವಾದಿ ಧೋರಣೆಗಳು ಮಹಿಳೆಯ ಸಾಮಾಜಿಕ ಸ್ಥಿತಿಗತಿಗಳ ಸುಧಾರಣೆಗೆ ಕೆಲಮಟ್ಟಿಗೆ ನೆರವಾಗಿವೆ. ಧರ್ಮಶಾಸ್ತ್ರಗಳ ಕಟ್ಟಳೆಗಳಲ್ಲಿ ಕೌಟುಂಬಿಕ ದಾಸ್ಯ, ಸಾಮಾಜಿಕ ಉಪೇಕ್ಷೆ ಮತ್ತು ಧಾರ್ಮಿಕ ಅಸ್ಪೃಶ್ಯತೆ, ಅಜ್ಞಾನದ ಅಧೀನತೆಯಲ್ಲಿ ಮುಳುಗಿಹೋಗಿದ್ದ ಸ್ತ್ರೀ ಸಮಾಜದ ಕಲ್ಯಾಣಕ್ಕಾಗಿ ವೇದೋಪನಿಷತ್ತುಗಳ ದ್ರಷ್ಟಾರರು, ಬುದ್ಧ, ಮಹಾವೀರರು ಚಿಂತಿಸಿದ್ದಾರೆ. ಮಹಿಳೆಯರ ಧಾರ್ಮಿಕಾಸಕ್ತಿಯನ್ನು ಆತ್ಮಜ್ಞಾನದ ಅಧಿಕಾರವನ್ನು, ಶಿಕ್ಷಣ ವೇದಾಧ್ಯಯನ ಅವಕಾಶವನ್ನು ಮುಕ್ತಗೊಳಿಸಿದ ವೇದಯುಗದ ಮಾನವೀಯ ಕಾಳಜಿಯುಳ್ಳವರಾಗಿದ್ದ ಗಾರ್ಗಿ, ಮೈತ್ರೇಯಿ, ಅದಿತಿ, ಇಂದ್ರಾಣಿ, ವಾಚಕ್ನವಿ, ಅಪಲಾ, ಲೋಪಾಮುದ್ರಾ, ವೈವಸ್ವತಿ, ಇತ್ಯಾದಿ ಬ್ರಹ್ಮವಾದಿನಿಯರ ಹುಟ್ಟಿಗೆ ಕಾರಣವಾಗಿದೆ. ವೈದಿಕ ಚಿಂತನಾಕ್ರಮದ ಪುರುಷ ಪರ ನೀತಿಯಿಂದಾಗಿ ಮೋಕ್ಷಾಧಿಕಾರಕ್ಕೆ ಅನರ್ಹಳಾಗಿ, ಶೂದ್ರನೆಲೆಗೆ ಸರಿದಿದ್ದ ಮಹಿಳೆಯರಿಗೆ ಧರ್ಮ ಸಾಧನೆಯನ್ನು ಪುರಸ್ಕರಿಸಿದ ಜೈನ, ಬೌದ್ಧ ಧರ್ಮಗಳು

ಮಹಿಳೆಯರ ಲೌಕಿಕ, ಪಾರಲೌಕಿಕ ಸಮಸ್ಯೆಗಳನ್ನು ಕೆಲಮಟ್ಟಿಗೆ ಹಗುರಗೊಳಿಸಿ ಸ್ತ್ರೀವಿರೋಧಿಯಾಗಿದ್ದ ಸಾಮಾಜಿಕ ವಾಸ್ತವತೆಯಲ್ಲಿ ಜೀವಪರತೆಯ ಹೊಸ ಬೆಳಕು ಮೂಡಿಸಿದವು. ಸಂಘಮಿತ್ರ, ಕ್ಷೇಮಾ ಮಹಾಪ್ರಜಾಪತಿ, ಗೌತಮಿ, ಮುಂತಾದ ಮಹಿಳೆಯರು ಬೌದ್ಧಧರ್ಮ ಪ್ರಸಾರಕಿಯರಾಗಿ ಗುರುತರ ಹೊಣೆಯನ್ನು ನಿರ್ವಹಿಸಿದ್ದಾರೆನ್ನುವುದು ಗಮನಾರ್ಹ.

ಆದರೆ ಕಾಲಾನಂತರ ಪರಕೀಯರ ಆಕ್ರಮಣಗಳು, ರಾಜಕೀಯ ಧಾರ್ಮಿಕ ಸ್ಥಿತ್ಯಂತರಗಳು, ಸಾಮಾಜಿಕ ಮನೋಧರ್ಮಗಳು, ಬದಲಾಗುತ್ತಾ, ಹೆಣ್ಣು ರಕ್ಷಣೆಯ ನೆಪದಲ್ಲಿ ಬಂಧಿತವಾಗತೊಡಗಿದಳು. ಧಾರ್ಮಿಕ ಹಿನ್ನೆಲೆಯಲ್ಲಿ ಉದಾರವಾದಿ ಮೌಲ್ಯಗಳು ಮರೆಯಾಗುತ್ತಾ ಆ ಸ್ಥಾನಗಳು ನಿಷೇಧಿತವಾಯಿತು. ಕೌಟುಂಬಿಕ ಆದ್ಯತೆಯೊಳಗೆ ಬಂಧಿಯಾಗಿದ್ದ ಮಹಿಳೆಗೆ ಆ ಸಂದರ್ಭದಲ್ಲಿ ಶೈವ ಮತ್ತು ವೈಷ್ಣವ ಭಕ್ತಿಪಂಥಗಳು ಮಹಿಳೆಯ ಸುತ್ತ ಸುತ್ತುವರೆದಿದ್ದ ಧಾರ್ಮಿಕ, ಸಾಮಾಜಿಕ, ನಿಯಂತ್ರಣಗಳನ್ನು ಸ್ವಲ್ಪಮಟ್ಟಿಗೆ ಸಡಿಲಗೊಳಿಸಿದವು. ಈ ರೀತಿಯಲ್ಲಿ ಸ್ತ್ರೀಯರ ವ್ಯಕ್ತಿತ್ವ ಮತ್ತು ಅಸ್ತಿತ್ವವನ್ನು ಲೌಕಿಕ ನೆಲೆಯಲ್ಲಿ ಕನಿಷ್ಟಗೊಳಿಸಿ ಆಧ್ಯಾತ್ಮ ನೆಲೆಯಲ್ಲಿ 'ಮಾಯೆ', 'ರಾಕ್ಷಸಿ', 'ಚಂಚಲೆ' ಎಂದು ಪರಿಗಣಿಸುತ್ತಿದ್ದ ಕಾಲಘಟ್ಟದಲ್ಲೇ ಕರ್ನಾಟಕದ ಶರಣರು ವ್ಯಕ್ತಪಡಿಸಿದ ಲಿಂಗ ಸಮಾನತೆಯ ಮಾನವೀಯ ಕಾಳಜಿ ಸ್ತ್ರೀ ವಿಮೋಚನೆಯ ನೆಲೆಯಲ್ಲಿ ಬೀಸಿದ ಪ್ರಥಮ ತಂಗಾಳಿಯಾಗಿದೆ.

ಹತ್ತೊಂಬತ್ತನೆಯ ಶತಮಾನದ ಸುಧಾರಣಾವಾದಿ ಚಳವಳಿಯಲ್ಲಿ ಮಹಿಳಾ ಶಿಕ್ಷಣಕ್ಕೆ ಪ್ರಾಮುಖ್ಯ ದೊರೆಯಿತು. ಈ ಹಿನ್ನೆಲೆಯಲ್ಲಿ ಮಹಿಳೆಯ ಅಭಿವ್ಯಕ್ತಿಗೆ ಮುಕ್ತ ಅವಕಾಶ ದೊರತದ್ದು ಆಧುನಿಕ ಕಾಲದಲ್ಲಿಯೇ. ಕಾರಣ ಬದಲಾದ ಭಾರತೀಯ ಶಿಕ್ಷಣ ವ್ಯವಸ್ಥೆ ಬ್ರಿಟಿಷರು ತಮ್ಮ ಆಡಳಿತಾತ್ಮಕ ಸೇವೆಗಳಿಗಾಗಿ ಭಾರತೀಯರಿಗೆ ಶಿಕ್ಷಣ ನೀಡಿದ್ದು ಹೊಸ ರೀತಿಯ ಚಿಂತನೆಗೆ ಅವಕಾಶ ದೊರೆಯಿತು. ಮಹಿಳೆಯರೂ ಶಿಕ್ಷಣದ ಅವಕಾಶ ಪಡೆದಿದ್ದರಿಂದ ತಮ್ಮದೇ ಆಲೋಚನಾ ಕ್ರಮವನ್ನು ಬೆಳೆಸಿಕೊಳ್ಳಲು ಅನುಕೂಲವಾಯಿತು. ಹಾಗೆಯೇ ತಮ್ಮ ಸಾಹಿತ್ಯಿಕ ಅಭಿವ್ಯಕ್ತಿಗೆ ಹೊಸ ನೆಲೆಗಳನ್ನು ಕಂಡುಕೊಳ್ಳಲು ಸಾಧ್ಯವಾಯಿತು. ಈ ಸಂದರ್ಭದಲ್ಲಿ ಶಿಕ್ಷಿತ ಪುರುಷರೂ ಸಾಮಾಜಿಕ ಸಮಸ್ಯೆಗಳನ್ನು ಕುರಿತು ಹೊಸ ರೀತಿಯಲ್ಲಿ ಚಿಂತಿಸಲು ಕಾರಣವಾಯಿತು.

ಹೊಸಗನ್ನಡ ಸಾಹಿತ್ಯ ರಚನೆಗೆ ಸಾಮಾಜಿಕ ಸ್ಥಿತ್ಯಂತರ, ಚಾರಿತ್ರಿಕ ಒತ್ತಡ ಮತ್ತು ಆಂತರಿಕ ಅಗತ್ಯ ಕಾರಣವಾದಂತೆ ಮಹಿಳಾ ಸಾಹಿತ್ಯರಚನೆಗೆ ಬದಲಾದ ಸಾಮಾಜಿಕ ಮೌಲ್ಯಗಳು, ಸ್ತ್ರೀ ಶಿಕ್ಷಣ ಸ್ವಾತಂತ್ರ್ಯ, ಸಮಾನತೆಯ ಅವಕಾಶಗಳು ಕಾರಣವಾಗಿವೆ. ಹನ್ನೆರಡನೆಯ ಶತಮಾನವನ್ನು ಹೊರತುಪಡಿಸಿದರೆ ಕನ್ನಡ ಸಾಹಿತ್ಯದ ಇತಿಹಾಸದಲ್ಲಿ ಮತ್ತೆ ಸ್ತ್ರೀಧ್ವನಿ ಕೇಳಿಸುವುದು ಆಧುನಿಕ ಕಾಲಘಟ್ಟದಲ್ಲಿಯೇ.

ಆಧುನಿಕ ಕನ್ನಡ ಸಾಹಿತ್ಯದ ಸಂದರ್ಭದಲ್ಲಿ ರಚನೆಗೊಂಡ ಮಹಿಳಾ ಸಾಹಿತ್ಯವನ್ನು ಅವಲೋಕಿಸಿದಾಗ ಮೂರು ರೀತಿಯ ಸಾಹಿತ್ಯಿಕ ನೆಲೆಗಳನ್ನು ಕಾರಣಬಹುದು. ಒಂದು, ನವೋದಯ ಕಾಲದಿಂದ ನವ್ಯದ ಕಾಲದವರೆಗೆ; ಎರಡು, ನವ್ಯದಿಂದ-ದಲಿತ ಬಂಡಾಯದವರೆಗೆ; ಮೂರು, ಬಂಡಾಯ ಮತ್ತು ದಲಿತ ಸಾಹಿತ್ಯದ ಸಂದರ್ಭದಲ್ಲಿ ಗುರುತಿಸಬಹುದಾಗಿದೆ. ಸಂಚಿ ಹೊನ್ನಮ್ಮಳ ಸ್ತ್ರೀಪರವಾದ ದ್ವಂದ್ವ ನಿಲವು ಮೊದಲನೆಯ ಮಾದರಿಯ ಮಹಿಳಾ ಸಾಹಿತ್ಯದಲ್ಲಿ ಕಂಡುಬಂದರೆ, ನಂತರದ ಮಹಿಳಾ ಸಾಹಿತ್ಯದಲ್ಲಿ ಪ್ರಯೋಗಶೀಲತೆಯನ್ನು

ಕಾಣಬಹುದಾಗಿದೆ. ಆ ನಂತರದ ಮಹಿಳಾ ಸಾಹಿತ್ಯದಲ್ಲಿ ಅಕ್ಕಮಹಾದೇವಿಯ ಸ್ತ್ರೀಪರ ಸಂವೇದನೆಯನ್ನು ಹಾಗೂ ಸಾಮಾಜಿಕ ನಿಲುವನ್ನು ಕಾಣಬಹುದಾಗಿದೆ. ಈ ಹಿನ್ನೆಲೆಯಲ್ಲಿ ಈ ಕಾಲಘಟ್ಟದ ಸಾಹಿತಿಗಳ ಬರಣಿಗೆಯ ವಸ್ತು ಅಭಿವ್ಯಕ್ತಿ, ಪ್ರೇರಣೆಗಳ ನೆಲೆಯನ್ನು ಮುಂದಿನಂತೆ ಸಂಗ್ರಹಿಸಬಹುದು. ಹನ್ನೆರಡನೆಯ ಶತಮಾನವು ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಪ್ರಮುಖವಾದ ಪ್ರಗತಿಪರವಾದ ಕಾಲಘಟ್ಟ. ಮಹಿಳಾ ಸಂವೇದನೆಯ ಪ್ರಪ್ರಥಮ ಅಭಿವ್ಯಕ್ತಿಯಾಗಿ ವಚನಸಾಹಿತ್ಯ, ಜೀವ ತುಂಬಿತು. ಸಮಾನತೆ, ಧಾರ್ಮಿಕ ಸ್ವಾತಂತ್ರ್ಯ, ಲಿಂಗ ಮತ್ತು ಜಾತಿ ಭೇದ ನಿವಾರಣೆ, ಮಾನವೀಯ ಸಂಬಂಧಗಳ ಮೂಲ ನೆಲೆಯಲ್ಲಿ ಶರಣರ ಉದಾತ್ತ ಮೌಲ್ಯಗಳು, ನೊಂದವರಿಗೆ ಹೊಸ ಬದುಕಿನ ಭರವಸೆಯನ್ನು ಮೂಡಿಸಿದವು.

ಸಾಮಾಜಿಕ ಸುಧಾರಣೆಯ ನೆಲೆಯಲ್ಲಿ ಸೃಷ್ಟಿಗೊಂಡ ವಚನ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆಯ ನೆಲೆಗಳು ಮುಕ್ತವಾಗಿ ತೆರೆದುಕೊಂಡಿದ್ದು, ಹೆಣ್ಣು ಗಂಡೆಂಬ ಭೇದವನ್ನು ನಿರಾಕರಿಸಿ ಸಮಾನತೆಯನ್ನು ಆಧ್ಯಾತ್ಮ ಸ್ವಾತಂತ್ರ್ಯವನ್ನು ಸ್ತ್ರೀಯರು ಪಡೆದರು. ಎಲ್ಲಾ ವರ್ಗದ ಸ್ತ್ರೀಯರು ವಚನ ರಚನೆಯಲ್ಲಿ ತೊಡಗಿ ತಮ್ಮದೇ ಸಂವೇದನೆಗಳನ್ನು ಅಭಿವ್ಯಕ್ತಿಸಿದ್ದು ಗಮನಾರ್ಹ. ಅಕ್ಕ ಆಧ್ಯಾತ್ಮಿಕ ಗಂಡನಿಗೆ ಒಲಿದರೆ, ಉಳಿದ ವಚನ ಕಾರ್ತಿಯರು ಕೌಟುಂಬಿಕ ವ್ಯವಸ್ಥೆಯಲ್ಲಿದ್ದುಕೊಂಡೇ ಸಮಾನತೆಯನ್ನು ಸಾಧಿಸುವುದರ ಮೂಲಕ ಸ್ತ್ರೀಯರ ಗೌರವವನ್ನು ಹೆಚ್ಚಿಸಿ ಅವರ ವ್ಯಕ್ತಿತ್ವಕ್ಕೆ ಘನತೆಯನ್ನು ತಂದರು. ಆ ಮೂಲಕ ನವ ಸಮಾಜದ ಸೃಷ್ಟಿಗೆ ಕಾರಣಕರ್ತರಾದರು. ಸ್ತ್ರೀತತ್ವವನ್ನು ಸಮಾನ ನೆಲೆಯಲ್ಲಿ ಗ್ರಹಿಸಿದ ಮಾನವೀಯ ಕಾಳಜಿ, ಸಮಾನ ಮನೋಧರ್ಮ, ಆರಂಭಿಕ ವಚನಚಳವಳಿಯಲ್ಲೇ ಕಾಣಬಹುದು. ಉದಾ: ಜೇಡರ ದಾಸಿಮಯ್ಯನವರು "ಮಡದಿಯ ಪ್ರಾಣಕ್ಕೆ ಮೊಲೆಮುಡಿ ಇದ್ದಿತೇ?' ಒಡೆಯರ ಪ್ರಾಣಕ್ಕೆ ಇದ್ದಿತ್ತೇ ಯಜ್ಞೋಪವೀತ? ಕಡೆಯಲ್ಲಿದ್ದ ಅಂತ್ಯಜನು ಹಿಡಿದಿದ್ದನೇ ಪ್ರಾಣದಲ್ಲಿ ಹಿಡಿಗೋಲ?" ಎಂಬ ವಚನದ ಮೂಲಕ ಸ್ತ್ರೀ ಪುರುಷರ ಜೈವಿಕ ಭಿನ್ನತೆಗಳನ್ನು ನಿರಾಕರಿಸಿ 'ಆತ್ಮ' ತತ್ವದ ಮೂಲಕ ಸ್ತ್ರೀಪುರುಷ ಸಮಾನತೆಯನ್ನು ಪುರಸ್ಕರಿಸುತ್ತಾನೆ. ಹಾಗೆಯೇ ಅಕ್ಕ ಲೌಕಿಕ ಬಂಧನಗಳನ್ನು ನಿರಾಕರಿಸಿ ಆಧ್ಯಾತ್ಮಿಕ ಸ್ವಾತಂತ್ರ್ಯ ಮತ್ತು ಸಮಾನತೆಯನ್ನು ಬಯಸುತ್ತಾಳೆ. ಆಧ್ಯಾತ್ಮಿಕ ಮತ್ತು ಸಾಹಿತ್ಯಿಕ ಹಿನ್ನೆಲೆಯಲ್ಲಿ ಮಹಿಳೆಯರ ಅಪೂರ್ವ ಸಾಧನೆಗೆ ಮೇರುಗಲ್ಲು ವಚನಸಾಹಿತ್ಯ. ನವೋದಯ ಸಾಹಿತ್ಯರಚನೆಗೆ ನಮ್ಮ ಲೇಖಕರಿಗೆ ಪಾಶ್ಚಾತ್ಯ ಸಾಹಿತ್ಯ ಸಂಸ್ಕೃತಿ, ಹಾಗೂ ಭಾರತೀಯ ಸಾಮಾಜಿಕ, ರಾಜಕೀಯ ಬದಲಾವಣೆಗಳು ಪ್ರೇರಣೆಯಾದರೆ, ಇದೇ ಕಾಲಮಾನದ ಲೇಖಕಿಯರಿಗೆ ನವೋದಯ ಪೂರ್ವ ಮತ್ತು ನವೋದಯ ಲೇಖಕರ ಸಾಹಿತ್ಯ ದೇಶೀ ಚಳವಳಿ, ಪಾಶ್ಚಾತ್ಯ ಶಿಕ್ಷಣ ನೀತಿ, ಸ್ವಾತಂತ್ರ್ಯ ಸಮಾನತೆಯ ವಿಚಾರಗಳು ಪ್ರೇರಣೆಯಾಗಿವೆ. ಪ್ರಕೃತಿ, ದೇವರು, ಧರ್ಮ, ಆಧ್ಯಾತ್ಮದ ವಿಚಾರಗಳಲ್ಲಿ ಒಲವು ಮೂಡಿಸುವುದು, ಸಾಮಾಜಿಕ ಸುಧಾರಣೆ, ರಾಷ್ಟ್ರೀಯತೆಯ ಪ್ರಜ್ಞೆ ದೇಶಪ್ರೇಮ, ತ್ಯಾಗ, ಸ್ನೇಹ, ಸೌಹಾರ್ದತೆ, ಮೊದಲಾದ ಮೌಲ್ಯಗಳ ಹಿನ್ನೆಲೆಯಲ್ಲಿ ಬದುಕಿನ ಅನುಭವಗಳನ್ನು ಚಿತ್ರಿಸುವುದು ಇವೇ ಮೊದಲಾದ ಆಶಯಗಳು ಲೇಖಕರ ಸಾಹಿತ್ಯದಲ್ಲಿ ಕಂಡುಬಂದರೆ, ಲೇಖಕಿಯರು ಸಾಂಪ್ರದಾಯಿಕ ಅನಿಷ್ಟ ಪದ್ಧತಿಗಳನ್ನು ಖಂಡಿಸುವುದು, ಗಂಡು-ಹೆಣ್ಣಿನ ಸಂಬಂಧವನ್ನು ವಿವೇಚಿಸುವುದು, ಸಾಮಾಜಿಕ ಅಸಮಾನತೆಯ ವಿರುದ್ಧದ ಧ್ವನಿ, ಸ್ತ್ರೀ ಶಿಕ್ಷಣದ ಅರಿವನ್ನು ಮೂಡಿಸುವುದು ವ್ಯಕ್ತಿ ಸ್ವಾತಂತ್ರ್ಯಕ್ಕೆ ಒತ್ತಾಸೆ ನೀಡುವುದರ ಬಗ್ಗೆ ಪ್ರಗತಿ ಧೋರಣೆಯನ್ನು ಬಿಂಬಿಸಿದ್ದಾರೆ. ಇವುಗಳ ಅಭಿವ್ಯಕ್ತಿ, ಗದ್ಯ ಪದ್ಯಗಳೆರಡರಲ್ಲೂ ವಿಸ್ತರಿಸಿದೆ.

ಭಾರತೀಯ ಚಳವಳಿಯ ಸಿದ್ಧಾಂತಗಳಿಗೆ ಬದ್ಧವಾಗದೆ, ಆಯಾ ಕಾಲದ ಸಾಹಿತ್ಯಿಕ, ಸಾಮಾಜಿಕ ಚಳವಳಿಯ ತಾತ್ವಿಕ ವಿಚಾರಗಳಿಂದ ಪ್ರಭಾವಿತವಾಗಿದೆ. ಬಂಡಾಯದ ಸಂದರ್ಭವನ್ನು ಹೊರತುಪಡಿಸಿದರೆ ಲೇಖಕಿಯರು ಯಾವುದೇ ಚಳವಳಿಯ ಸಂಘಟನೆಯಲ್ಲಿ ಸಕ್ರಿಯವಾಗಿ ಪಾಲ್ಗೊಂಡು ಸಾಹಿತ್ಯ ರಚನೆಗೆ ತೊಡಗದೆ ಚಳವಳಿಯ ಹೊರಗಿದ್ದುಕೊಂಡು ಚಳವಳಿಯ ಆಶಯಗಳನ್ನು ಅಭಿವ್ಯಕ್ತಿಸಿದ್ದಾರೆ. ಸಾಮಾಜಿಕ ಸಮಸ್ಯೆಗಳಿಗೆ ಸ್ಪಂದಿಸಿದ್ದಾರೆ. ಇಪ್ಪತ್ತನೆಯ ಶತಮಾನದ ಆರಂಭದ ಲೇಖಕಿಯರಾದ ನಂಜನಗೂಡು ತಿರುಮಲಾಂಬ, ಆರ್. ಕಲ್ಯಾಣಮ್ಮ, ಗೌರಮ್ಮ, ಬೆಳಗೆರೆ ಜಾನಕಮ್ಮ, ಶ್ಯಾಮಲಾದೇವಿ ಮೊದಲಾದ ಲೇಖಕಿಯರು ತಮ್ಮ ವೈಯಕ್ತಿಕ ಬದುಕಿನ ದುರಂತಗಳನ್ನು, ಬಿಕ್ಕಟ್ಟುಗಳನ್ನು, ಸಮರ್ಥವಾಗಿ ಎದುರಿಸಿ, ಶಿಕ್ಷಣ, ಸಾಹಿತ್ಯ, ಪತ್ರಿಕೋದ್ಯಮ, ಪ್ರಕಾಶನ, ಸಮಾಜಸೇವೆ ಮುಂತಾದ ನೆಲೆಗಳಲ್ಲಿ ದುಡಿದವರು. ಇವರು ತಮ್ಮ ಕೃತಿಗಳಲ್ಲಿ ಸ್ತ್ರೀಯರ ಸ್ಥಾನಮಾನಗಳ ನೋವು-ನಲಿವುಗಳ ಕುರಿತು, ವಿವಾಹಪೂರ್ವ, ವಿವಾಹ ನಂತರದ ಲೈಂಗಿಕ ಸಂಬಂಧಗಳಿಂದ ಉಂಟಾದ ಸಮಸ್ಯೆಗಳ ಬಗ್ಗೆ  ಬಾಲ್ಯವಿವಾಹ, ವಿಧವಾ ವಿವಾಹ, ವರದಕ್ಷಿಣೆ, ಆಡಂಬರದ ವಿವಾಹಗಳಿಂದ ಆಗುವ ಸಮಸ್ಯೆಗಳನ್ನು ಕುರಿತು ವಿವೇಚಿಸಿರುವ ರೀತಿ ಪ್ರಗತಿಪರವಾಗಿದೆ. ಗೌರಮ್ಮ ವಿಶೇಷವಾಗಿ ಹೆಣ್ಣನ್ನು ಆಂತರಿಕ ಸೌಂದರ್ಯದಲ್ಲಿ ಕಂಡರಿಸಿದ್ದಾರೆ. ಆದರೆ ಸ್ತ್ರೀಯರ ಸ್ಥಾನಮಾನಗಳನ್ನು ಕುರಿತಂತೆ ಲೇಖಕಿಯರ ಬದಲಾದ ದೃಷ್ಟಿ ಸುಧಾರಣಾ ಮನೋಧರ್ಮದ ದೃಷ್ಟಿಯಿಂದ ಮೇಲೇರಲಿಲ್ಲ. ಆದರೂ ಶೈಕ್ಷಣಿಕ ಅವಕಾಶ, ಸ್ವಾತಂತ್ರ್ಯ ಇಲ್ಲದ ಅಂದಿನ ಸಂದರ್ಭದಲ್ಲಿ ಲೇಖಕಿಯರು ಸ್ತ್ರಿ ಜಗತ್ತಿನ ಸಮಸ್ಯೆಗಳನ್ನು ವಸ್ತುನಿಷ್ಠವಾಗಿ ಮತ್ತು ಅನುಭಾವಾತ್ಮಕವಾದ ಸಂವೇದನೆಯಲ್ಲಿ ಸರಳವಾದ ರೀತಿಯಲ್ಲಿ ಆತ್ಮೀಯವಾಗಿ ಚಿತ್ರಿಸಿದ್ದು ಆಶಾದಾಯಕ ಸಂಗತಿ. ಈ ಲೇಖಕಿಯರು ತಮ್ಮ ಸ್ತ್ರೀಪರ ಚಿಂತನೆಯಿಂದಾಗಿ ತಮ್ಮ ಸೀಮಿತ ಚೌಕಟ್ಟಿನಲ್ಲೆ ಸ್ವಂತಿಕೆಯನ್ನು ಮೆರೆದಿರುವುದು ಮುಂದೆ ವಿಸ್ತಾರವಾಗಿ ಬೆಳೆಯಲಿದ್ದ ಮಹಿಳಾ ಸಾಹಿತ್ಯಕ್ಕೆ ನಾಂದಿಯಾಯಿತು.

ಪ್ರಗತಿಶೀಲ ಲೇಖಕರು ಸಮಾಜ ಸುಧಾರಣಾ ಸಮಸ್ಯೆಗಳು, ಎಡಪಂಥೀಯ ಆಲೋಚನೆಗಳನ್ನು ಕುರಿತು ಅತ್ಯುತ್ಸಾಹದಲ್ಲಿ ಅಭಿವ್ಯಕ್ತಿಸುತ್ತಿದ್ದಾಗ, ಈ ತಲೆಮಾರಿನ ಲೇಖಕಿಯರು ಕೌಟುಂಬಿಕ ಆವರಣದ ಒಳಗೇ ಇದ್ದುಕೊಂಡು ತಮಗೆ ತಾವೇ ಮಿತಿಯ ಜಗತ್ತನ್ನು ಸೃಷ್ಟಿಸಿಕೊಂಡರು, ಈ ಕಾಲಘಟ್ಟದಲ್ಲಿ ಬಂದ ಬರಹಗಾರರು, ಸ್ವಾತಂತ್ರ್ಯ, ಸಮಾನತೆಯನ್ನು ಪ್ರತಿಪಾದಿಸುವ, ಎಲ್ಲಾ ಬಗೆಯ ಶೋಷಣೆಯ ವಿರುದ್ಧ ಪ್ರತಿಭಟಿಸುವ ಮನೋಭಾವದ ಜನಕ್ಕೆ ಸ್ಫೂರ್ತಿ ನೀಡುವಂಥ, ಮಾನವೀಯತೆಯನ್ನು ಎತ್ತಿಹಿಡಿಯುವಂಥ, ಜನೋಪಯೋಗಿ ಸಾಹಿತ್ಯ ರಚಿಸುವ ಆಶಯ, ಭಾರತೀಯ ಸಮಾಜದ ಜಾತಿವರ್ಗಗಳ ತಾರತಮ್ಯ, ದೀನ ದಲಿತರ ಶೋಷಣೆ, ಲಿಂಗಾಧಾರಿತ ಅಸಮಾನತೆ, ರಷ್ಯಾದ ಕ್ರಾಂತಿ ಮತ್ತು ಮಾರ್ಕ್ಸ್‌ನ ಸಿದ್ಧಾಂತ ಇಂಗ್ಲೆಂಡಿನ ಸಾಹಿತ್ಯ ಸಂದರ್ಭದಲ್ಲಾದ ಪ್ರಗತಿಪರ ಚಳವಳಿ, ಆಕಾಲದ ಸಾಹಿತ್ಯಿಕ, ಸಾಮಾಜಿಕ, ರಾಜಕೀಯ ಸಿದ್ಧಾಂತಗಳು ಪ್ರಭಾವ ಬೀರಿದ ವಿಚಾರಗಳಾಗಿವೆ. ಈ ಕಾಲಘಟ್ಟದಲ್ಲಿ ಲೇಖಕಿಯರ ಸಂಖ್ಯೆ ಏರಿತು. ಆದರೆ ಹೊಸ ಚಿಂತನೆ, ಅಭಿವ್ಯಕ್ತಿಯ ಕೊರತೆ ಅಲ್ಲಿತ್ತು. ಅದು ಒಳ್ಳೆಯದು,- ಇದು ಕೆಟ್ಟದ್ದು ಎಂಬ ಸುಲಭ ಸರಳೀಕರಣ ಹಾಗೂ ರಂಜನೀಯವಾದ ನೆಲೆಯಲ್ಲೇ ಬರೆದವರು ಹೆಚ್ಚು. ಇಂಥ ಸಾಮಾಜಿಕ ಸಂದರ್ಭದಲ್ಲೂ ಎಚ್ಚರಿಕೆಯಿಂದ ಬರೆದ ಅನೇಕ ಲೇಖಕಿಯರಲ್ಲಿ ಪ್ರಮುಖವಾಗಿ ತ್ರಿವೇಣಿ, ವಾಣಿ, ಡಾ|| ಅನುಪಮಾ ನಿರಂಜನ,

ಎಂ.ಕೆ. ಇಂದಿರಾ ಮೊದಲಾದವರನ್ನು ಗುರುತಿಸಬಹುದು.

ವಾಣಿಯವರದು ಸಾಂಸಾರಿಕ ಜಗತ್ತಿನ ನಿರೂಪಣೆ, ಪ್ರೇಮದ ದಿಗ್ವಿಜಯ, ಹೆಣ್ಣಿನ ಸಮಸ್ಯೆಗಳನ್ನು ಸುಲಭವಾಗಿ ಬಿಡಿಸಿಡುವುದು, ಉತ್ತರ ಕಂಡುಕೊಳ್ಳುವುದನ್ನು ಇವರ ಕಾದಂಬರಿಗಳು ಚಿತ್ರಿಸಿದರೆ ಎಂ.ಕೆ. ಇಂದಿರಾ ಸ್ತ್ರೀಪರ ಕಾಳಜಿಯ ಹಿನ್ನೆಲೆಯಲ್ಲಿ ನಿಂತು ತಮ್ಮ ದಟ್ಟ ಜೀವನಾನುಭವಗಳನ್ನು, ಕಲಾತ್ಮಕವಾಗಿ ಕಟ್ಟಿಕೊಟ್ಟಿರುವುದು ಅವರ ಸೃಜನಶೀಲತೆಗೆ ಸಾಕ್ಷಿ. ಇವರು ವಿಧವಾ ಸಮಸ್ಯೆ, ವೇಶ್ಯಾ ಸಮಸ್ಯೆ, ಬಡತನ, ವೈವಾಹಿಕ ಸಮಸ್ಯೆಗಳನ್ನು ವಸ್ತುವಾಗಿ ಸ್ವೀಕರಿಸಿದ್ದಾರೆ. ಶೋಷಣೆಯ ಮೂಲವಾಗಿರುವ ಪುರುಷ ಕೇಂದ್ರಿತ ಮೌಲ್ಯಗಳನ್ನು 'ಫಣಿಯಮ್ಮ' ದಂತಹ ಕಾದಂಬರಿಯಲ್ಲಿ ವ್ಯಾಖ್ಯಾನಿಸಿದ್ದಾರೆ. ತ್ರಿವೇಣಿಯವರ ಮಧ್ಯಮ, ಕೆಳಮಧ್ಯಮವರ್ಗದ ಹೆಣ್ಣು ಮಕ್ಕಳ ಸಾಂಸಾರಿಕ ಬದುಕಿನ ಸಮಸ್ಯೆಗಳು, ಹೆಣ್ಣಿನ ಮಾನಸಿಕ ಹೋರಾಟ, ವೇಶ್ಯಾ ಸಮಸ್ಯೆ, ಗುಂಪಿನ ಲೈಂಗಿಕ ದಬ್ಬಾಳಿಕೆ, ವಿಧವಾ, ವಿವಾಹೇತರ ಪ್ರೇಮ, ಮುಂತಾದವು ಕಾಣಿಸಿಕೊಳ್ಳುತ್ತವೆ. ಅನುಪಮಾ ಅವರ ಸ್ತ್ರೀಪಾತ್ರಗಳು ವ್ಯವಸ್ಥೆಯ ವಿರುದ್ಧ ಪ್ರತಿಭಟಿಸುತ್ತವೆ. ಅವರು ವೈಚಾರಿಕ ನೆಲೆಯಲ್ಲಿ ಚಿತ್ರಿಸುತ್ತಾರೆ. ವರ್ಗಸಂಘರ್ಷ, ಕಾರ್ಮಿಕರ ಸಮಸ್ಯೆ ಹಾಗೂ ಸಂಘಟನೆಯ ಅಗತ್ಯದ ಕುರಿತು ಸೈದ್ಧಾಂತಿಕವಾಗಿ ವಿವೇಚಿಸುತ್ತಾರೆ. ಸ್ತ್ರೀ ಸ್ವತಂತ್ರತೆ, ಆರ್ಥಿಕ ಅಸಮಾನತೆಯಂತಹ ಆಶಯಗಳನ್ನು ತಮ್ಮ ಕಾದಂಬರಿಗಳಲ್ಲಿ ಪ್ರತಿಪಾದಿಸಿದ್ದಾರೆ. ಈ ತಲೆಮಾರಿನ ಲೇಖಕಿಯರು ಮಹಿಳಾ ಶೋಷಣೆಯ ಒಳನೋಟಗಳನ್ನು ತಮ್ಮ ಕೃತಿಗಳಲ್ಲಿ ಬಿಚ್ಚಿಟ್ಟಿದ್ದಾರೆ. ನವೋದಯ ಹಾಗೂ ಪ್ರಗತಿಶೀಲ ಮಹಿಳಾ ಸಾಹಿತ್ಯದಲ್ಲಿ ಸ್ತ್ರೀ ಸ್ವತಂತ್ರತೆ, ಸಮಾನತೆ, ಸಾಂಪ್ರದಾಯಿಕ ಮೌಲ್ಯಗಳ ಸ್ವೀಕಾರ, ನಿರಾಕರಣೆಯ ಆಶಯಗಳು ಮತ್ತು ಸಾಮಾಜಿಕ ಆಶಯಗಳನ್ನು ಕಾಣುತ್ತೇವೆ. ಬದುಕಿನ ಸಾಮರಸ್ಯದ ಹಂಬಲ, ಜೀವನ ಪ್ರೀತಿ, ಮಾನವೀಯತೆ ಇದರ ಕೃತಿಗಳ ಆಶಯವಾಗಿದೆ.

ನವ್ಯ ಲೇಖಕರಿಗೆ ಪಾಶ್ಚಾತ್ಯ ಚಿಂತಕರು ಮತ್ತು ತತ್ವಜ್ಞಾನಿಗಳ ವಿಚಾರಗಳು ಪ್ರೇರಣೆಯಾದರೆ, ಈ ಸಂದರ್ಭದ ಲೇಖಕಿಯರಿಗೆ ನವ್ಯ ಲೇಖಕರ ಆಲೋಚನಾ ಕ್ರಮ ಪ್ರೇರಣೆಯಾಗಿದೆ. ನವ್ಯತೆಯ ಹೊಸಗಾಳಿಗೆ ತಮ್ಮನ್ನು ತೆರೆದುಕೊಂಡವರಲ್ಲಿ ವೀಣಾ ಶಾಂತೇಶ್ವರ ರಾಜಲಕ್ಷ್ಮಿಯವರು ಸ್ತ್ರೀಪಾತ್ರ ಚಿತ್ರಣಗಳನ್ನು ನವ್ಯ ಲೇಖಕರಿಗಿಂತ ಭಿನ್ನ ರೀತಿಯಲ್ಲಿ ಚಿತ್ರಿಸಿದ್ದಾರೆ. ಇವರ ಕತೆಗಳಲ್ಲಿ ಹೊರಗೆ ಚಿತ್ರಿತವಾಗುವ ಅಭಿವ್ಯಕ್ತಿಗಿಂತ ಹೆಣ್ಣಿನ ಮನೋವಲಯದಲ್ಲಿ ನಡೆಯುವ ದ್ವಂದ್ವ ಹೋರಾಟಗಳು, ಘರ್ಷಣೆಗಳು ಪ್ರಕಟಗೊಳ್ಳುತ್ತವೆಯಾದರೂ ಇವುಗಳ ಪ್ರಭಾವಗಳಿಗೆ ಒಳಗಾಗದೆ ತಮ್ಮ ಅಸ್ತಿತ್ವವನ್ನು ಗುರುತಿಸಿಕೊಂಡು ಸ್ವತಂತ್ರವಾಗಿ ಬದುಕಲು ಇಚ್ಛಿಸುತ್ತವೆ. ನವ್ಯ ಲೇಖಕ-ಲೇಖಕಿಯರಿಗೆ ಸಾಮಾಜಿಕ ಸಮಸ್ಯೆಗಳಿಗಿಂತಲೂ ವೈಯಕ್ತಿಕ ಸಮಸ್ಯೆಗಳೇ ಪ್ರಧಾನವಾಗಿ ಕಾಡಿವೆ. ಇವರ ಕೃತಿಗಳಲ್ಲಿ ಮನಶಾಸ್ತ್ರ ಮತ್ತು ಅಸ್ತಿತ್ವವಾದಕ್ಕೆ ಸಂಬಂಧಿಸಿದ ಚಿತ್ರಣಗಳನ್ನು ಕಾಣಬಹುದು.

ನವೋದಯ ಮತ್ತು ಪ್ರಗತಿಶೀಲ ಕಾಲಘಟ್ಟದ ಲೇಖಕಿಯರು ಸ್ತ್ರೀ ಶೋಷಣೆಯನ್ನು ಸಾಮಾಜಿಕ ನೆಲೆಯಲ್ಲಿ ಚಿತ್ರಿಸಿದರೆ, ನವ್ಯದ ಲೇಖಕಿಯರು ಲೈಂಗಿಕ ಸಂಬಂಧಗಳ ನೆಲೆಯಲ್ಲಿ ಚಿತ್ರಿಸಿದ್ದಾರೆ. ನವೋದಯ ಪ್ರಗತಿಶೀಲ ಲೇಖಕಿಯರಲ್ಲಿ ಪ್ರಗತಿಪರ ಧೋರಣೆ ಕಂಡುಬಂದರೆ ನವ್ಯ ಲೇಖಕಿಯರಲ್ಲಿ ಮುಕ್ತ ಬರವಣಿಗೆ ಇದೆ.

ನವೋದಯ, ಪ್ರಗತಿಶೀಲ, ನವ್ಯ ಸಂದರ್ಭದ ಮಹಿಳಾ ಸಾಹಿತ್ಯಕ್ಕಿಂತಲೂ ದಲಿತ ಬಂಡಾಯದ

ಮಹಿಳಾ ಸಾಹಿತ್ಯವು ಈ ಮೂರು ತಲೆಮಾರಿನ ಸಾಹಿತ್ಯದ ಆಶಯಗಳನ್ನು ಮೈಗೂಡಿಸಿಕೊಂಡು ಬೆಳೆಯತೊಡಗಿತು.

ಸ್ವಂತ ಅನುಭವಗಳನ್ನು ವ್ಯಕ್ತಪಡಿಸುವಾಗ ಸಂಸ್ಕೃತಿ ಹೆಚ್ಚು ವಸ್ತುನಿಷ್ಠವಾಗಿರುವುದಲ್ಲದೇ ಅಧಿಕೃತವಾಗಿರುತ್ತದೆ. ಈ ನೆಲೆಯಲ್ಲಿ ಕನ್ನಡ ಸಾಹಿತ್ಯಕ್ಕೆ ಹೊಸದಾಗಿರುವ ಇಲ್ಲಿನ ಅನುಭವಿಗಳು ಕೇವಲ ಮುಸ್ಲಿಂ ಜನಾಗಂದವರಿಗಷ್ಟೇ ಸೀಮಿತವಾಗದೆ ಬೇರೆಲ್ಲಾ ಸಮುದಾಯದ ಅನುಭವಗಳೂ ಆಗಿದೆ ಎಂಬುದನ್ನು ಇಲ್ಲಿ ದೃಢೀಕರಿಸಬಹುದು.

ಯಾವುದೇ ಧರ್ಮ ಮತ್ತು ಸಿದ್ಧಾಂತಗಳು ಸಮಾಜದ ಹಿತದೃಷ್ಟಿಗಾಗಿಯೇ ನಿರ್ಮಾಣವಾಗಿದ್ದರೂ ಮೂಲಭೂತವಾದಿಗಳು ಅದನ್ನು ತಮಗೆ ಅನುಕೂಲವಾಗುವಂತೆ ತಿರುಚಿಕೊಳ್ಳುತ್ತಿದ್ದಾರೆ. ಪ್ರಸ್ತುತ ಮುಸ್ಲಿಂ ಸಮಾಜ ತಾನು ಸಮಸ್ಯೆಗಳನ್ನು ಎದುರಿಸುತ್ತಿರುವುದು ಧರ್ಮದ ಕಾರಣದಿಂದಲ್ಲ. ಧರ್ಮ ಗ್ರಂಥವಾದ ಕುರಾನನ್ನು ತಮ್ಮ ಸ್ವಾರ್ಥಕ್ಕೆ ತಕ್ಕಂತೆ ಅರ್ಥೈಸಿಕೊಂಡಿರುವ ಮೂಲಭೂತವಾದಿಗಳಿಂದ ಎಂಬುದು ಸ್ಪಷ್ಟಾಗಿದೆ.

ಇಂತಹ ಸಂದರ್ಭದಲ್ಲಿ ಮುಸ್ಲಿಂ ಲೇಖಕರು ಹಿಂದೆ ಸರಿಯದೆ ಇಸ್ಲಾಂ ಧರ್ಮಗ್ರಂಥದ ಅವಮಾನವೀಯ ಅಂಶಗಳನ್ನು ದಾಖಲಿಸುತ್ತಾ ಆ ಮೂಲಕ ಮುಸ್ಲಿಂ ಪುರುಷ ಸಮುದಾಯ ದುರುಪಯೋಗಗೊಳ್ಳುತ್ತಿರುವುದನ್ನು ಸಾಹಿತ್ಯದ ಮೂಲಕ ಹೊರಕಾಣಿಸುತ್ತಾ ತಮ್ಮ ಆಕ್ರೋಶವನ್ನು ವ್ಯಕ್ತಪಡಿಸುತ್ತಾರೆ. ಸಾಹಿತ್ಯ ಮತ್ತು ಸಾಂಸ್ಕೃತಿಕ ಜಗತ್ತಿಗೆ ಮುಸ್ಲಿಂ ಧರ್ಮ ವಿರೋಧಿಯಾದ ಸಮಸ್ಯೆಗಳನ್ನು ನೇರವಾಗಿ ಸಂಘರ್ಷಾತ್ಮಕವಾಗಿ ಎದುರಿಸಲು ಅಸಾಧ್ಯವಾದಾಗ ಸಾಹಿತ್ಯ ಮಾಧ್ಯಮದ ಮೂಲಕ ಅವುಗಳನ್ನು ಮಾರ್ಮಿಕವಾಗಿ ಅನಾವರಣಗೊಳಿಸಲು ಪ್ರಯತ್ನಿಸಿದರು.

ದಲಿತ ಬಂಡಾಯದ ಆಶಯಗಳೇ ಇಂದಿನ ಮಹಿಳಾ ಸಾಹಿತ್ಯದ ಆಶಯಗಳಾಗಿದ್ದರೂ ಇಲ್ಲಿ ಸ್ತ್ರೀವಾದಿ ನೆಲೆಯೇ ಪ್ರಧಾನ, ದಲಿತ ಬಂಡಾಯ ಚಳವಳಿಯ ಹೊರಗಿದ್ದುಕೊಂಡೇ ಅನೇಕರು ಸ್ತ್ರೀವಾದಿ ಸಾಹಿತ್ಯ ರಚನೆ ಮಾಡುತ್ತಿರುವುದನ್ನು ಕಾಣಬಹುದಾಗಿದೆ. ಬದುಕನ್ನು ಸಾಮಾಜಿಕ ಅಸಮಾನತೆ, ಲಿಂಗ-ಅಸಮಾನತೆ, ಶೋಷಣೆಯ ಆಯಾಮಗಳನ್ನು ಓದುಗರ ಮುಂದಿಡುವುದನ್ನು ಗ್ರಹಿಸಬಹುದು. ಈ ಹಿನ್ನೆಲೆಯಲ್ಲಿ ಈ ತಲೆಮಾರಿನ ಲೇಖಕಿಯರು ಮಧ್ಯಮ ವರ್ಗದ ಅನುಭವಗಳೊಂದಿಗೆ ಕೆಳವರ್ಗದ, ಶೋಷಿತರ ಸಂವೇದನೆಗಳನ್ನು ಬಿಚ್ಚಿಟ್ಟಿದ್ದಾರೆ. ಮಧ್ಯಮವರ್ಗದ ಕೌಟುಂಬಿಕ ಸಂಬಂಧಗಳನ್ನು ಸ್ತ್ರೀ ಮನಸ್ಸಿನ ಸೂಕ್ಷ್ಮ ಭಾವನೆಗಳನ್ನು ಪ್ರಾದೇಶಿಕ ಭಾಷೆಯಲ್ಲಿ ಕಲಾತ್ಮಕವಾಗಿ ರೂಪಿಸುವ ವೈದೇಹಿ ಅವರು, ಪ್ರಾದೇಶಿಕ ಭಾಷೆಯ ಸೊಗಡಿನಿಂದ ದಲಿತ ಸಂಸ್ಕೃತಿಯ ಸಂವೇದನೆಗಳನ್ನು ತಮ್ಮ ಕಾದಂಬರಿಗಳಲ್ಲಿ ಸೆರೆ ಹಿಡಿದಿರುವ ಗೀತಾ ನಾಗಭೂಷಣ ಅವರೂ, ಲಂಬಾಣಿ ಸಂಸ್ಕೃತಿಯ ಸಂವೇದನೆಗಳನ್ನು ಚಿತ್ರಿಸಿರುವ ಬಿ.ಟಿ. ಲಲಿತಾ ನಾಯಕ್ ಅವರು, ಮುಸ್ಲಿಂ ಸಂಸ್ಕೃತಿಯ ಸಂವೇದನೆಗಳನ್ನು ಸಾರ್ವತ್ರಿಕರಣಗೊಳಿಸಿರುವ ಸಾರಾ ಅಬೂಬಕ್ಕರ್ ಮತ್ತು ಬಾನು ಮುಷ್ತಾಕ್ ಅವರು ಗಮನಸೆಳೆಯುತ್ತಾರೆ.

ಈ ಹಿನ್ನೆಲೆಯಲ್ಲಿ ಮುಸ್ಲಿಂ ಸಂವೇದನೆ ಹುಟ್ಟಿನಿಂದಲೂ ಮುಸ್ಲಿಂಮನಾದವನ, ಅಥವಾ ಮುಸ್ಲಿಂಮಳಾದವಳ ಅನುಭವವು ಉಳಿದವರ ಅನುಭವಗಳಿಗಿಂತ ಹೆಚ್ಚು ತೀವ್ರವಾದವುಗಳು. ಮುಸ್ಲಿಂ ಸಾಹಿತಿ ಗ್ರಹಿಸುವರೀತಿಗೂ, ಮುಸ್ಲಿಮೇತರ ಸಾಹಿತಿ ಗ್ರಹಿಸುವ ರೀತಿಗೂ ಸಾಕಷ್ಟು ವ್ಯತ್ಯಾಸ ಕಂಡುಬರುತ್ತದೆ.

'ಸ್ತ್ರೀವಾದ' ಅಥವಾ 'ಮಹಿಳಾ ಸಂವೇದನೆ' ಪಾಶ್ಚಾತ್ಯರಿಂದ ಭಾರತಕ್ಕೆ ಬಂದ ಅನೇಕ ವಿಚಾರಧಾರೆಗಳ ಸಾಲಿಗೆ ಸೇರುತ್ತದೆ. ೧೯೭೦ರಲ್ಲಿ ಭಾರತಕ್ಕೆ ಕಾಲಿಟ್ಟ ಈ ಚಿಂತನೆಯು ಲಿಂಗ, ಜಾತಿ, ಪುರುಷ ಪ್ರಾಧಾನ್ಯತೆ ಹಾಗೂ ಬಂಡವಾಳಶಾಹಿ ಸಮಾಜದ ವಿರುದ್ಧ, ರಾಜಕೀಯ ಹಕ್ಕುಗಳ ಹೋರಾಟವಾಗಿ ಹುಟ್ಟಿಕೊಂಡಿತು. ಅದು ಒಂದು ಪ್ರಮುಖ ಚಳವಳಿಯಾಗಿ ರೂಪುಗೊಂಡು ಸ್ತ್ರೀಯರ ಸಾಮಾಜಿಕ ಮತ್ತು ಸಾಂಸ್ಕೃತಿಕ ಸ್ಥಾನಮಾನಗಳಲ್ಲಿ ಅನೇಕ ಬದಲಾವಣೆಯನ್ನು ತರುವಲ್ಲಿ ಸಫಲವಾಯಿತಲ್ಲದೆ ಇದು ಜಗತ್ತಿನಾದ್ಯಂತ ಆಯಾ ದೇಶದ ಸಾಂಸ್ಕೃತಿಕ ಹಿನ್ನೆಲೆಯಲ್ಲಿ ಮಹಿಳೆಯ ಸ್ಥಾನಮಾನ ಮತ್ತು ಹಕ್ಕುಗಳಿಗಾಗಿ ಹೋರಾಡಿದ ಚರಿತ್ರೆಯನ್ನು ಒಳಗೊಂಡಿದ್ದು, ಇದರ ಅರ್ಥ, ಕಾಲ-ದೇಶಗಳಿಗೆ ತಕ್ಕಂತೆ ರೂಪು ಪಡೆದಿದೆ.

ಸ್ತ್ರೀ ವಿಮೋಚನಾ ಚಳವಳಿಯ ಒಡಲಲ್ಲೇ ಹುಟ್ಟಿಕೊಂಡ ಸ್ತ್ರೀವಾದಿ ವಿಮರ್ಶೆಯು ತಲತಲಾಂತರದಿಂದ ಸಾಹಿತ್ಯ ಕೃತಿಗಳಲ್ಲಿ ಹೆಣ್ಣನ್ನು ಪುರುಷ ಪ್ರಧಾನ ವ್ಯವಸ್ಥೆ ರೂಪಿಸಿದ ಕೆಲವೊಂದು ಮಾದರಿಗಳಿಗೆ ಸೀಮಿತಗೊಳಿಸಿ ಚಿತ್ರಿಸುತ್ತಿರುವುದನ್ನು, ತನ್ನ ಹಿತಕ್ಕೆ ತಕ್ಕಹಾಗೆ ಅವಳ ವ್ಯಕ್ತಿತ್ವವನ್ನು ತಿರುಚುವುದನ್ನು ಬಯಲು ಮಾಡುತ್ತದೆ. ಸ್ತ್ರೀಯ ಬೆಳವಣಿಗೆಗೆ ಅಗತ್ಯವಾದ ಇತ್ಯಾತ್ಮಕ ಮಾದರಿಗಳನ್ನು ರೂಪಿಸಬೇಕಾದ ಅಗತ್ಯವನ್ನು ಮನದಟ್ಟು ಮಾಡುತ್ತದೆ. ಈ ಹಿನ್ನೆಲೆಯಲ್ಲಿ ಕನ್ನಡದ ಲೇಖಕಿಯರ ಮೂಲ ಧೋರಣೆ ಪಾಶ್ಚಾತ್ಯ ಸ್ತ್ರೀವಾದದ ಪರಿಕಲ್ಪನೆಯನ್ನೇ ನೇರವಾಗಿ ಇಲ್ಲಿ ಕಂಡು ಕೊಳ್ಳುವ ಪ್ರಯತ್ನಕ್ಕಿಂತ ಭಿನ್ನವಾದುದು. ಅಂದರೆ ಪುರುಷ ಸಾಹಿತ್ಯ ಪರಂಪರೆಗೆ ಪ್ರತಿಸ್ಪರ್ಧಿಯಾಗಿ ಇನ್ನೊಂದು ಸ್ತ್ರೀ ಪರಂಪರೆಯನ್ನು ಸೃಷ್ಟಿಸುವ ಉದ್ದೇಶವಲ್ಲ. ಅದು ಹೆಣ್ಣಿನ ಅಂತರಂಗದ ಅನುಭವಕ್ಕೂ, ಬಾಹ್ಯ ಅನುಭವಕ್ಕೂ, ಸಾಂಸ್ಕೃತಿಕ ಆವರಣಕ್ಕೂ ಇರುವ ಸಂಬಂಧವನ್ನು ಬಹು ಎಚ್ಚರದಿಂದ ಪರಿಶೀಲಿಸುತ್ತದೆ. ಮಾನವೀಯ ಸಂಬಂಧದೊಳಗಿನ ಅಸಮಾನತೆಯನ್ನು ಸೂಕ್ಷ್ಮವಾಗಿ ವಿಶ್ಲೇಷಿಸಬಲ್ಲ ಸಂವೇದನಾ ನೆಲೆಗಳನ್ನು ಕಂಡುಕೊಳ್ಳುವ ಪ್ರಯತ್ನವಾಗಿದೆ. ಈ ಹಿನ್ನೆಲೆಯಲ್ಲಿ ಮಹಿಳೆಯರಿಂದ ರಚಿತವಾದ ಸಾಹಿತ್ಯ, ಮಹಿಳೆಯರನ್ನು ಕೇಂದ್ರವಾಗಿ ಉಳ್ಳ ಸಾಹಿತ್ಯ, ಮಹಿಳಾವಾದಿಯಾದ ಸಾಹಿತ್ಯ-ಹೀಗೆ ಮೂರು ನೆಲೆಗಳಲ್ಲಿ ಅರ್ಥಕಂಡುಕೊಳ್ಳುವಂತಹುದಾಗಿದೆ. ಈ ಎಲ್ಲಾ ಚಿಂತನೆಯಲ್ಲಿ ಚಳವಳಿಯ ಪ್ರೇರಣೆ ಪ್ರಭಾವಗಳು ಕನ್ನಡದ ನವ್ಯೋತ್ತರದ ಸಾಹಿತ್ಯದಲ್ಲಿ ಹೊಸ ಕ್ರಾಂತಿ ಮಾಡಿದವು.

ನವ್ಯೋತ್ತರ ಸಂದರ್ಭದಲ್ಲಿ ರಚಿತವಾದ ಮಹಿಳಾ ಸಾಹಿತ್ಯ ಪುರುಷ ಪ್ರಧಾನ ವ್ಯವಸ್ಥೆಯೊಂದಿಗೆ ಮೃದು ಧೋರಣೆ ತೋರದೆ, ಸ್ಥಾಪಿತ ಮೌಲ್ಯಗಳನ್ನು ಸುಧಾರಣಾಪರ ದೃಷ್ಟಿಯಿಂದ ಪರಿಗಣಿಸದೆ ಸಂಪೂರ್ಣ ಬದಲಾವಣೆ ಬಯಸುತ್ತದೆ. ಸ್ತ್ರೀ ಶೋಷಣೆಗೆ ಕಾರಣವಾದ ವ್ಯವಸ್ಥೆಯನ್ನೇ ಪ್ರತಿಭಟಿಸುವುದು, ತನ್ನಂತೆ ಶೋಷಣೆಗೆ ಒಳಗಾದವರನ್ನು, ಆಗುತ್ತಿರುವವರನ್ನು ಕುರಿತು ಆಲೋಚಿಸುವುದು ಸಾಂಪ್ರದಾಯಿಕ ಮೌಲ್ಯಗಳ ಬದಲಾಗಿ ಹೊಸ ಮೌಲ್ಯಗಳ ನಿರ್ಮಾಣಕ್ಕಾಗಿ ಸೈದ್ಧಾಂತಿಕವಾಗಿ ಹೋರಾಡುವುದು, ಸಾಮಾಜಿಕ, ರಾಜಕೀಯ, ಆರ್ಥಿಕ ಅಸಮಾನತೆಯ ಭ್ರಷ್ಟತೆಯನ್ನು ಚಿತ್ರಿಸುವುದು, ಶ್ರೀಮಂತರ ದಬ್ಬಾಳಿಕೆ, ಬಡವರ ಗೋಳು, ಅಸಹಾಯಕತೆ, ದಾಂಪತ್ಯದ ವಿಫಲತೆ ಪ್ರೀತಿ-ಪ್ರೇಮ, ಪ್ರಣಯ-ವಿರಹ ವರದಕ್ಷಿಣೆ, ಜಾತಿ ಸಮಸ್ಯೆ, ದುಡಿಯುವ ವರ್ಗದ ಹಾಗೂ ದಲಿತ ವರ್ಗದ ಶೋಷಣೆ ಭಿನ್ನ ಸಂಸ್ಕೃತಿಯ ಸಂವೇದನೆಗಳು- ಮೊದಲಾದ ವಿಷಯಗಳನ್ನು ಪ್ರತಿಪಾದಿಸುತ್ತದೆ. ವ್ಯಕ್ತಿಯ ಸರ್ವತೋಮುಖ ಬೆಳವಣಿಗೆಯನ್ನು ಬಯಸುತ್ತದೆ.

ಮುಸ್ಲಿಂ ಸಮುದಾಯದೊಳಗಿನ ಸಾಮಾಜಿಕ ನೆಲೆಯ ಸಮಸ್ಯೆಗಳು ಬಹುಪಾಲು ಎಲ್ಲಾ ಸಮುದಾಯಗಳಲ್ಲೂ ಕಂಡು ಬರುವಂಥವೇ ಆಗಿವೆ. ಹಾಗೆಯೇ ಅಲ್ಲಿಯ ಸಾಂಸ್ಕೃತಿಕ ಕಾರಣಕ್ಕಾಗಿ ಭಿನ್ನವಾದ ಸ್ವರೂಪವನ್ನು ಪಡೆದಿರುವುದನ್ನು ಕಾಣಬಹುದು. ಈ ಹಿನ್ನೆಲೆಯ್ಲಲಿ ಹಸಿವು, ಬಡತನ, ಅನಕ್ಷರತೆ, ಮೌಢ್ಯ ಮಂತಾದ ಸಮಸ್ಯೆಗಳು ಹಿಂದುಳಿದ ಸಮುದಾಯಗಳಲ್ಲಿ ಕಾಡಿದಂತೆ ಭಾರತೀಯ ಕೆಳ ಮಧ್ಯಮ ವರ್ಗದ ಮುಸ್ಲಿಮರನ್ನು ಕಾಡಿದೆ. ಈ ನೆಲೆಯಲ್ಲಿ ಧಾರ್ಮಿಕ, ಸಾಮಾಜಿಕ, ಆರ್ಥಿಕ ಮುಂತಾದ ಕ್ಷೇತ್ರಗಳಲ್ಲಿನ ಅಸಮಾನತೆಗಳೊಂದಿಗೆ ತಲಾಖ್ ಹಾಗೂ ಬಹುಪತ್ನಿತ್ವದಿಂದ ಉಂಟಾಗಬಹುದಾದ ಸ್ತ್ರೀ ಶೋಷಣೆ ಮುಂತಾದವುಗಳನ್ನು ಕಾಣಬಹುದು. ಇಂಥ ಸಮಸ್ಯೆಗಳು ತಮ್ಮ ನೆಲೆಯ ಬರಹಗಾರರಿಂದ ಹೊಸ ರೂಪವನ್ನು ಪಡೆದುಕೊಳ್ಳಲು ಸಾಧ್ಯವಾಯಿತೆನ್ನಬಹುದು. ಅದನ್ನು ಸಾರಾ ಅವರು ತಮ್ಮದೇ ಆದ ರೀತಿಯಲ್ಲಿ ವಿವೇಚಿಸಿದ್ದಾರೆ.

ಅನುಭಾವ ಸಾಹಿತ್ಯ ಸಂದರ್ಭದಿಂದ ಮುಸ್ಲಿಂ ಲೇಖಕರ ಪರಂಪರೆಯನ್ನು ಗುರುತಿಸಬಹುದು. ಡಾ. ಬಸವರಾಜ ಸಬರದ ಅವರ ಅಭಿಪ್ರಾಯದಂತೆ "ಶಿಶುನಾಳರ ಪದಗಳು ಹಿಂದೂ ಸಂಸ್ಕೃತಿಯ ಆಧ್ಯಾತ್ಮವಲಯ ಹಿಡಿದು ಹೋರಟರೆ, ನವ್ಯೋತ್ತರ ಸಂದರ್ಭದ ಮುಸ್ಲಿಂ ಲೇಖಕರ ಕೃತಿಗಳು ಮುಸ್ಲಿಂ ಸಂಸ್ಕೃತಿಯ ಬದುಕಿನ ಒಳನೋಟಗಳನ್ನು ಪರಿಚಯಿಸುತ್ತವೆ."[1] ಹೀಗೆ ಆಧ್ಯಾತ್ಮಿಕ ಕ್ಷೇತ್ರದಿಂದ ಆರಂಭಗೊಂಡ ಸಾಹಿತ್ಯ ಪರಂಪರೆ ಸಾಮಾಜಿಕ ಕ್ಷೇತ್ರದವರೆಗೂ ಹಬ್ಬಿರುವುದನ್ನು ಕಾಣಬಹುದು. ಪರಕೀಯ ಮನೋಭಾವದ ನೆಲೆಯಿಂದ, ಭಿನ್ನ ಸಂಸ್ಕೃತಿಯ ಕಾರಣದಿಂದ ರಹಸ್ಯವಾಗಿ ಉಳಿದಿದ್ದ ಮುಸ್ಲಿಂ ಸಮಾಜದ ಒಳಪದರಗಳು ತೆರೆದುಕೊಳ್ಳಲು ಆರಂಭವಾದ ದಲಿತ-ಬಂಡಾಯದ ಸಂದರ್ಭದಲ್ಲಿ ಮುಸ್ಲಿಂ ಸ್ತ್ರೀ ಸಂವೇದನೆ ಮೂಡಿ ಬಂದಿದ್ದು ಆ ಜಗತ್ತಿಗೆ ದೊಡ್ಡ ಆಘಾತವೇ ಸರಿ. ಈ ದೃಷ್ಟಿಯಿಂದ ಓದಿಗೆ ಅವಕಾಶವಿಲ್ಲದ ಸಂದರ್ಭದಲ್ಲಿ ಓದು ಕಲಿತ ಮುಸ್ಲಿಂ ಸಂಸ್ಕೃತಿಯ ಪರಿಸರವನ್ನು ಹಾಗೂ ತಾನು ಕಂಡು ಅನುಭವಿಸಿದ ಅನುಭವಗಳನ್ನು ಸಾಹಿತ್ಯದ ಮೂಲಕವಾಗಿ ಅಭಿವ್ಯಕ್ತಿಸಲು ಸಾರಾ ಅಬೂಬಕ್ಕರ್ ಮುಂದಾದುದನ್ನು ಕಾಣಬಹುದು. ಮುಸ್ಲಿಂ ಸಮಾಜದ ಮಹಿಳೆಯರ ಶೋಷಣೆಯ ಬಗ್ಗೆ ಬೆಳಕು ಚೆಲ್ಲುವ ಮೊದಲ ಪ್ರಯತ್ನವನ್ನು ಸಾರಾ ಅವರು ಮಾಡಿದರು. ದುರ್ಬಲರ, ಧ್ವನಿಯಿಲ್ಲದವರ ಧ್ವನಿಯಾಗಿ ಅರಿವಿನ ಅಗತ್ಯವನ್ನು ತಮ್ಮ ಕೃತಿಗಳ ಮೂಲಕ ಬಿಂಬಿಸಿದರು. ಮುಸ್ಲಿಂ ಮಹಿಳೆಯರ ಸಾಮಾಜಿಕ, ಕೌಟುಂಬಿಕ, ಹಾಗೂ ಪುರುಷ ಪ್ರಧಾನ ವ್ಯವಸ್ಥೆಯ ಸ್ವಾರ್ಥಿಗಳ, ಮೂಲಭೂತವಾದಿಗಳ ಟೊಳ್ಳುತನಗಳನ್ನು ಬಯಲಿಗೆಳೆಯುತ್ತಲೇ, ಮಹಿಳೆ ಕಂಡುಕೊಳ್ಳಬೇಕಾದ ಸಾಧ್ಯತೆಗಳ ಕಡೆಗೆ ಸೂಕ್ಷ್ಮವಾಗಿ ಕೈ ತೋರಿದ್ದಾರೆ.

ಧರ್ಮಸಂಬಂಧವಾದ ಸಂಗತಿಗಳ ವಿವರಗಳನ್ನು ಕುರಿತು ಬರೆದಾಗ ಇಸ್ಲಾಂನ ಮೂಲಭೂತವಾದಿ ಶಕ್ತಿಗಳು ಇದಕ್ಕೆ ಪ್ರತಿರೋಧ ಒಡ್ಡುವುದನ್ನು ಇಲ್ಲಿ ಸ್ಮರಿಸಬಹುದು. ಇಂಥ ವಿರೋಧವನ್ನು ಪ್ರತಿರೋಧಿಸಿ ಬರೆಯತೊಡಗಿದ್ದು ಗಮನಾರ್ಹವಾಗಿದೆ.

ಸಾರಾ ಅವರ ಅಭಿವ್ಯಕ್ತಿಯ ನೆಲೆಯನ್ನು ಅವರ ಸಾಹಿತ್ಯದ ಸ್ವರೂಪವನ್ನು ವಿವೇಚಿಸುವ ಮೊದಲಿಗೆ ಇಸ್ಲಾಂ ಧಾರ್ಮಿಕ ವಿಚಾರಗಳನ್ನು ಪರಿಚಯಮಾಡಿಕೊಳ್ಳುವುದು ಮುಖ್ಯ.

## ಅಧ್ಯಾಯ-೨
# ಇಸ್ಲಾಂ ಧಾರ್ಮಿಕ ಹಿನ್ನೆಲೆ

ಜಗತ್ತಿನ ನಾನಾ ನೆಲೆಗಳಲ್ಲಿನ ಮುಸ್ಲಿಂ ಸಮುದಾಯ ಆಯಾ ದೇಶಗಳ ಪದ್ಧತಿಗಳನ್ನು ಅನುಸರಿಸಿಕೊಂಡು ಬಂದಿರುವುದರಿಂದ ಮುಸ್ಲಿಮರ ಒಟ್ಟು ಬದುಕಿನ ಸ್ವರೂಪವನ್ನು ಪೂರ್ಣ ಪ್ರಮಾಣದಲ್ಲಿ ಸ್ಪಷ್ಟಪಡಿಸುವುದು ಅಸಾಧ್ಯ. ಆದರೆ ಧರ್ಮ ಸಂಬಂಧಿಯಾದ ಕೆಲವು ನೀತಿ-ನಿಯಮಗಳು, ನಾನಾ ಭಾಗಗಳಲ್ಲಿ ಪ್ರವಾದಿ ಪೈಗಂಬರ್ ಹಾಕಿಕೊಟ್ಟ ಸಂದೇಶದ ಆಧಾರದ ಮೇಲೆಯೇ ನಿಂತಿವೆ. ಈ ಹಿನ್ನೆಲೆಯಲ್ಲಿ ಇಸ್ಲಾಂ ಧರ್ಮ ದೈವ ಶ್ರದ್ಧೆಗೆ ಹೆಚ್ಚಿನ ಪ್ರಾಶಸ್ತ್ಯಕೊಡುತ್ತದೆ. ಯಾವುದೇ ವ್ಯವಹಾರವು ಸ್ವಾರ್ಥ, ಸ್ವೇಚ್ಛೆ ಮತ್ತು ಲಂಪಟತನಗಳ ಬಿಗಿ ಹಿಡಿತದಲ್ಲಿ ಸಿಲುಕದಂತೆ ಜಾಗರೂಕತೆ ವಹಿಸಿ ನೈತಿಕತೆಯ ಮಾರ್ಗದಲ್ಲಿಯೇ ನಡೆಯುವಂತೆ ನಿರ್ದೇಶಿಸುತ್ತದೆ. ಜಗತ್ತಿನ ಸೃಷ್ಟಿಕರ್ತನಾದ ಅಲ್ಲಾಹನ ಉಪಾಸನೆ ಮತ್ತು ಅನುಸರಣೆಯೇ ಮನುಷ್ಯನ ಮೂಲಭೂತ ಕರ್ತವ್ಯ ಎಂದು ಇದು ಸಾರಿದೆ. ಮಾನವರೆಲ್ಲರೂ ಮೂಲತಃ ಒಂದೇ ಪರಿವಾರದವರು ಎಂಬ ಕಲ್ಪನೆಯನ್ನು ಹೊಂದಿದ್ದು, ಈ ನೆಲೆಯಲ್ಲಿ ಪ್ರತಿಯೊಬ್ಬರೂ ಪರಸ್ಪರ ಸಹೋದರರು ಮತ್ತು ಸಮಾನರು ಎಂಬ ಸಂದೇಶ ಸಾರುತ್ತದೆ. ಸಾಮಾಜಿಕ ನೆಲೆಯಲ್ಲಿ ವಿವಾಹ,ಬಾಂಧವ್ಯ, ಊಟೋಪಚಾರ ಮುಂತಾದ ಹಲವು ವಿಚಾರಗಳಲ್ಲಿ ಜನರ ಮಧ್ಯೆ ಭೇದವೆಣಿಸದೆ ಪರಸ್ಪರ ಬೆರೆತು ಬದುಕುವ ಗುಣವನ್ನುಪ್ರತಿಪಾದಿಸಿದೆ. ಶುದ್ಧ ಚಾರಿತ್ರ್ಯ, ದೈವಭಕ್ತಿ, ಸದಾಚಾರಗಳಲ್ಲಿ ಹಿರಿತನವನ್ನು ಗುರುತಿಸುತ್ತದೆ. ಇಸ್ಲಾಂ ಬ್ರಹ್ಮಚರ್ಯೆಯನ್ನು ಸದಾಚಾರವೆಂದು ಪರಿಗಣಿಸುವುದಿಲ್ಲ. ಸ್ತ್ರೀ ಪುರುಷರ ವೈವಾಹಿಕ ಸಂಬಂಧಕ್ಕೆ ಪ್ರಾಶಸ್ತ್ಯ ನೀಡಿ ಸಾಮಾಜಿಕ ಹೊಣೆಗಾರಿಕೆಯನ್ನು ಅರಿತು ಅದರಂತೆ ಬದುಕಬೇಕೆಂಬ ಸಂದೇಶವಿದೆ. ಈ ನೆಲೆಯಲ್ಲಿ ಅಕ್ರಮ ಸಂಬಂಧಗಳನ್ನು ಅಪರಾಧವೆಂದು ಪರಿಗಣಿಸಿ ಇಂತಹದ್ದನ್ನು ತೆಡೆಗಟ್ಟುವ ಸಲುವಾಗಿ ಶಿಕ್ಷೆಯನ್ನು ವಿಧಿಸುವಂತಹ ಹಂತಕ್ಕೂ ತಲಪುವುದನ್ನು ಕಾಣಬಹುದು. ಉದಾ: ಅವಿವಾಹಿತ ವ್ಯಭಿಚಾರಿಗಳಿಗೆ ನೂರು ಛಡಿ ಏಟು ಬಾರಿಸಬೇಕೆಂದು ಹಾಗೂ ವಿವಾಹಿತ ವ್ಯಭಿಚಾರಿಗೆ ಕಲ್ಲೇಟಿನಿಂದ ವಧಿಸಬೇಕೆಂದು ಇಸ್ಲಾಂ ಧರ್ಮ ಆದೇಶಿಸುತ್ತದೆ. ಅಚ್ಚರಿಯೆಂದರೆ ಇಸ್ಲಾಂನ ಈ ಆದೇಶದ ಪ್ರಕಾರ ಇಂತಹ ದಂಡನೆಗೊಳಗಾದ ಯಾವುದೇ ದಾಖಲೆಗಳು ಇದುವರೆಗೂ ತಿಳಿದುಬಂದಿಲ್ಲದಿರುವುದು.[೪]

ಒಬ್ಬ ಪುರುಷ ನಾಲ್ಕು ಮಂದಿಗಿಂತ ಹೆಚ್ಚು ಪತ್ನಿಯರನ್ನು ಹೊಂದುವಂತಿಲ್ಲ. ಪತ್ನಿಯರ ಮಧ್ಯೆ ಪೂರ್ಣ ಸಮಾನತೆ ಪಾಲಿಸುವುದು ಮನುಷ್ಯನಿಂದ ಸಾಧ್ಯವಿಲ್ಲದ ವಿಚಾರ. ಆದ್ದರಿಂದ ಇಸ್ಲಾಂ ಧರ್ಮ ಈ ಬಗ್ಗೆ ಪುರುಷನನ್ನು ಅಸಾದ್ಯನಿರ್ಬಂಧಗಳಿಗೆ ಗುರಿಪಡಿಸಿಲ್ಲ. ಆದರೆ ಈ ಭಾವನಾತ್ಮಕ ಸಂಬಂಧವು ಇತರ ಪತ್ನಿಯರ ಲೈಂಗಿಕ ಬಯಕೆಯ ಈಡೇರಿಕೆ, ಅವರ ಜೀವನಾಂಶ ನೀಡಿಕೆ, ಅವರ ಲೌಕಿಕ ಅವಶ್ಯಕತೆಗಳ ಪೂರೈಕೆ, ಅವರ ಸಂರಕ್ಷಣೆ-ಇತ್ಯಾದಿ ವಿಷಯಗಳಲ್ಲಿ ಪತ್ನಿಯರ ಮಧ್ಯೆ ಪೂರ್ಣ ಸಮಾನತೆಯನ್ನು ಪಾಲಿಸುವುದಕ್ಕೆ ಯಾವ ರೀತಿಯಲ್ಲಿಯೂ ತಡೆಯಾಗಬಾರದೆಂದು ಇಸ್ಲಾಂ ಧರ್ಮ ಆದೇಶಿಸುತ್ತದೆ. ಇಸ್ಲಾಮೀ ವಾರೀಸು ನಿಯಮದಂತೆ ಎಲ್ಲಾ ಪತ್ನಿಯರಿಗೂ ಪತಿಯ ಸಂಪತ್ತಿನಲ್ಲಿ ಸಮಾನ ಪಾಲು ಇದೆ. ಈ ನಿಯಮಗಳನ್ನು ಪಾಲಿಸಲು ಸಾಧ್ಯವಿಲ್ಲದವರು ಬಹುಪತ್ನಿತ್ವದ ಹಕ್ಕನ್ನು ಕಳೆದುಕೊಳ್ಳುತ್ತಾರೆ[೫] ಎಂದು

ಸಾರುತ್ತದೆ. ಆದರೆ ಈ ನೆಲೆಯಲ್ಲಿ ವಾಸ್ತವವಾಗಿ ನಡೆಯುತ್ತಿರುವುದು ಬೇರೆಯೇ ಆಗಿರುವುದನ್ನು ಇಂದಿನ ಭಾರತೀಯ ಇಸ್ಲಾಂ ಧರ್ಮದಲ್ಲಿ ಕಾಣಬಹುದು. ಷಾಬಾನು ಪ್ರಕರಣ ಇದಕ್ಕೊಂದು ನಿದರ್ಶನ, ದಾಂಪತ್ಯ ಸಂಬಂಧದಲ್ಲಿ ಬಿರುಕು ಮೂಡಿ ಒಟ್ಟಿಗೆ ಬದುಕಲು ಅಸಾಧ್ಯವೆನಿಸುವ ಸಂದರ್ಭದಲ್ಲಿ ಇಸ್ಲಾಂ ಧರ್ಮ ಕೂಡ ತನ್ನದೇ ಆದ ಬಿಡುಗಡೆಯ ಹಾದಿಯನ್ನು ತೋರಿದೆ. ಆದೇನೆಂದರೆ ಪುರುಷನಿಗೆ ತಲಾಖ್ ಹಕ್ಕನ್ನು ಹಾಗೂ ಸ್ತ್ರೀಗೆ 'ಖುಲ್' ಆದ ಹಕ್ಕನ್ನು ನೀಡಿದೆ. ಹಲವು ಸಂದರ್ಭಗಳಲ್ಲಿ ಪರಿಸ್ಥಿತಿ ಬಿಗಡಾಯಿಸಿದಾಗ ಈ ಸಂಬಂಧವನ್ನು ಬೇರ್ಪಡಿಸಲು ಇಸ್ಲಾಂ ನ್ಯಾಯಾಲಯಕ್ಕೂ ಒಪ್ಪಿಸುತ್ತದೆಂಬುದನ್ನು ಸ್ಪಷ್ಟಪಡಿಸಬಹುದು. ಉದಾಹರಣೆಗೆ ಷಾಬಾನು ಪ್ರಕರಣ.

'1985 ಏಪ್ರಿಲ್ 23ರಂದು ಭಾರತದ ಮುಸ್ಲಿಂ ಮಹಿಳೆಯರ ಹಿತಾಸಕ್ತಿಯನ್ನು ಕಾಯುವಂತಹ ತೀರ್ಪೊಂದನ್ನು ಸರ್ವೋಚ್ಚ ನ್ಯಾಯಾಲಯ ನೀಡಿತು. ಮದುವೆಯಾದ ನಲವತ್ತೂರು ವರ್ಷಗಳ ನಂತರ ಗಂಡನಿಂದ ಹೊರದೂಡಲ್ಪಟ್ಟ ಎಪ್ಪತ್ತು ವರ್ಷ ವಯಸ್ಸಿನ ಶ್ರೀಮತಿ ಷಾಬಾನು ಜೀವನ ನಿರ್ವಹಣಾ ಭತ್ಯೆ (ನಾನ್-ನಾಫಿಕಾ)ಗಾಗಿ ಗಂಡನಿಗೆ ಅರ್ಜಿ ಹಾಕಿದಳು. ಈ ಸಂದರ್ಭದಲ್ಲಿ ಪತ್ನಿಗೆ ತಲಾಖ್ ಘೋಷಿಸಿದ್ದ ಗಂಡ ಮಹಮದ್ ಅಹಮದ್ ಖಾನ್ ಅರ್ಜಿಯನ್ನು ತಿರಸ್ಕರಿಸಿದ. ಕೋರ್ಟಿನಲ್ಲಿ ಇಪ್ಪತ್ತೈದು ರೂಪಾಯಿಗಳನ್ನು ಪತ್ನಿಯ ಜೀವನ ನಿರ್ವಹಣೆಗಾಗಿ ಕೊಡುವಂತೆ ತೀರ್ಮಾನವಾಯಿತು. ಗಂಡನ ಆದಾಯಕ್ಕೆ ಹೋಲಿಸಿದರೆ ಈ ಮೊತ್ತ ಬಹಳ ಕಡಿಮೆಯೆಂದು ಮಧ್ಯ ಪ್ರದೇಶ ಹೈಕೋರ್ಟಿಗೆ ಅಫೀಲು ಹೋದ ಷಾಬಾನುಗೆ ಹೈಕೋರ್ಟಿನಲ್ಲಿ 179.20 ರೂಪಾಯಿ ಹಣ ನೀಡಬೇಕೆಂದು ತೀರ್ಪು ದೊರೆಯಿತು. ಸ್ವತಃ ವಕೀಲನಾದ ಆಕೆಯ ಪತಿ ಸುಪ್ರೀಂಕೋರ್ಟಿಗೆ ಹೋಗಿ ವಿಚ್ಛೇದನ ಹೊಂದಿರುವ ಮುಸ್ಲಿಂ ಮಹಿಳೆಗೆ ನಿರ್ವಹಣಾ ಭತ್ಯೆ ಕೋಡಬೇಕಾದುದು 'ಇದ್ದತ್' ನ ಅವಧಿಯಲ್ಲಿ ಮಾತ್ರ ಎಂದು ವಾದಿಸಿದ. ಅವನ ವಾದವನ್ನು ತಳ್ಳಿಹಾಕಿದ ಸುಪ್ರೀಂಕೋಟ್ ಸಿ.ಪಿ.ಸಿ. 125ನೇ ಸೆಕ್ಷನ್ ಪ್ರಕಾರ ಷಾಬಾನುಗೆ ಜೀವನ ನಿರ್ವಹಣಾ ಭತ್ಯೆಯನ್ನು ಕೊಡಬೇಕೆಂದು ತೀರ್ಪು ಹೊರಡಿಸಿತು. ಆದರೆ ಈ ನಿರ್ಣಯವನ್ನು ವಿರೋಧಿಸಿ ಮುಸ್ಲಿಂ ವೈಯಕ್ತಿಕ ಕಾನೂನಿನ (ಷರಿಯತ್)' ಪರವಾಗಿ ದೇಶದಾದ್ಯಂತ ಪ್ರತಿಭಟನೆಗಳು ನಡೆದವು. ಮಗನ ಒತ್ತಾಯ ಮತ್ತು ಬೆಂಬಲದಿಂದ ಸುಪ್ರೀಂ ಕೋರ್ಟಿನವರೆಗೂ ಅಫೀಲು ಕೊಂಡೊಯ್ದ ಷಾಬಾನು ಮೇಲೆ ಮುಸ್ಲಿಂ ನಾಯಕರು ತಿರುಗಿ ಬಿದ್ದರು. ಇಂಧೂರಿನ ಒಂದುವರೆ ಲಕ್ಷ ಮುಸ್ಲಿಮರು ಅವಳಿಗೆ ಸಾಮಾಜಿಕ ಮತ್ತು ಧಾರ್ಮಿಕ ಬಹಿಷ್ಕಾರ ಹಾಕಿದರು.[a] ಇಲ್ಲಿ ಇಸ್ಲಾಂನ ಪುರುಷ ಪ್ರಧಾನ ವ್ಯವಸ್ಥೆ ಮತ್ತು ಅಲ್ಲಿನ ವೈಯಕ್ತಿಕ ಕಾನೂನುಗಳು ಧರ್ಮಗ್ರಂಥವನ್ನು ತನ್ನ ಅನುಕೂಲಕ್ಕೆ ತಕ್ಕಂತೆ ಅರ್ಥೈಸಿಕೊಂಡು ಧರ್ಮ ನಿಯಮಗಳನ್ನು ಉಲ್ಲಂಘಿಸಿ ಅವಳನ್ನು ಶೋಷಣೆಗೆ ಒಳಗುಮಾಡುತ್ತಿರುವುದನ್ನು ವಾಸ್ತವದ ನೆಲೆಯಲ್ಲಿ ಕಾಣುತ್ತೇವೆ. ಇಲ್ಲಿ ನ್ಯಾಯಾಲಯದ ಮೊರೆ ಹೊಕ್ಕರೂ ಷಾಬಾನುಗೆ ಯಾವುದೇ ಪರಿಹಾರ ದೊರೆಯಲಿಲ್ಲ. ನಂತರದಲ್ಲಿ ಅವರ ಬದುಕು ಅತಂತ್ರವಾದದ್ದು ಎಲ್ಲರಿಗೂ ತಿಳಿದ ವಿಷಯವಾಗಿದೆ.

ಇಸ್ಲಾಂ ತನ್ನದೇ ಆದ ಧಾರ್ಮಿಕ ಚೌಕಟ್ಟಿನ ಒಳಗೆ ಪುನರ್ ವಿವಾಹದ ಹಕ್ಕನ್ನು ನೀಡಿದೆ. ಈ ನೆಲೆಯಲ್ಲಿ 'ತಲಾಖ್' ನ ಸರಿಯಾದ ಕ್ರಮವೆಂದರೆ ಸಂಗ್ರಹರೂಪದಲ್ಲಿ 'ಸ್ತ್ರೀಗೆ ಅವಳು ಪುಷ್ಪವತಿಯಾಗಿರದ ಶುದ್ಧಾವಸ್ಥೆಯಲ್ಲಿ ಒಂದು ಸಲ, ಪುಷ್ಪವತಿಯಾದ ನಂತರ ತಲಾಖ್ ಕೊಡಬೇಕಾದ ಸನ್ನಿವೇಶ

ನಿರ್ಮಾಣವಾದಲ್ಲಿ ದ್ವಿತೀಯ ತಲಾಖ್ ಅನ್ನು ಕೊಡಬಹುದಾಗಿದೆ. ಇಂತಹ ಸಂದರ್ಭದಲ್ಲಿ ಇದ್ದತ್‌ನ ಅವಧಿ ಪೂರ್ಣವಾಗುವುದರೊಳಗೆ ಅಥವಾ ನಂತರವೂ ಪರಸ್ಪರರು ಒಪ್ಪಿದಲ್ಲಿ ನಿಖಾ ಮಾಡಿಕೊಳ್ಳಲು ಅವಕಾಶವಿದೆ. ಇದನ್ನು ಮೀರಿ ಮೂರನೆಯ ಶುದ್ಧಾವಸ್ಥೆಯಲ್ಲಿ ತೃತೀಯ ತಲಾಖನ್ನು ಕೊಟ್ಟದ್ದೇ ಆದಲ್ಲಿ ಪತಿಯಾದವನು ಆಕೆಯನ್ನು ಮತ್ತೊಮ್ಮೆ ಸ್ವೀಕರಿಸುವ ಅರ್ಹತೆಯನ್ನು ಕಳೆದುಕೊಳ್ಳುತ್ತಾನೆ. ಎಂಬುದನ್ನು ಸ್ಪಷ್ಟಪಡಿಸಲಾಗಿದೆ. ಈ ನೆಲೆಯಲ್ಲಿ ಪತಿ-ಪತ್ನಿಗೆ ತಲಾಖ್ ಈಗಾಗಲೇ ಕೊಡಲಾಗಿದ್ದು ಇದ್ದತ್ ಅವಧಿಯನ್ನು ಪೂರ್ಣಗೊಳಿಸಿದ್ದು ಸ್ತ್ರೀ ತನಗಿಷ್ಟಬಂದ ಪುರುಷನೊಂದಿಗೆ ನ್ಯಾಯೋಚಿತ ರೀತಿಯಲ್ಲಿ ನಿಖಾ ಮಾಡಿಕೊಳ್ಳಲು ನಿರ್ಧರಿಸಿದರೆ ಪುರುಷನಾದವನು ಅಡ್ಡಿಪಡಿಸಬಾರದೆಂದು ಇಸ್ಲಾಂ ಆದೇಶಿಸಿರುವುದನ್ನು ಕಾಣಬಹುದಾಗಿದೆ.

ಆದರೆ ಇಸ್ಲಾಂನ ಈ ನಿಯಮಗಳನ್ನು ಪ್ರಸ್ತುತ ದಿನಗಳಲ್ಲಿ ಮುಸ್ಲಿಂ ಸಮಾಜ ದುರುಪಯೋಗಪಡಿಸಿಕೊಳ್ಳುತ್ತಿದೆ. ಆದ್ದರಿಂದ ಮುಸ್ಲಿಂ ಮಹಿಳೆಯರ ಸ್ಥಿತಿಗತಿಗಳು ಶೋಚನೀಯವಾಗಿವೆ. ಇಸ್ಲಾಂ ವಿಧಿನಿಯಮಗಳ ತಿಳುವಳಿಕೆಯಿಲ್ಲದ ಜನಸಾಮಾನ್ಯರು, ಜನತೆಗೆ ಸರಿಯಾದ ರೀತಿಯಲ್ಲಿ ತಿಳಿಯಪಡಿಸದ ಪಂಡಿತರು ಹಾಗೂ ದುರುಪಯೋಗವಾಗಲು ಪ್ರೇರೇಪಿಸುವ ನ್ಯಾಯವಾದಿಗಳು ಇದಕ್ಕೆ ಹೊಣೆಗಾರರಾಗುತ್ತಾರೆ.

ವಾಸ್ತವವಾಗಿ ಈ ಹೇಳಿಕೆಯನ್ನು ಸರಿಯೆಂದೇ ತಿಳಿಯಬಹುದು. ಈ ಸಂಬಂಧವಾಗಿ ನಡೆಯುವ ಹೆಣ್ಣಿನ ಶೋಷಣೆಯು ಪ್ರಗತಿಪರವಾಗಿ ಆಲೋಚಿಸುವ ಬರಹಗಾರರನ್ನು ಕಾಡಿರುವುದನ್ನು ಕಾಣಬಹುದು. ಈ ಕಾರಣದಿಂದಾಗಿ ಮುಸ್ಲಿಂ ಮಹಿಳೆ ಅನುಭವಿಸಬೇಕಾದ ಹಿಂಸೆ, ವೇದನೆ ಮತ್ತು ಶೋಷಣೆಯ ಒಳನೋಟಗಳನ್ನು ಸಾರಾ ಅವರು ಅತ್ಯಂತ ಕಾಳಜಿಯಿಂದ ವಿಶ್ಲೇಷಿಸಿದ್ದಾರೆ. ದಾಂಪತ್ಯದ ಹೊರತಾಗಿ ಸ್ತ್ರೀ-ಪುರುಷರಿಬ್ಬರಿಗೂ ದೇಹ ಪ್ರದರ್ಶನದ ನಡುವೆ ನಿಯಮಗಳಿವೆ. ಮರ್ಯಾದೆಗೆ ಇಸ್ಲಾಂ ಹೆಚ್ಚು ಮಹತ್ವ ನೀಡುತ್ತದೆ. ಹೆಣ್ಣಿಗೆ ಪರ್ದಾನಿಯಮವನ್ನು ಕಡ್ಡಾಯಗೊಳಿಸಿದೆ. ಇಸ್ಲಾಂನಲ್ಲಿ ಪುರುಷನೇ ಪ್ರಧಾನವಾಗಿದ್ದು ಮಹಿಳೆಯು ಪತಿಯ ಆದೇಶವನ್ನು ಪಾಲಿಸಿಕೊಂಡು ಮನೆಯಲ್ಲಿದ್ದುಕೊಂಡೇ ಪುರುಷನಿಗೆ ಸಮಾನವಾದ ಪುಣ್ಯವನ್ನು ಸಂಪಾದಿಸಬಹುದೆಂದು ತಿಳಿಸುತ್ತದೆ.

ಆಧ್ಯಾತ್ಮಿಕ ನೆಲೆಯಲ್ಲಿ ಅಲ್ಲಾಹನಲ್ಲದೆ ಅನ್ಯಾ ಆರಾಧ್ಯನಿಲ್ಲವೆಂದು ಮಹಮದ್ ಪೈಗಂಬರ್ ಅಲ್ಲಾಹನ ಪ್ರವಾದಿಯಾಗಿರುವನೆಂದು ನಂಬುವುದು. ದಿನಕ್ಕೆ ಐದು ಸಾರಿ ನಮಾಜು ಮಾಡುವುದು, ರಂಜಾನ್ ತಿಂಗಳಲ್ಲಿ ಉಪವಾಸ ವ್ರತ ಆಚರಿಸುವುದು, ಝಕಾತ್ ನೀಡುವುದು, ಜೀವನದಲ್ಲಿ ಒಮ್ಮೆಯಾದರೂ ಹಜ್‌ಯಾತ್ರೆ ಕೈಗೊಳ್ಳುವುದು ಅತ್ಯಂತ ಮಹತ್ವವಾದವು. ಇಸ್ಲಾಂ ಧರ್ಮ ಆರ್ಥಿಕ ಸಮಾನತೆಯನ್ನು ಒತ್ತಿ ಹೇಳುತ್ತದೆ. ಉಳ್ಳವರು ತಮ್ಮ ಆದಾಯದ ಒಂದು ಭಾಗವನ್ನು ಪ್ರತಿ ವರ್ಷವೂ ಬಡವರಿಗೆ, ಸಾಲದ ಸಂಕಷ್ಟದಲ್ಲಿರುವವರಿಗೆ, ಧರ್ಮದ ಕಾರ್ಯಗಳಿಗೆ ಕಡ್ಡಾಯವಾಗಿ ಝಕಾತ್ ರೂಪದಲ್ಲಿ ನೀಡಲೇಬೇಕೆಂದು ನಿರ್ದೇಶಿಸಿದೆ. ಈ ಎಲ್ಲಾ ವಿಚಾರಗಳ ಹಿನ್ನೆಲೆಯಲ್ಲಿ ಕೆಲವು ಸೂಕ್ಷ್ಮವಾದ ಬದಲಾವಣೆಗಳನ್ನು ಹೊರತುಪಡಿಸಿ ಉಳಿದಂತೆ ಏಕತೆಯ ಸ್ವರೂಪವನ್ನು ಕಾಣಬಹುದು. ಅವುಗಳೆಂದರೆ ವಸ್ತ್ರ ಸಂಹಿತೆ, ಮನೆ ಒಡೆತನ, ಸಂಬಂಧ ಬೆಳೆಸುವಿಕೆ, ಆಧ್ಯಾತ್ಮಿಕತೆ, ಪ್ರಾರ್ಥನೆ ಮುಂತಾದ ಆಚಾರಗಳು ಅಲ್ಲಾಹನ ಏಕಸ್ವಾಮ್ಯ ಮತ್ತು ಮೂರು ತತ್ವಗಳಾದ ಏಕದೇವತ್ವ ಪ್ರವಾದಿತ್ವ ಮತ್ತು ಪ್ರಾತಿನಿಧಿತ್ವ ಮುಂತಾದುವುಗಳಾಗಿವೆ.

ಕರ್ನಾಟಕದ ಸಂದರ್ಭದಲ್ಲಿ ಇಸ್ಲಾಂ ಸುಮಾರು ೮೦೦ ವರ್ಷಗಳ ಇತಿಹಾಸದ ಪರಂಪರೆಯನ್ನು ಹೊಂದಿದೆ. ಇದರ ಜೊತೆಜೊತೆಯಲ್ಲೇ ಇಸ್ಲಾಂ ಧರ್ಮದ ಅನುಭಾವದ ಶಾಖೆಯಾದ ಸೂಫಿವಾದವು ಭಾರತವನ್ನು ಪ್ರವೇಶಿಸಿದ್ದು, ಇಲ್ಲಿನ ವಿವಿಧ ಭಕ್ತಿ ಪಂಥಗಳ ಒಡನಾಟವನ್ನು ಹೊಂದಿದೆ. ಉದಾಹರಣೆಗೆ: ಕಬೀರ್ ಪಂಥ, ಮಹಾರಾಷ್ಟ್ರದ ಮಾನುಭವ ಪಂಥ, ಬಂಗಾಲದ ಸತ್ನಾಮಿಪಂಥ, ಕಾಶ್ಮೀರದ ಶೈವಯೋಗಿ ಪಂಥ ಹಾಗೂ ಕರ್ನಾಟಕದ ದಾಸರು ಮತ್ತು ಶರಣರ ಭಕ್ತಿ ಪಂಥಗಳನ್ನು ಹೆಸರಿಸಬಹುದು. "ಸೂಫಿಪಂಥ" ಇಸ್ಲಾಂ ಧರ್ಮದ ಸುಧಾರಣಾ ಮತ ಅದರ ಕರ್ಮಕಾಂಡವನ್ನೇ ಪ್ರತಿಭಟಿಸಿ ನಿಂತ ವಿಶಾಲ ಹಾಗೂ ಉದಾರ ತತ್ವಗಳನ್ನೊಳಗೊಂಡ ವ್ಯಾಪಕ ಮತವೆಂದು ಪ್ರಸಿದ್ಧವಾಗಿದೆ"[೬] ಇಸ್ಲಾಂ ಧರ್ಮದಲ್ಲಿ ಸಿದ್ಧಾಂತಗಳಿಗೆ ಆಚಾರ ಸಂಪ್ರದಾಯಗಳಿಗೆ ಪ್ರಾಮುಖ್ಯತೆ ಇದ್ದರೆ, ಸೂಫಿ ಧರ್ಮದಲ್ಲಿ ಅನುಭಾವಕ್ಕೆ ಹೆಚ್ಚಿನ ಪ್ರಾಧಾನ್ಯವಿದೆ. ಇಲ್ಲಿ ಮುಖ್ಯವಾಗಿ ಮಿಷನರಿ, ಜಹಾದಿ ಹಾಗೂ ರಾಜಗುರುಗಳ ರೂಪದಲ್ಲಿ ಸೂಫಿಗಳು ಇಸ್ಲಾಂ ಮೂಲತತ್ವವನ್ನು ಭಿನ್ನವಾದ ನೆಲೆಯಲ್ಲಿ ಅರ್ಥೈಸಿದ್ದಾರೆ. ಈ ಹಿನ್ನೆಲೆಯಲ್ಲಿ ಅಮೀನುದ್ದೀನ್ ಸಾಹಿಬಣ್ಣತಾತ, ಕಾಡಸಿದ್ದೇಶ್ವರ, ಶಿಶುನಾಳ ಷರೀಫರು, ಹಸನ್‌ಸಾಬ್, ಮಾಣಿಕಪ್ರಭು, ತಿಂತಿಣಿ ಮೋನಪ್ಪ ಮುಂತಾದವರನ್ನು ಸ್ಮರಿಸಬಹುದು.

ಕಾಫಿರರ ಭಾಷೆ ಎಂದು ಭಾವಿಸಿದ್ದ ಕನ್ನಡವನ್ನು ಮುಸ್ಲಿಮರು ತಮ್ಮ ಸೃಜನಶೀಲ ಅಭಿವ್ಯಕ್ತಿಯ ಪ್ರಕ್ರಿಯೆಯಲ್ಲಿ ತೊಡಗಿಸಿಕೊಂಡಿದ್ದು ಹೊಸ ತಲೆಮಾರಿನ ಸಂದರ್ಭದಲ್ಲಿ. ಬಹಳ ವರ್ಷ ಕನ್ನಡ ನಾಡಿನ ಜನಜೀವನದಲ್ಲಿ ಒಂದಾಗಿ ಜೀವನ ನಡೆಸಿದ ಮುಸ್ಲಿಮರು ಕನ್ನಡ ಸಾಹಿತ್ಯಕ್ಷೇತ್ರದಲ್ಲಿ ತಮ್ಮನ್ನು ಗುರುತಿಸಿಕೊಳ್ಳುವುದರ ಮೂಲಕ ಸಾರ್ವತ್ರಿಕ ನೆಲೆಯಲ್ಲಿ ಹೊರತಾಗಿದ್ದ ಮುಸ್ಲಿಂನ ಸಾಮಾಜಿಕ ಮತ್ತು ಸಾಂಸ್ಕೃತಿಕ ಲೋಕವನ್ನು ಸಮಷ್ಟಿಯ ಮುಂದೆ ತೆರೆದಿಡುವುದರ ಮೂಲಕ ಈ ನಾಡಿನ ಸಾಂಸ್ಕೃತಿಕ ಬದುಕಿನಲ್ಲಿ ಒಂದಾದದ್ದು ಗಮನಾರ್ಹಸಂಗತಿ. ಈ ಹಿನ್ನೆಲೆಯಲ್ಲಿ ಮೊದಲ ಹಂತದ ಬರಹಗಾರರಲ್ಲಿ ಪ್ರಮುಖವಾಗಿ ಬಂದ ಎಂ. ಅಕಬರಅಲಿ, ಕೆ.ಎಸ್. ನಿಸಾರ್ ಅಹಮದ್ ಮುಂತಾದವರನ್ನು ಕಾಣಬಹುದು. ಇವರು ಮುಸ್ಲಿಂ ಧರ್ಮದ ಸಾಮಾಜಿಕ, ಸಾಂಸ್ಕೃತಿಕ ಒಳನೋಟಗಳನ್ನು ಚಿತ್ರಿಸುವುದಕ್ಕಿಂತ ಸಮಷ್ಟಿ ಬದುಕಿನ ಬಗ್ಗೆ, ನಾಡು-ನುಡಿ-ಭಾವೈಕ್ಯತೆ, ರಾಷ್ಟ್ರೀಯತೆ ಈ ಪರಿಕಲ್ಪನೆಗಳ ನೆಲೆಯಲ್ಲಿಸಾಹಿತ್ಯ ಕೃಷಿ ಮಾಡಿರುವುದನ್ನು ಕಾಣುತ್ತೇವೆ. ಇವರು ಭಿನ್ನ ಭಿನ್ನವಾದ ಆಯಾಮಗಳಲ್ಲಿ ತಮ್ಮನ್ನು ತಾವು ಸಾಹಿತ್ಯ ಕೃಷಿಯಲ್ಲಿ ದುಡಿಸಿಕೊಂಡರೂ ತಮ್ಮ ಸಂಸ್ಕೃತಿಗೆ ಹತ್ತಿರವಾದ ಕೆಲವು ಸೂಕ್ಷ್ಮ ಒತ್ತಡಗಳು ಕಾಡಿರುವುದನ್ನು ನಿಸಾರರ ಕವಿತೆಗಳಲ್ಲಿ ಕಾಣಬಹುದು. 'ಅಮ್ಮ, ಆಚಾರ, ನಾನು', 'ನಾನೆಂಬ ಪರಕೀಯ', 'ನಿಮ್ಮೊಡನಿದ್ದೂ ನಿಮ್ಮಂತಾಗದೆ', 'ಸಂಜೆ ಐದರ ಮಳೆ', 'ರಂಗೋಲಿ ಮತ್ತು ಮಗ' ಮೊದಲಾದ ಕವಿತೆಗಳು ಬಹುಸಂಖ್ಯಾತರೊಡನೆ ಅಲ್ಪಸಂಖ್ಯಾತರು ಹೇಗೆ ನಡೆದುಕೊಂಡರೂ ಕಷ್ಟವೇ. ಎಷ್ಟೇ ಸಂಯಮ ತೋರಿದರೂ ತಗ್ಗಿ ಬಗ್ಗೆ ನಡೆದರೂ ಕೂಡ ಅಲ್ಪಸಂಖ್ಯಾತ ಪರಕೀಯನಾಗಿಯೇ ಉಳಿಯುತ್ತಾನೆ ಎಂಬ ವಿಚಾರ ಧ್ವನಿತವಾಗಿದೆ. ಬಹುಸಂಖ್ಯಾತರೊಡನೆ ನಾವು ಬದುಕುತ್ತಿದ್ದೇವೆ. ಅವರು ಒಪ್ಪುವ ಆಶಯಗಳೊಡನೆ ತಮ್ಮನ್ನು ಗುರುತಿಸಿಕೊಳ್ಳುವುದು ಅನಿವಾರ್ಯ ಎಂಬುದು ಆಗಿನ ಮುಸ್ಲಿಂ ಲೇಖಕರನ್ನು ಕಾಡಿರಬಹುದು. ಅಥವಾ ತಮ್ಮ ಸಮಾಜದ ಸಾಂಸ್ಕೃತಿಕ ಪರಂಪರೆಯನ್ನು ಅನ್ಯಧರ್ಮೀಯ ಸಮಾಜಕ್ಕೆ ಪರಿಚಯಿಸಬೇಕೆಂಬ ಅಗತ್ಯ ಕಾಡದೇ ಇರಬಹುದು. ಅಥವಾ ಇಂಥ ಪ್ರಯತ್ನದಿಂದ ಮುಸ್ಲಿಂ ಮೂಲಭೂತವಾದಿಗಳ ಕೆಂಗಣ್ಣಿಗೆ ಗುರಿಯಾಗಬೇಕಾದ ಆತಂಕವಿರಬಹುದು.

ಯಾವುದೇ ಸಾಹಿತ್ಯ ಆಯಾ ಕಾಲದ ಅಗತ್ಯ ಮತ್ತು ಒತ್ತಡಗಳಿಗೆ ಸ್ಪಂದಿಸುತ್ತಾ ತನ್ನ ಅಭಿವ್ಯಕ್ತಿಯನ್ನು ಪಡೆಯುತ್ತಾ ಹೋಗುತ್ತದೆ. ಅಂತಹ ಅಭಿವ್ಯಕ್ತಿಗೆ ಪರಿಪಕ್ವಗೊಂಡ ಕಾಲಘಟ್ಟವೂ ಮುಖ್ಯವಾಗುತ್ತದೆ. ಹೀಗಾಗಿ ಮುಸ್ಲಿಂ ಸಮಾಜದ ಸಾಂಸ್ಕೃತಿಕ ಸಂವೇದನೆಗಳು ನವ್ಯೋತ್ತರದ ಕಾಲಘಟ್ಟದವರೆಗೂ ಮುಕ್ತವಾಗಿ ಕನ್ನಡ ಸಾಹಿತ್ಯ ಜಗತ್ತನ್ನು ಪ್ರವೇಶಿಸಲಿಲ್ಲ ಎನಿಸುತ್ತದೆ.

ನವ್ಯೋತ್ತರ ಕಾಲಘಟ್ಟದಲ್ಲಿ ಬರೆಯ ಹೊರಟ ಮುಸ್ಲಿಂ ಲೇಖಕ ಲೇಖಕಿಯರನ್ನು ಈ ಸಮುದಾಯದ ಎರಡನೇತಂಡವಾಗಿ ನೋಡ ಹೊರಟರೆ ಸಾರಾ ಅಬೂಬಕ್ಕರ್, ಬೊಳುವಾರು ಮೊಹಮದ್ ಕುಂಞ, ಪಕೀರ್ ಮಹಮದ್ ಕಟ್ಪಾಡಿ ಹಾಗೂ ಬಾನುಮುಷ್ತಾಕ್ ಮುಂತಾದವರನ್ನು ಗುರುತಿಸಬಹುದು. ಮೊದಲ ಹಂತದ ಬರಹಗಾರರು ಸಾರ್ವತ್ರಿಕ ನೆಲೆಯಲ್ಲಿ ಸಾಮಾಜಿಕ ಚಿತ್ರಣವನ್ನು ಕಟ್ಟಿಕೊಡಲು ಯತ್ನಿಸಿದರೆ, ಎರಡನೇ ತಂಡ ಮುಸ್ಲಿಂ ಸಮಾಜದ ಬದುಕಿನ ಒಳ ಮುಖಗಳನ್ನು ತೆರೆದಿಡುತ್ತಾ, ಅಲ್ಲಿನ ಮೂಲಭೂತವಾದಿಗಳು ಧರ್ಮದ ಹೆಸರಿನಲ್ಲಿ ಜನರನ್ನು ಶೋಷಿಸುತ್ತಿರುವ ಸ್ವರೂಪವನ್ನು ಚಿತ್ರಿಸುತ್ತಾ ದುರ್ಬಲರ ಪರವಾಗಿ ಬರೆಯತೊಡಗಿದರು. ಇದಕ್ಕೆ ಇವರು ಬಳಸಿಕೊಂಡ ಪ್ರಾತಿನಿಧಿಕ ರೂಪವೆಂದರೆ ಕಥೆ ಹಾಗೂ ಕಾದಂಬರಿಗಳು.

ಮುಸ್ಲಿಮೇತರ ಸಾಹಿತಿಗಳು ಇವರ ಬದುಕನ್ನು ಚಿತ್ರಿಸಲಿಲ್ಲವೆ? ಎಂಬ ಪ್ರಶ್ನೆ ಓದುಗರಿಗೆ ಕಾಡುವುದು ಸಹಜ. ಆದರೆ ಅವರ ಕಥೆ, ಕಾದಂಬರಿಗಳಲ್ಲಿ ಬರುವ ಮುಸ್ಲಿಂ ಪಾತ್ರಗಳು ಪ್ರಾಸಂಗಿಕವಾಗಿ, ಬಂದವೇ ಹೊರತು, ಮುಸ್ಲಿಂ ಸಮುದಾಯದ ಪ್ರಾತಿನಿಧಿಕ ಪಾತ್ರಗಳಲ್ಲ ಎನ್ನಬಹುದು. ಇವರಲ್ಲಿ ಕುವೆಂಪು, ಕಾರಂತ, ಅನಕೃ, ತರಾಸು, ಗೊ.ರಾ. ಅಯ್ಯಾಂಗಾರ್ ಮೊದಲಾದವರು ಮುಸ್ಲಿಂ ಸಮಾಜದ ಒಳಗನ್ನು ತೆರೆದಿಟ್ಟಿದ್ದಾರೆ ಎಂದು ಹೇಳುವುದಾದರೆ, ಅದು ಆ ಸಮಾಜದ ಮೇಲ್ಪದರಗಳನ್ನಷ್ಟೇ ಹೊರತು, ಒಳಪದರಗಳನ್ನಲ್ಲ. ಅವು ಆ ಜನಾಂಗದ ಸಂವೇದನೆಯ ರೂಪದಲ್ಲಿ ಚಿತ್ರಿತವಾಗಿಲ್ಲವೆಂದೇ ಅರ್ಥ.

ಈ ಹಿನ್ನೆಲೆಯಲ್ಲಿ ಮುಸ್ಲಿಂ ಸಮುದಾಯವು ಹಲವು ಸಮಸ್ಯೆಗಳ ಆಗರವಾಗಿರುವುದು ಸ್ಪಷ್ಟ. ಒಂದು ರೀತಿಯಲ್ಲಿ ಇಲ್ಲಿನ ಸಮಸ್ಯೆಗಳ ಮೂಲಬೇರು ಇಸ್ಲಾಂನ ಧರ್ಮಗ್ರಂಥ ಕುರಾನನ್ನು ತಮ್ಮ ಸ್ವಾರ್ಥಕ್ಕಾಗಿ ಬಳಸಿಕೊಳ್ಳುವ ಪುರುಷ ಪ್ರಧಾನ ಹಾಗೂ ಮೂಲಭೂತ ವ್ಯವಸ್ಥೆಯೇ ಆಗಿದೆ. ಇವುಗಳೊಂದಿಗೆ ಸಾಮಾಜಿಕವಾಗಿ ಹಾಗೂ ಧಾರ್ಮಿಕವಾಗಿ ಕಾಡಿದ ಹಲವು ಸಮಸ್ಯೆಗಳೆಂದರೆ ಸ್ತ್ರೀ ಶೋಷಣೆಯ ಸಂಕೇತಗಳಾದ ತಲಾಖ್, ಬಹುಪತ್ನಿತ್ವ, ಬುರ್ಕಾ ಮುಂತಾದವುಗಳಾಗಿವೆ. ಸಾಮಾಜಿಕ ನೆಲೆಯಲ್ಲಿ ಬಡತನ, ಹಸಿವು, ಅನಕ್ಷರತೆ, ಮೌಢ್ಯ, ನಿರುದ್ಯೋಗ, ಸಂಪ್ರದಾಯ ಮುಂತಾದವುಗಳಾಗಿವೆ. ಪ್ರಸ್ತುತ ಸಾರಾ ಅಬೂಬಕ್ಕರ್ ಅವರು ಈ ಎಲ್ಲಾ ಸಮಸ್ಯೆಗಳ ಒಳನೋಟಗಳನ್ನು ಮಹಿಳೆಯ ನೆಲೆಯಲ್ಲಿ ಪರಿಚಯಿಸುವ ಮೂಲಕ ಹೇಗೆ ತಮ್ಮ ಸಮಾಜದ ದುಃಖ ದುಮ್ಮಾನಗಳನ್ನು ಪ್ರತಿಬಿಂಬಿಸಿದ್ದಾರೆ ಮತ್ತು ಅವು ಪಡೆದುಕೊಳ್ಳುವ ಸ್ವರೂಪಗಳಿಗೆ ತಮ್ಮ ಕಥೆ ಕಾದಂಬರಿಗಳ ಮೂಲಕ ಹೇಗೆ ಮೂರ್ತರೂಪ ನೀಡಿದ್ದಾರೆ ಎನ್ನುವುದನ್ನು ಪ್ರಬಂಧದಲ್ಲಿ ಚರ್ಚಿಸಲಾಗಿದೆ.

ನಿಬಂಧದ ವಿಷಯದ ಹಿನ್ನೆಲೆಯಲ್ಲಿ ಸಾರಾ ಅವರಸಾಹಿತ್ಯ ಮತ್ತು ಅಭಿವ್ಯಕ್ತಿಯ ನೆಲೆಗಳನ್ನು ಕುರಿತು ಅಧ್ಯಯನ ನಡೆಸಲಾಗಿದೆ. ಸಾರಾ ಅವರು ಸಾಹಿತ್ಯ ಬರೆಯ ಹೊರಟ ಉದ್ದೇಶ ೭೦-೮೦ರ ದಶಕದಲ್ಲಿ.

ಮಹಿಳೆಯೊಬ್ಬಳು ತಮ್ಮ ಸಮುದಾಯ ಮತ್ತು ಸಂಸ್ಕೃತಿಯ ಒಳಪದರಗಳನ್ನು ಸಮಾಜದ ಮುಂದೆ ತೆರೆದಿಟ್ಟಿದ್ದು ಬದುಕಿನ ಬಗೆಗೆ ಹೆಣ್ಣು ಹೊಂದಿರುವ ಕಳಕಳಿಯ ಪ್ರತೀಕ. ಮತೀಯ ಆವರಣದೊಳಗೂ ಮತಾತೀತವಾದ ಜೀವನಮುಖಿಯಾದ ಚಿಂತನೆ ಸ್ಮರಣೀಯವಾದುದು. ಇಸ್ಲಾಂ ಧರ್ಮದ ಒಳಗಿನ ಸ್ತ್ರೀ ವಿರೋಧಿ ನೀತಿಗಳು ಮಾನವ ವಿರೋಧಿ ನೀತಿಗಳು, ಸಂಪ್ರದಾಯ ಆಚರಣೆಗಳ ಅರ್ಥಹೀನತೆ, ಅವುಗಳ ದ್ವಂದ್ವ ನೀತಿ, ಅಮಾನವೀಯತೆ, ದುಡಿಯುವ ವರ್ಗದ ಶೋಷಣೆಯ ನಿವಾರಣೆಯೇ ಅಭಿವ್ಯಕ್ತಿಯ ಮುಖ್ಯ ಗುರಿ.

೧೯೮೪ರಲ್ಲಿ ಪ್ರಕಟವಾದ 'ಚಂದ್ರಗಿರಿ ತೀರದಲ್ಲಿ' ಅವರ ಪ್ರಥಮ ಕಾದಂಬರಿ, ಇವರ 'ಸಹನಾ', 'ವಜ್ರಗಳು', 'ಕದನವಿರಾಮ', 'ಸುಳಿ', 'ತಳ ಒಡೆದ ದೋಣಿಯಲ್ಲಿ' ಮತ್ತು 'ಪಂಜರ' ಕಾದಂಬರಿಗಳನ್ನೂ ಹಾಗೂ 'ಚಪ್ಪಲಿಗಳು', 'ಪಯಣ ಮತ್ತು ಇತರ ಕಥೆಗಳು', 'ಅರ್ಧರಾತ್ರಿಯಲ್ಲಿ ಹುಟ್ಟಿದ ಕೂಸು', 'ಖೆಡ್ಡಾ' ಎಂಬ ಕಥಾ ಸಂಕಲನಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ.

ಅಧ್ಯಾಯ-೩

## ಜೀವನ ಮತ್ತು ಸಾಧನೆ

ಸಾರಾ ಅವರು ಕೇರಳ ರಾಜ್ಯ, ಕಾಸರಗೋಡಿನಲ್ಲಿ ನ್ಯಾಯವಾದಿಗಳಾಗಿದ್ದ ಪಿ. ಅಹಮದ್ ಮತ್ತು ಜೈನಾಬಿ ದಂಪತಿಗಳ ಮಗಳಾಗಿ ದಿನಾಂಕ: ೩೦.೦೬.೧೯೩೬ರಲ್ಲಿ ಜನಿಸಿದರು. ವಿದ್ಯಾವಂತ, ಸುಸಂಸ್ಕೃತ ಹಾಗೂ ಸುರಕ್ಷಿತವಾದ ತುಂಬು ಕುಟುಂಬದಲ್ಲಿ ಎಲ್ಲರ ಪ್ರೀತಿಯ ಕಣ್ಮಣಿಯಾಗಿ ಬೆಳೆದವರು. ಅಣ್ಣತಮ್ಮಂದಿರ ವಾತ್ಸಲ್ಯದ ಸವಿಯುಂಡವರು. ನಿಷ್ಠಾವಂತ ತಂದೆಯ ಒತ್ತಾಸೆಯಲ್ಲಿ ಕನ್ನಡ ಶಾಲೆಯಲ್ಲಿ ಕಲಿತವರು. ಮುಸ್ಲಿಂ ಹೆಣ್ಣು ಮಕ್ಕಳು ಶಾಲೆಗೆ ಹೋಗುವುದು, ಪರ್ದಾಧರಿಸದೆ ಹಾದಿಯಲ್ಲಿ ಓಡಾಡುವುದು ಮುಸ್ಲಿಂ ಪುರುಷ ಸಮಾಜದ ಮೂಲಭೂತವಾದಿಗಳ ಕೆಂಗಣ್ಣಿಗೆ ಗುರಿಯಾದಂತೆ. ಆದರೆ ತಂದೆ ಮಹಮದ್ ಅವರಿಗೆ ತಮ್ಮ ಮಗಳು ಎಸ್.ಎಸ್.ಎಲ್.ಸಿ. ಮಟ್ಟದ ವಿದ್ಯಾಭ್ಯಾಸವನ್ನಾದರೂ ಪಡೆಯಲೇಬೇಕೆಂಬ ಮಹದಾಸೆ. ತಮ್ಮ ಮಗಳನ್ನು ನೋಡಿ ಮುಸ್ಲಿಂ ಸಮಾಜದ ಇತರ ಹೆಣ್ಣು ಮಕ್ಕಳು ಶಾಲೆಗೆ ಹೋಗಿ ವಿದ್ಯೆ ಪಡೆಯಬೇಕು; ತಮ್ಮ ಅಜ್ಞಾನದ ಕತ್ತಲೆಯ ಗುಹೆಯಿಂದ ಹೊರಬರಬೇಕೆಂಬ ಹೆಬ್ಬಯಕೆ ಅವರದಾಗಿತ್ತು. ಅದಕ್ಕಾಗಿ ಅವರು ಹಠ ತೊಟ್ಟಂತೆ ಕಾಣುತ್ತಾರೆ. ಮಗಳು ಶಾಲೆಗೆ ಹೋಗುತ್ತಿರುವುದನ್ನು ಕುರಿತು ಮಾತನಾಡುತ್ತಿದ್ದವರಿಗೆ ಅವರು ಕೊಡುತ್ತಿದ್ದ ಉತ್ತರ 'ಹೆಣ್ಣು ಮಕ್ಕಳಿಗೆ ವಿದ್ಯೆ ಕೊಡಕೂಡದೆಂದು ಕುರಾನಿನಲ್ಲಿ ಎಲ್ಲೂ ಹೇಳಿಲ್ಲವಲ್ಲ? ಮುಂದಿನ ಜನಾಂಗವನ್ನು ಪೋಷಿಸಿ ಮುಂದೆ ತರಬೇಕಾದವಳು ತಾಯಿಯಾದುದರಿಂದ ಗಂಡಿಗಿಂತಲೂ ಹೆಣ್ಣಿಗೆ ವಿದ್ಯಾಭ್ಯಾಸದ ಅಗತ್ಯವಿದೆ ಎಂದು ಮಹಮದ್ ಪೈಂಗಬರ್ ಬೋಧಿಸಿದ್ದಾರೆ. ನನ್ನ ಮಗಳ ವಿದ್ಯಾಭ್ಯಾಸ ಕುರಿತು ಯಾರೂ ಏನೂ ಹೇಳಬೇಕಾಗಿಲ್ಲ. ನನಗೆ ಸರಿಕಂಡಂತೆ ಮಾಡುತ್ತೇನೆ' ಎಂದು ನೇರವಾಗಿ ಉತ್ತರ ಕೊಡುವ ತಂದೆಯ ದೃಢ ನಿಲುವಿನಿಂದ ಸಾರಾ ಅವರು ಶಿಕ್ಷಣ ಪಡೆಯಲು ಅವಕಾಶವಾಯಿತು.

ಹೀಗೆ ಪ್ರಜ್ಞಾವಂತ ತಂದೆ, ವಿದ್ಯೆಯ ಬಗೆಗೆ ಅಪಾರ ಕಾಳಜಿ ಹೊಂದಿದ್ದ ಅಣ್ಣ, ಮಾನವೀಯ ಅಂತಃಕರಣ ಹೊಂದಿದ್ದ ತಾಯಿ, ಸಮಾಜದಲ್ಲಿ ಗೌರವ, ಪ್ರತಿಷ್ಠೆಗಳಿಗೆ ಹೆಸರಾಗಿದ್ದ ಕುಟುಂಬದಲ್ಲಿ ಬೆಳೆದ ಸಾರಾ ಅವರ ಬಾಲ್ಯದ ದಿನಗಳು ಸುಂದರವಾಗಿಯೇ ಇದೆ. ಕುಟುಂಬದ ಮೂಲದಿಂದಲೇ ಯಾವುದೇ ಸಾಮಾಜಿಕ, ಆರ್ಥಿಕ ನೆಲೆಯ ಬಿಕ್ಕಟ್ಟುಗಳಿಲ್ಲದಪರಿಸರದಲ್ಲಿ ಬೆಳೆದವರು. ಆದರೆ ತಮ್ಮ ಸುತ್ತಮುತ್ತಲಿನ ಪ್ರಚಲಿತ ಮುಸ್ಲಿಂ ಸಮಾಜದ ವಿಧಿ-ನಿಷೇಧಗಳು, ಕಟ್ಟುಪಾಡುಗಳು, ಶ್ರದ್ಧೆ, ಆಚರಣೆ, ನಂಬಿಕೆಗಳನ್ನು ಬಾಲ್ಯದಿಂದಲೇ ಸೂಕ್ಷ್ಮದೃಷ್ಟಿಯಿಂದ ಗಮನಿಸುತ್ತಾ ಬಂದವರು. ಮದುವೆಯ ನಂತರ ಮುಸ್ಲಿಂ ಹೆಣ್ಣಿನ ವಾಸ್ತವ ಸ್ಥಿತಿಯ ಅರಿವು ಅವರಿಗಾಗಿದೆ. ಇಸ್ಲಾಂ ಧರ್ಮದ ಹೆಸರಿನಲ್ಲಿ ಹೆಣ್ಣೊಂದು ಅನುಭವಿಸುವ ನೋವನ್ನು ಅರ್ಥೈಸಿಕೊಂಡು, ವೈಚಾರಿಕ ಮನೋಭಾವದಿಂದ, ಆಧುನಿಕ ದೃಷ್ಟಿಕೋನದಿಂದ ಮುಸ್ಲಿಂ ಸಮಾಜದ ಮಹಿಳೆಯರ ಬದುಕಿನ ಸುತ್ತ ನಡೆಯುವ ವಿದ್ಯಮಾನಗಳನ್ನು ಸೃಜನಶೀಲ ನೆಲೆಯಲ್ಲಿ ಚಿಂತಿಸಿದರು. ಮುಸ್ಲಿಂ ಮಹಿಳೆಯರ ಅಂತರಂಗದ ಒಳ ನೋಟಗಳನ್ನು, ಬದುಕಿನ ತಲ್ಲಣಗಳನ್ನು, ವಾಸ್ತವ ಸತ್ಯಗಳನ್ನು, ಸಂಪ್ರದಾಯದ ಹೆಸರಿನಲ್ಲಿ ಪಾಲಿಸಬೇಕಾಗಿರುವ ಕಂದಾಚಾರ, ಅಂಧಶ್ರದ್ಧೆಗಳನ್ನು ಮೊಟ್ಟಮೊದಲ ಬಾರಿಗೆ ಕನ್ನಡ ಸಾಹಿತ್ಯದಲ್ಲಿ ಅನಾವರಣಗೊಳಿಸಿದರು. ಆ ಮೂಲಕ ಮುಸ್ಲಿಂ ಮಹಿಳೆಯರ ಶೋಷಣೆಯ ಮೇಲೆ

ಬೆಳಕು ಚೆಲ್ಲುವ ಮೊದಲ ಪ್ರಯತ್ನ ಮಾಡಿದರು. ತಮ್ಮ ಸಮಾಜದಲ್ಲಿ ತಾವು ಕಂಡದ್ದನ್ನು, ಕೇಳಿದ್ದನ್ನು ಎಲ್ಲರ ಮುಂದೆ ತೆರೆದಿಡಬೇಕು, ಅದನ್ನು ಬರಹದ ಮೂಲಕ ಅಭಿವ್ಯಕ್ತಿಸಬೇಕೆಂಬ ಅವರ ಬಯಕೆಗೆ ಆಗಾಗ್ಗೆ ತಣ್ಣೀರೆರಚುವ ಕೆಲಸ ನಡೆದಿದ್ದರೂ, ಅದನ್ನು ಬತ್ತಿಸಲು ಸಾಧ್ಯವಾಗಲಿಲ್ಲ. ಈ ಬಯಕೆ ಒಳಗೊಳಗೆ ಪುಟಿಯುತ್ತಲೇ ಇತ್ತು. ಇದಕ್ಕೆ ಒಂದು ಗಟ್ಟಿನೆಲೆ ಒದಗಿಸಿದವರು ದಿ. ಪಿ. ಲಂಕೇಶ್ ಅವರು. ಲಂಕೇಶ ಪತ್ರಿಕೆಯು ಸಾರಾ ಅವರ ಬರಹಗಳ ಅಭಿವ್ಯಕ್ತಿಗೆ ವೇದಿಕೆಯಾಯಿತು. ಆ ಮೂಲಕ ಕನ್ನಡ ಸಾಹಿತ್ಯ ಲೋಕದೊಳಗೆ ಮುಸ್ಲಿಂ ಲೇಖಕಿಯ ಪ್ರವೇಶವೂ ಆಯಿತು.

ಸಾಮಾಜಿಕ ಬದಲಾವಣೆಯಲ್ಲಿ ಸಾಹಿತ್ಯವೂ ಒಂದು ಪಾತ್ರವನ್ನು ನಿರ್ವಹಿಸುತ್ತದೆ ಎಂಬ ನಂಬಿಕೆಯಿಂದ ತಮ್ಮ ಕತೆ, ಕಾದಂಬರಿಗಳ ಮೂಲಕ ತಾವು ಎತ್ತುವ ಸಮಸ್ಯೆಗಳ ಕುರಿತು ಮುಸ್ಲಿಮರು ಚಿಂತಿಸಬೇಕು. ಈ ಸಮಸ್ಯೆಗಳಿಗೆ ಪರಿಹಾರಗಳನ್ನು ಕಂಡುಕೊಳ್ಳಬೇಕೆಂಬ ಬಯಕೆ ಸಾರಾ ಅವರದಾಗಿದೆ. ಈ ಹಿಂದೆ ಕನ್ನಡ ಸಾಹಿತ್ಯದಲ್ಲಿ ಅಲ್ಲೊಂದು, ಇಲ್ಲೊಂದು ಪ್ರಾಸಂಗಿಕವಾಗಿ ಮುಸ್ಲಿಂ ಪಾತ್ರಗಳು ಕಂಡುಬರುತ್ತವೆಯಾದರೂ, ಅವು ಮುಸ್ಲಿಂ ಸಮಾಜವನ್ನು ತೆರೆದಿಡುವಲ್ಲಿ ಪೂರ್ಣ ಸಾಧನವಾಗಲಾರವು. ಹೀಗಾಗಿ ಸಾರಾ ಅವರ ಸಾಹಿತ್ಯ ಈ ಕೊರತೆಯನ್ನು ನೀಗಿದೆ ಎನ್ನಬಹುದು. ಮುಸ್ಲಿಂ ಸಮಾಜ, ಧರ್ಮ, ಸಂಸ್ಕೃತಿಯ ಎಲ್ಲಾ ಒಳನೋಟಗಳನ್ನು ಇವು ಸಮಗ್ರವಾಗಿ ನೀಡುತ್ತವೆ ಎಂದಲ್ಲ; ಆದರೆ ಆ ಸಮಾಜದ ಮಹಿಳೆಯರ ಬದುಕಿನ ಸಾಕಷ್ಟು ವಿಷಯಗಳು, ಅದರ ಮೂಲಕ ತೆರೆದುಕೊಳ್ಳುವ ಧರ್ಮ, ಸಂಸ್ಕೃತಿ, ಸಂಪ್ರದಾಯ, ಸಮಾಜ, ಸಂಬಂಧಗಳ ಚಿತ್ರಣಗಳನ್ನು ಗ್ರಹಿಸಲು ಸಾಧ್ಯವಿದೆ.

ತಮ್ಮ ಬರಹವನ್ನು ಒಂದು ಸವಾಲಾಗಿ ಸ್ವೀಕರಿಸಿ, ಆತಂಕ, ಎಚ್ಚರಗಳ ನಡುವೆ ಸೂಕ್ಷ್ಮಸಂವೇದಿಯಾಗಿ ತಮ್ಮ ಅಭಿವ್ಯಕ್ತಿಯಲ್ಲಿ ಕರಾರುವಕ್ಕಾದ, ಚಿಂತನಾಯೋಗ್ಯವಾದ, ಮಾನವೀಯ ಕಳಕಳಿಯಿಂದ ಬರೆಯತೊಡಗಿದರು. ಎದುರಾದ ಹಲವಾರು ಸಮಸ್ಯೆಗಳನ್ನು ಆರೋಗ್ಯಕರವಾದ ರೀತಿಯಿಂದಲೇ ಅರ್ಥೈಸುವ ತಾಳ್ಮೆ, ಸಂಯಮ, ಸ್ವಭಾವದಿಂದಾಗಿ ಮುಸ್ಲಿಂ ಸಮಾಜದ ಜೊತೆಗೆ ಇತರ ಸಮಾಜವು ಆ ಬಗ್ಗೆ ಯೋಚಿಸುವಂತೆ ಪ್ರೇರೇಪಿಸಿದ್ದಾರೆ. ಈ ಹಿನ್ನೆಲೆಯಲ್ಲಿ ಹೊಸ ಬರಹಗಳಿಗೆ ಮುಕ್ತವೇದಿಕೆಯನ್ನು ಒದಗಿಸಿಕೊಟ್ಟಿದ್ದಾರೆ. ತಮ್ಮ ನಲ್ವತ್ತನೆಯ ವಯಸ್ಸಿನಲ್ಲಿ ಬರವಣಿಗೆಯನ್ನು ಆರಂಭಿಸಿದ ಸಾರಾ ಅವರ ಸಾಹಿತ್ಯ ಕೃಷಿ ನಿರಂತವರಾಗಿ ಸಾಗುತ್ತಿದೆ. ಸರಳ ಭಾಷೆ, ಸಹಜ ನಿರೂಪಣೆಯಲ್ಲಿ ಮುಸ್ಲಿಂ ಸಂವೇದನೆಯನ್ನು ಕನ್ನಡ ಓದುಗ ವರ್ಗಕ್ಕೆ ಗಾಢವಾಗಿ ಒದಗಿಸಿದ್ದಾರೆ. ತಮ್ಮ ಬರಹದ ಮೂಲಕ ಬಂಡಾಯ ಚಳವಳಿಗೆ ಮುಸ್ಲಿಂ ಸಮುದಾಯದಿಂದ ಧ್ವನಿ ಕೊಟ್ಟವರಾಗಿದ್ದಾರೆ. ಗದ್ಯ ಪ್ರಕಾರದಲ್ಲಿಯೇ ಸಾಹಿತ್ಯ ಬರೆಯತೊಡಗಿದ ಇವರು ಕಾದಂಬರಿ, ಕತೆ, ಲೇಖನ, ಪ್ರಬಂಧ, ಬಾನುಲಿ ನಾಟಕ, ಪ್ರವಾಸ ಕಥನ, ಅನುವಾದ-ಪ್ರಕಾರಗಳಲ್ಲಿ ಕೃತಿಗಳನ್ನು ರಚಿಸಿದ್ದಾರೆ.

**ಕಾದಂಬರಿಗಳು :** 'ಚಂದ್ರಗಿರಿ ತೀರದಲ್ಲಿ' (೧೯೮೪), ಸಹನಾ (೧೯೮೫), ವಜ್ರಗಳು (೧೯೮೮), ಕದನ ವಿರಾಮ (೧೯೯೧) ಸುಳಿ (೧೯೯೬), ತಳ ಒಡೆದ ದೋಣಿಯಲಿ (೧೯೯೭), ಪಂಜರ (೨೦೦೪)

**ಕಥಾಸಂಕಲನಗಳು :** (೨೦೦೪), ಚಪ್ಪಲಿಗಳು (೧೯೮೯), ಪಯಣ ಮತ್ತು ಇತರ ಕತೆಗಳು (೧೯೯೨), ಅರ್ಧರಾತ್ರಿಯಲ್ಲಿ ಹುಟ್ಟಿದ ಕೂಸು (೧೯೯೬), ಖೆಡ್ಡಾ (೧೯೯೯), ಸುಮಯ್ಯಾ (೨೦೦೪), ಲೇಖನ

**ಸಂಗ್ರಹಗಳು :** ಲೇಖನಗುಚ್ಛ(೧೯೯೭), ಅನಾವರಣ (೨೦೦೨), ಸಾಹಿತ್ಯ ಸಂಸ್ಕೃತಿ ಮತ್ತು ಮಹಿಳೆ (೨೦೦೭)

**ಪ್ರವಾಸ ಕಥನ:** ಐಷಾರಾಮದ ಆಳದಲ್ಲಿ - ಅಮೆರಿಕಾ ಪ್ರವಾಸ ಕಥನ,(೨೦೦೧),

ತೇಲಾಡುವ ಮೋಡಗಳು (೨೦೦೨) ಬಾನುಲಿ ನಾಟಕಗಳಸಂಗ್ರಹ, ಮನೋಮಿ (೧೯೯೩, ಬಲೆ (೧೯೯೮)), ನಾನಿನ್ನು ನಿದ್ರಿಸುವೆ (೨೦೦೦), ತಂದೆಯ ನೆನಪುಗಳು- ಇವರ ಅನುವಾದಿತ (ಮಲೆಯಾಳ ಭಾಷೆಯಿಂದ ಕನ್ನಡಕ್ಕೆ) ಕೃತಿಗಳಾಗಿವೆ. ಇವರ 'ಚಂದ್ರಗಿರಿ ತೀರದಲ್ಲಿ' ಕಾದಂಬರಿಯು ಮಲಯಾಳ, ತೆಲಗು, ಓರಿಯಾ, ಮರಾಠಿ, ತಮಿಳು, ಹಿಂದಿ ಹಾಗೂ ಇಂಗ್ಲಿಷ್ ಭಾಷೆಗೆ ಭಾಷಾಂತರವಾಗಿದೆ.

**ಇವರ ಸಾಹಿತ್ಯ ಸೇವೆ ಮತ್ತು ಸಾಧನೆಗೆ ದೊರೆತ ಪ್ರಶಸ್ತಿ, ಪುರಸ್ಕಾರಗಳು**

'ಚಂದ್ರಗಿರಿ ತೀರದಲ್ಲಿ' ಕಾದಂಬರಿಗೆ ಕರ್ನಾಟಕ ಸಾಹಿತ್ಯ ಅಕಾಡಮಿ ಪ್ರಶಸ್ತಿ (೧೯೯೧), ಸಾಹಿತ್ಯ ಪರಿಷತ್ತಿನ ಮಲ್ಲಿಕಾ ಪ್ರಶಸ್ತಿ; 'ಸಹನಾ' ಕಾದಂಬರಿಗೆ ವರ್ಧಮಾನ ಉದಯೋನ್ಮುಖ ಸಾಹಿತ್ಯ ಪ್ರಶಸ್ತಿ, ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ, (೧೯೯೫) ಸರೋಜಾ ದೇವಿ ಶ್ರೀಹರ್ಷ ಪ್ರಶಸ್ತಿ (೧೯೯೯), ದಾನಚಿಂತಾಮಣಿ ಅತ್ತಿಮಬ್ಬೆ ಪ್ರಶಸ್ತಿ (೨೦೦೨), ಸುಳಿ ಕಾದಂಬರಿಗೆ ಕರ್ನಾಟಕ ಲೇಖಕಿಯರ ಸಂಘದ ಅನುಪಮಾ ನಿರಂಜನ ಪ್ರಶಸ್ತಿ, ತಳ ಒಡೆದ ದೋಣಿಯಲಿ ಕಾದಂಬರಿಗೆ ಶಿವಾನಂದ ಪಾಟಿಲ ಪ್ರಶಸ್ತಿ (೨೦೦೫) ಗಳು ಬಂದಿವೆ.

ಇವಲ್ಲದೆ ರತ್ನಮ್ಮ ಹೆಗಡೆ ಮಹಿಳಾ ಸಾಹಿತ್ಯಪ್ರಶಸ್ತಿ, ಗೊರೂರು ಪ್ರತಿಷ್ಠಾನದ ಬಾಬಾ ಸಾಹೇಬ್ ಅಂಬೇಡ್ಕರ್ ಪ್ರಶಸ್ತಿ (೨೦೦೩), ಸಂದೇಶ ಸಾಹಿತ್ಯ ಪ್ರಶಸ್ತಿ (೨೦೦೫), ಆಳ್ವಾಸ್ ನುಡಿಸಿರಿ ಪ್ರಶಸ್ತಿ (೨೦೦೫), ನಂಜನಗೂಡು ತಿರುಮಲಾಂಬ ಸ್ಮರಣೆ ಶಾಶ್ವತಿ ಪ್ರಶಸ್ತಿ (೨೦೦೭) ಪಡೆದಿದ್ದಾರೆ.

ಕನ್ನಡ ವಿಶ್ವವಿದ್ಯಾಲಯ, ಹಂಪಿಯ ನಾಡೋಜ ಬಿರುದು ಪಡೆದಿದ್ದಾರೆ (೨೦೦೫) , ಸುಳಿಯಲ್ಲಿ ಸಿಕ್ಕವರು ಕಾದಂಬರಿಗೆ ಸಾವಿತ್ರಮ್ಮ ದೇ.ಜ.ಗೌ. ದತ್ತಿನಿಧಿ ಬಹುಮಾನ, ತಳ ಒಡೆದ ದೋಣಿಯಲಿ ಕಾದಂಬರಿಗೆ ಕೇಂದ್ರ ಸರ್ಕಾರದ ಭಾಷಾ ಭಾರತಿ ಸನ್ಮಾನ ದೊರೆತಿದೆ.

ಇವರು ಕರ್ನಾಟಕ ಸಾಹಿತ್ಯ ಅಕಾಡಮಿ ಸದಸ್ಯರಾಗಿ (೧೯೮೭-೧೯೯೦), ಕೇಂದ್ರ ಸಾಹಿತ್ಯ ಅಕಾಡಮಿ ಸಲಹಾ ಸಮಿತಿಯ ಸದಸ್ಯರಾಗಿ (೧೯೯೨-೯೫), ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಕಾರ್ಯಕಾರಿ ಸಮಿತಿಯ ಸದಸ್ಯರಾಗಿ (೧೯೯೧-೧೯೯೪), ಕರಾವಳಿ ಲೇಖಕಿಯರ ವಾಚಕಿಯರ ಸಂಘದ ಅಧ್ಯಕ್ಷರಾಗಿ (೧೯೯೦-೧೯೯೪), ಜಿಲ್ಲಾ ಗ್ರಂಥಾಲಯ ಸಮಿತಿಯ ಸದಸ್ಯರಾಗಿ, ಮಂಗಳೂರು ತಾಲ್ಲೂಕು ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ (೨೦೦೬) ಸೇವೆ ಸಲ್ಲಿಸಿದ್ದಾರೆ.

## ಅಧ್ಯಾಯ-೪
# ಕಥಾ ಸಾಹಿತ್ಯದ ಸ್ವರೂಪ

'ಬಂಡಾಯ' ಕನ್ನಡ ಸಾಹಿತ್ಯದಲ್ಲಿ ನವ್ಯದ ನಂತರ ಕಾಣಿಸಿಕೊಂಡ ಸಾಹಿತ್ಯ ಚಳವಳಿ. ಯಾವುದೇ ಸಾಹಿತ್ಯ ಪರಂಪರೆ ತನ್ನ ಸಾಧ್ಯತೆಗಳನ್ನು ಮುಗಿಸಿಕೊಂಡು ಸ್ಥಗಿತವಾದ ಕಾಲಕ್ಕೆ ಮತ್ತೊಂದು ಸಾಹಿತ್ಯ ಪರಂಪರೆ ಜನ್ಮ ತಾಳುವುದಕ್ಕೆ ಬೇಕಾಗಿರುವ ಆಶಯಗಳನ್ನು ತನ್ನ ಗರ್ಭದಲ್ಲಿಯೆ ರೂಪಿಸಿಕೊಂಡಿರುತ್ತದೆ. ತನ್ನ ಮುಖ್ಯವಾದ ಈ ಆಶಯಗಳೊಂದಿಗೆ ಬೇರೆ ಬೇರೆ ದೇಶ, ಕಾಲ, ಶಿಸ್ತಿನ ಹಲವು ಸಂಗತಿಗಳು ಹೊಸ ಸಾಹಿತ್ಯದ ನಿರ್ಮಾಣಕ್ಕೆ ಕಾರಣವಾಗುತ್ತದೆ. ಇದರಿಂದ ಸಾಹಿತ್ಯದ ಶ್ರೇಷ್ಠತೆಯನ್ನು ಗುರುತಿಸಲು ಬೇಕಾಗುವ ಸೃಜನಶೀಲ ನೆಲೆಯನ್ನು ಅರ್ಥಮಾಡಿಕೊಳ್ಳುವುದಕ್ಕೆ ಭದ್ರವಾದ ನೆಲೆಗಟ್ಟನ್ನು ಒದಗಿಸುತ್ತದೆ. ಹೀಗಾಗಿಯೇ ನವೋದಯಕ್ಕೆ ಪ್ರತಿಕ್ರಿಯೆಯಾಗಿ ಪ್ರಗತಿಶೀಲ ಸಾಹಿತ್ಯ, ಪ್ರಗತಿಶೀಲಕ್ಕೆ ಪ್ರತಿಕ್ರಿಯೆಯಾಗಿ ನವ್ಯಸಾಹಿತ್ಯ, ನವ್ಯಕ್ಕೆ ಪ್ರತಿಕ್ರಿಯೆಯಾಗಿ ಬಂಡಾಯ ಮತ್ತು ದಲಿತ ಸಾಹಿತ್ಯ ಹುಟ್ಟಿಕೊಂಡಿತು. ಪ್ರಗತಿಶೀಲದ ಮುಂದುವರಿಕೆಯಾಗಿ ಕಂಡ ಬಂಡಾಯ ಸಾಹಿತ್ಯವನ್ನು ನವ್ಯೋತ್ತರ ಸಾಹಿತ್ಯ ಎಂದು ಕರೆಯಬಹುದು. ಎಂಬತ್ತರ ದಶಕದ ಉತ್ತರಾರ್ಧದಲ್ಲಿ ಎಲ್ಲ ಪ್ರಗತಿಪರ ಬರಹಗಾರರಿಂದ ಸೃಷ್ಟಿಯಾದ ಸಾಹಿತ್ಯವಿದು.

ಕೆಳಸ್ತರದ ಬರಹಗಾರರಿಂದ ರಚಿತವಾದುದು ದಲಿತ ಸಾಹಿತ್ಯ. ಎಲ್ಲಾ ಜಾತಿ, ವರ್ಗಗಳಿಂದ ಬಂದ ಬರಹಗಾರರಿಂದ ಶೋಷಿತರ ಪರವಾಗಿ ರಚಿತವಾದದ್ದು ಬಂಡಾಯ ಸಾಹಿತ್ಯ. ಬಂಡಾಯ ಚಳವಳಿ ಎಲ್ಲಾ ಎಡಪಂಥೀಯ ಧೋರಣೆಯುಳ್ಳವರು ಮತ್ತು ಪ್ರಜಾಪ್ರಭುತ್ವವಾದಿಗಳು ಸೇರಿ ರೂಪುಗೊಂಡದ್ದು. 'ಪ್ರತಿಭಟನೆ' ಇಲ್ಲಿ ಕಾಣುವ ಸಾಮಾನ್ಯ ಅಂಶ. ಸಾಮಾಜಿಕ ಹೊಣೆಗಾರಿಕೆ ಸಮಾನತೆಯ ಸಮಾಜವನ್ನು ನಿರ್ಮಾಣ ಮಾಡುವುದು ಇಲ್ಲಿನ ಪ್ರಮುಖ ಗುರಿ. ನಮ್ಮ ಸಂಸ್ಕೃತಿಯ ಮೌಲ್ಯಗಳು ಸ್ಥಗಿತಗೊಂಡಾಗ, ಪ್ರತಿಗಾಮಿಯಾದಾಗ ಅಂಥವುಗಳ ವಿರುದ್ಧ ಹೋರಾಡುವುದು ಬಂಡಾಯವೆನಿಸಿಕೊಳ್ಳುತ್ತದೆ. ಇದೇ ಸಾಹಿತ್ಯದಲ್ಲಿ ನಿರೂಪಿತಗೊಂಡಾಗ ಬಂಡಾಯ ಸಾಹಿತ್ಯವಾಗುತ್ತದೆ.

ಇದು ಸಾಹಿತ್ಯ ಸೌಂದರ್ಯದ ಆರಾಧನೆಯಲ್ಲಿ ತೊಡಗುವುದಿಲ್ಲ. ಕೇವಲ ಬೌದ್ಧಿಕ ತುಡಿತವೂ ಅದರ ಉದ್ದೇಶವಲ್ಲ. ಅನ್ಯಾಯಗಳ ವಿರುದ್ಧ ಶ್ರಮ ಜೀವಿಗಳನ್ನು ಕ್ರಾಂತಿಗೆ, ಹೋರಾಟಕ್ಕೆ ಸಜ್ಜುಗೊಳಿಸುವುದು ಬಂಡಾಯ ಸಾಹಿತ್ಯದ ಜವಾಬ್ದಾರಿಯಾಗಿರುತ್ತದೆ. ಈ ಸಾಹಿತ್ಯ ಪರಂಪರೆಗೂ ಒಂದು ತಾತ್ವಿಕ ನೆಲೆಗಟ್ಟಿದೆ. ಇದು ಯಾವುದೇ ಪರಂಪರೆಯ ವಿರೋಧಿಯಲ್ಲ. ಸಂಪ್ರದಾಯದೊಳಗಿನ ಜಡತ್ವವನ್ನು, ಮೌಢ್ಯವನ್ನು ವಿರೋಧಿಸುತ್ತದೆ. ಪ್ರತಿಗಾಮಿತ್ವವನ್ನು ಪ್ರತಿಭಟಿಸುತ್ತಲೇ ಪರಂಪರೆಯೊಂದಿಗೆ ಸಂಬಂಧವನ್ನು ಬೆಸೆದುಕೊಳ್ಳುತ್ತದೆ.

ಈ ಹಿನ್ನೆಲೆಯಲ್ಲಿ ಕನ್ನಡ ಸಾಹಿತ್ಯ ಅಪರಿಚಿತವಾಗಿದ್ದ ಹಲವಾರು ಅನುಭವಗಳು, ಸಂವೇದನೆಗಳು, ಅಭಿವ್ಯಕ್ತಿಗೊಳ್ಳಲು ಪ್ರೇರಣೆಯಾಯಿತು. ಇಂತಹ ಒಂದು ಸಾಹಿತ್ಯಿಕ ಚಳವಳಿಯ ಹಿನ್ನೆಲೆಯಿಂದ ಬಂದವರು ಸಾರಾ ಅವರು. ವಚನಕಾರರಿಂದಲೇ ಸ್ತ್ರೀ ಸಂವೇದನಾ ಬರವಣಿಗೆಗಳು ಆರಂಭವಾಗಿದ್ದರೂ ಅದು ಮುಖ್ಯವಾಗಿ ಪಾಶ್ಚಾತ್ಯ ಪರಿಕಲ್ಪನೆಯೊಂದಿಗೆ ಬೆಳಕಿಗೆ ಬಂದದ್ದು ಬಂಡಾಯ ಚಳವಳಿಯ ಸಂದರ್ಭದಲ್ಲಿ.

ಧಾರ್ಮಿಕ, ಸಾಂಪ್ರದಾಯಿಕ ಮತ್ತು ಸಾಮಾಜಿಕ ಬಂಧನದಿಂದ ಬಿಡಿಸಿಕೊಳ್ಳಲಾರದೆ ವ್ಯವಸ್ಥೆ ನಿರ್ಮಿಸಿದ ಸುಳಿಯಲ್ಲೇ ಸಿಲುಕಿ ನರಳುತ್ತಿದ್ದ ಮುಸ್ಲಿಂ ಸಮಾಜದ ಮಹಿಳೆಯರ ಬದುಕನ್ನು ಕುರಿತು ಆರಂಭದ ಸಂದರ್ಭಕ್ಕೆ ಸಾರಾ ಅವರು ಧ್ವನಿ ಎತ್ತಿದ್ದು ಒಂದು ಬಂಡಾಯವೇ. ಜೊತೆಗೆ ಈ ಸಮುದಾಯದ ಸ್ತ್ರೀ ಪುರುಷರ ಬದುಕಿನ ಒಳಗನ್ನು ಸಮಾಜದ ಮುಂದೆ ಇಡುವುದರ ಮೂಲಕ ಮುಸ್ಲಿಂ ಸಮುದಾಯದ ಬದುಕನ್ನು ಸಾರ್ವತ್ರೀಕರಿಸಲು ಪ್ರಯತ್ನಿಸಿದ್ದು ಗಮನಾರ್ಹವಾಗಿದೆ.

ಸಾರಾ ಅವರ ಸಾಹಿತ್ಯದ ಮೂಲ ಉದ್ದೇಶ ಅರಿವು ಸಮಾಜದಲ್ಲಿ ಮೂಡಿಸುವುದಾಗಿದೆ. ಸಮಾಜದಲ್ಲಿ ಅಲ್ಪಸ್ವಲ್ಪ ವಿದ್ಯೆಯನ್ನು ಕಲಿತು ತಕ್ಕ ಮಟ್ಟಿಗೆ ಓದು ಬರಹ ಕಲಿತ ಹೆಣ್ಣುಮಕ್ಕಳು ಓದಿ ಅರ್ಥೈಸಿಕೊಳ್ಳುವುದು ಮತ್ತು ಅವರು ಚಿಂತನೆಯಲ್ಲಿ ತೊಡಗುವಂತೆ ಮಾಡುವುದು ಇವರ ಸಾಹಿತ್ಯದ ಮುಖ್ಯ ಉದ್ದೇಶವಾಗಿದೆ. ಇದಕ್ಕೆ ಪೂರಕವಾಗಿ ಅವರದು ಸರಳ ಕಥನ ಮಾದರಿ. ಅವರ ಕತೆಕಾದಂಬರಿಗಳು ಸರಳವಾದ ಭಾಷೆ ಮತ್ತು ನೇರ ನಿರೂಪಣೆಯಿಂದ ಕೂಡಿದ್ದು ಗೊಂದಲಗಳಿಲ್ಲದಂತೆ ಸುಲಭವಾಗಿ ಓದಿಸಿಕೊಂಡು ಹೋಗುತ್ತದೆ. ಬಹುಪಾಲು ಕಥೆಗಳು ನೇರ ನಿರೂಪಣೆಯ ವಿಧಾನವನ್ನು ಒಳಗೊಂಡಿವೆ. ಇಡೀ ಕತೆಯನ್ನು ಓದುಗರಿಗೆ ನಿರೂಪಕಿಯೇ ನಿವೇದಿಸಿಕೊಳ್ಳುತ್ತಾರೆ. ಈ ಹಿನ್ನೆಲೆಯಲ್ಲಿ ಅವರು ಪರೋಕ್ಷ ಪಾತ್ರವಾಗಿ ತಮ್ಮ ಆಶಯವನ್ನು ಕಟ್ಟಿಕೊಡಲು ಪ್ರಯತ್ನಿಸುತ್ತಾರೆ. ಇಲ್ಲಿ ಕಥಾವಸ್ತುವಿನ ಎಲ್ಲಾ ವಿವರಗಳನ್ನು ನಿರೂಪಕಿ ತಮ್ಮ ಸಾಕ್ಷಿಪ್ರಜ್ಞೆಯ ನೆಲೆಯಲ್ಲಿಯೇ ತಾವೂ ಒಂದಾಗಿ ನಿರೂಪಿಸಹೊರಟಿರುವುದು ಅವರಿಗೆ ಪ್ರಿಯವಾದುದೆಂದು ತೋರುತ್ತದೆ.

'ಅಂಕುರ', ಹಾಗೂ 'ಉರಿಬಿಸಿಲು' ಕಥೆಗಳಲ್ಲಿ ನಿರೂಪಕಿ ಒಂದು ಪಾತ್ರವಾಗಿ ಕಾಣಿಸಿಕೊಂಡಿದ್ದಾರೇನೋ ಎನ್ನುವಷ್ಟರ ಮಟ್ಟಿಗೆ ಇಲ್ಲಿನ ಕೆಲವೊಂದು ಪಾತ್ರಗಳು ಅವರ ವ್ಯಕ್ತಿತ್ವವನ್ನು ಹೊತ್ತು ನಿಂತಿವೆ. 'ವಿಷ ಉಣಿಸುವವರು' 'ಒಂದು ಬದುಕಿನ ಕೆಲವು ಪುಟಗಳು' ಮತ್ತು 'ಒಂದು ಕಥೆ ಒಂದು ವ್ಯಥೆ' ಈ ಕಥೆಗಳು ಪಾತ್ರನಿರೂಪಣಾ ವಿಧಾನವನ್ನು ಒಳಗೊಂಡಿವೆ. ಎಲ್ಲಾ ಕಥೆಗಳೂ ಸ್ತ್ರೀ ಪಾತ್ರಗಳ ಮೂಲಕವೇ ನಿರೂಪಣೆಗೊಳ್ಳುವುದು ಇವರ ಸಾಹಿತ್ಯದ ವಿಶೇಷ. 'ಬಲೆ' ಕತೆಯಲ್ಲಿ ಮುಗ್ಧ ಹುಡುಗಿಯ ಕುತೂಹಲಕಾರಿ ಪ್ರಶ್ನೆಗಳ ಮೂಲಕ ಬಲೆಯನ್ನು ಬಿಡಿಸುವ ತಂತ್ರವಿದೆ. ಸಾಮಾಜಿಕ ಮತ್ತು ಸಾಂಸ್ಕೃತಿಕ ಪರಿವರ್ತನೆಯ ಚಿಂತನೆಗೆ ಲೇಖಕಿ ಹೆಚ್ಚು ಒತ್ತು ನೀಡಿರುವುದರಿಂದ ಸಾಹಿತ್ಯದಲ್ಲಿ ಕಲಾತ್ಮಕ ಸಿದ್ಧಿಗಿಂತ ಸಾಮಾಜಿಕ ಕಳಕಳಿ ಪ್ರಧಾನವಾಗಿದೆ. ಆದ್ದರಿಂದ ಇಲ್ಲಿ ಸಾಹಿತ್ಯಿಕ ಅಧ್ಯಯನಕ್ಕಿಂತ ಸಾಮಾಜಿಕ, ಸಾಂಸ್ಕೃತಿಕ ಅಧ್ಯಯನವೇ ಹೆಚ್ಚು ಪರಿಣಾಮಕಾರಿಯಾಗಿದೆ. ಸಾಹಿತ್ಯದ ಮೂಲಕ ಸಾಮಾಜಿಕ ಸಂಬಂಧಗಳಿಗೆ ತೆರೆದುಕೊಂಡಿದೆ. ಇವರ ಕೃತಿಗಳಲ್ಲಿ ಕಲಾತ್ಮಕತೆಯೇ ಪ್ರಧಾನವಾಗಿರುವುದಿಲ್ಲ. ಮಹಿಳೆ ಶೋಷಣೆಯ ನೆಲೆಯಿಂದ ಬಿಡಿಸಿಕೊಂಡು ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳಬೇಕೆಂಬ ಆಶಯ ಲೇಖಕಿಯದ್ದಾಗಿರುವುದರಿಂದ ವ್ಯವಸ್ಥೆಯ ಬಗೆಗೆ ಬಂಡಾಯದ ಧ್ವನಿಯಿದೆ. ಹಾಗೆಯೇ ವಿಷಾದ, ನೋವು, ಹಾಸುಹೊಕ್ಕಾಗಿ ಸೇರಿಕೊಂಡಿದೆ. ಇಲ್ಲಿ ಮಹಿಳೆಯ ಬದುಕಿನ ಭಾವನಾತ್ಮಕ ತುಡಿತ ಪ್ರಧಾನಭೂಮಿಕೆಯಲ್ಲಿ ನಿಂತಿದೆ. ಅವರ ಕಥೆ, ಕಾದಂಬರಿಗಳು ಮತ್ತೆ ಮತ್ತೆ ಪರಿಹಾರಾತ್ಮಕ ಚಿಂತನೆಯನ್ನು ನಡೆಸಿದಂತೆ ತೋರುತ್ತದೆ. ಸಮಸ್ಯೆಯ ಮೂಲವನ್ನು ಅರಿಯುವ, ಪರಿಶೀಲನೆಗೆ ಒಳಪಡಿಸುವ ಸಂದರ್ಭದಲ್ಲಿ ವಸ್ತುನಿಷ್ಠತೆ ಮತ್ತು ವಿಚಾರಪರತೆ

ಇದೆ. ಹೆಣ್ಣಿನ ಬದುಕಿನ ಘಟನಾವಳಿಗಳನ್ನು ಚಿತ್ರಿಸುವಾಗ ಅದಕ್ಕೆ ಪೂರಕವಾದ ಸಾಮಾಜಿಕ ಮತ್ತು ಕೌಟುಂಬಿಕ ಸಮಸ್ಯೆಗಳನ್ನು ವಾಚ್ಯ ನೆಲೆಯಲ್ಲಿ ಅಭಿವ್ಯಕ್ತಿಸುತ್ತಾರೆ. ಆದರ್ಶದ ಕಲ್ಪನೆಗಿಂತ ವಾಸ್ತವಿಕವಾದ ಸಮಾಜಮುಖಿ ಚಿಂತನೆಗಳ ಮಂಥನವಿದೆ. ಸಾಹಿತ್ಯದ ಒಳಮೈಯಲ್ಲಿ ಸಂಬಂಧಗಳ ಶೋಧನಕ್ರಿಯೆ ಇದೆ. ಸಹನೆ ಮತ್ತು ಸಂಘರ್ಷ ಕೆಲವೆಡೆ ಗುಪ್ತಗಾಮಿನಿಯಾಗಿದ್ದರೆ ಮತ್ತೆ ಕೆಲವೆಡೆ ಮುಖಾಮುಖಿಯಾಗುವುದನ್ನು ಕಾಣಬಹುದು. ಉದಾಹರಣೆಗೆ 'ಚಂದ್ರಗಿರಿ ತೀರದಲ್ಲಿ' 'ವಜ್ರಗಳು' ಕಾದಂಬರಿಯಲ್ಲಿ ಗುಪ್ತಗಾಮಿನಿಯಾದರೆ, 'ಸಹನಾ' ಕಾದಂಬರಿಯಲ್ಲಿ ಮುಖಾಮುಖಿಯಾಗುತ್ತವೆ. ಗೋಡೆ, ಸುಣ್ಣ, ಬಲೆ ಕಥೆಗಳಲ್ಲಿ ಅಂತರ್‌ಗಾಮಿನಿಯಾದರೆ, ಅಂಕುರ, ಸಾರಾಂಶ ಧ್ವನಿಯಿಲ್ಲದ ನೋವುಗಳು, ನಿಯಮ ನಿಯಮಗಳ ನಡುವೆ ಧರ್ಮ ಬಲೆ ಬೀಸಿದಾಗ ಕಥೆಗಳಲ್ಲಿ ಮುಖಾ ಮುಖಿ ಇದೆ.

ಸಾರಾ ಅವರ ಸಾಹಿತ್ಯದ ಸ್ವರೂಪದಲ್ಲಿ ಮುಖ್ಯವಾಗಿ ಗಮನಿಸಬೇಕಾದ ಮತ್ತೊಂದು ಅಂಶವೆಂದರೆ ವಾಚ್ಯಾಭಿವ್ಯಕ್ತಿ. ಲೇಖಕಿಗೆ ಹೆಣ್ಣಿನ ಬಾಳು ನರಕಕ್ಕೆ ದೂಡಲ್ಪಡುತ್ತಿರುವುದರ ಬಗ್ಗೆ ಅಪಾರ ಆಕ್ರೋಶವಿದೆ. ಹೆಣ್ಣಿಗೆ ಯಾವುದು ವಿರೋಧ ಘಟಕವಾಗಿ ಎದುರಾಗಿದೆಯೋ ಅದರೊಳಗೆ ಲೇಖಕಿ ಪ್ರವೇಶ ಪಡೆದು ವಾಚ್ಯವಾಗಿ ವಿರೋಧಿಸುವುದನ್ನು ಗಮನಿಸಬಹುದು. ಇದರಿಂದ ಓದುಗರ ಚಿಂತನೆಗೆ ಅವಕಾಶವಿಲ್ಲದಂತೆ ಸಿನಿಮೀಯ ರೀತಿಯಲ್ಲಿ ಉತ್ತರ ಸಿಕ್ಕಿಬಿಡುತ್ತದೆ. ಅಂದರೆ ಕಥೆಯ ಒಡಲು ಏನು? ಅದು ಸಾಗುತ್ತಿರುವ ದಿಕ್ಕು ಯಾವುದು? ಲೇಖಕಿಯ ಧೋರಣೆ ಯಾವುದು? ಎಂಬ ವಿವರಗಳು ಸುಲಭವಾಗಿ ತಿಳಿದುಬಿಡುತ್ತವೆ. ಬಹಳಷ್ಟು ಸಂದರ್ಭಗಳಲ್ಲಿ ಸಾರಾ ಅವರಿಗೆ ಈ ಸಮಸ್ಯೆ ಎದುರಾದಂತೆ ಕಾಣುತ್ತದೆ.

ಸಾರಾ ಅವರ ಕಥೆಗಳಲ್ಲಿ ಅಪ್ರಮಾಣಿಕತೆ ಮತ್ತು ಅನ್ಯಾಯಗಳನ್ನು ಎತ್ತಿ ತೋರಿಸುವ ನ್ಯಾಯಗುಣಗಳಿವೆ. ಹೀಗಾಗಿ ಅವರ ಕತೆ ಕಾದಂಬರಿಗಳಲ್ಲಿ ವ್ಯವಸ್ಥೆಯ ದೋಷಗಳ ಬಗ್ಗೆ ಆಕ್ರೋಶವಿದೆ.

## ಅಧ್ಯಾಯ-೫
# ಕಾದಂಬರಿ ಮತ್ತು ಕಥೆಗಳ ಕಥಾವಸ್ತು

**ಕಾದಂಬರಿಗಳ ಕಥಾವಸ್ತು:**

ಮುಸ್ಲಿಂ ಸಮುದಾಯದಲ್ಲಿ ಜಟಿಲವಾದ ಸಮಸ್ಯೆಯಾಗಿರುವ 'ತಲಾಖ್' ಪದ್ಧತಿ ಸಾರಾ ಅವರ ಬಹುಪಾಲು ಕಥೆ ಕಾದಂಬರಿಗಳ ವಸ್ತುವಾಗಿದೆ. ಈ ಹಿನ್ನೆಲೆಯಿಂದಲೇ ಉದ್ಭವಿಸಬಹುದಾದ ಹಲವಾರು ಸಮಸ್ಯೆಗಳನ್ನು ಕಥೆಗಳು ನಿರ್ದಿಷ್ಟವಾಗಿ ಚಿತ್ರಿಸಿದರೆ ಕಾದಂಬರಿಗಳು ಸಮಗ್ರವಾಗಿ ಚಿತ್ರಿಸಿವೆ. ಅವರ 'ಚಂದ್ರಗಿರಿ ತೀರದಲ್ಲಿ' ಕಾದಂಬರಿ ತಲಾಖ್ ಸಂಬಂಧವಾದ ಸಮಸ್ಯೆಗಳ ಪದರಗಳನ್ನು ಸಮಗ್ರವಾಗಿ ಚಿತ್ರಿಸಿದರೆ, 'ಸಹನಾ' ಕಾದಂಬರಿ 'ಬಹುಪತ್ನಿತ್ವ' ಪದ್ಧತಿಯನ್ನು ಕುರಿತು ವಿಶ್ಲೇಷಿಸುತ್ತದೆ. 'ವಜ್ರಗಳು' ಕಾದಂಬರಿ ತಲಾಖ್ ಮತ್ತು ಅನಂತರದ ಬಹುಪತ್ನಿತ್ವ ಪದ್ಧತಿಯ ಹಿನ್ನೆಲೆಯಲ್ಲಿ ಹೆಣ್ಣು ಅನುಭವಿಸಬೇಕಾದ ಅತಂತ್ರಸ್ಥಿತಿಯ ಸಂಕೀರ್ಣತೆಯನ್ನು ಹಿಡಿದಿಟ್ಟಿವೆ. ಇಲ್ಲಿ ಹೆಣ್ಣನ್ನು ಒಬ್ಬರಿಂದ ಒಬ್ಬರಿಗೆ ಸರಕುಗಳಂತೆ ರವಾನಿಸುವ ಚಿತ್ರಣವಿದೆ. ಹಾಗೂ ಇಂತಹ ಹಿಡಿತಗಳಿಂದ ಹೆಣ್ಣು ಬಿಡಿಸಿಕೊಂಡು ಸ್ವತಂತ್ರವಾಗಿ ಬದುಕುವ ಆಶಯವನ್ನು ಪ್ರತಿಪಾದಿಸಿದೆ. 'ಕದನ ವಿರಾಮ' ಕಾದಂಬರಿಯು ಎಲ್ಲಾ ಸಮುದಾಯದ ಹೆಣ್ಣುಗಳನ್ನು ಕಾಡುತ್ತಿರುವ ಸಾಮಾಜಿಕ ಸಮಸ್ಯೆಯಾದ ವರದಕ್ಷಿಣೆ ಪದ್ಧತಿಯ ಕರಾಳತೆಯನ್ನು ಬಿಂಬಿಸಿದರೆ ಪಂಜರ ಕಾದಂಬರಿಯು ಹಿಂದೂ ಪುರುಷ ಸಮಾಜದಲ್ಲಿ ಹೆಣ್ಣಿಗೆ ಆಗುವ ಮೋಸ, ಕ್ರೌರ್ಯ ಗಂಡಿನ ಢಾಂಬಿಕತನ, ದರ್ಪ ಹಾಗೂ ವಿಕೃತ ವ್ಯಕ್ತಿತ್ವಗಳನ್ನು ತೆರೆದಿಡುತ್ತದೆ. ಆ ಮೂಲಕ ಅವಿವಾಹಿತ ಹೆಣ್ಣೋರ್ವಳ ಮಾನಸಿಕ ತಳಮಳ ಮತ್ತು ತಾಯಿ ಹೃದಯದ ಮಿಳಿತವನ್ನು ಬಿಚ್ಚಿಡುತ್ತದೆ. ಒಟ್ಟಾರೆ ಸಾಮಾಜಿಕ ವ್ಯವಸ್ಥೆ ಹೆಣ್ಣಿನ ಬಾಳಿಗೊಂದು 'ಪಂಜರದಂತಿದೆ ಎಂಬುದನ್ನು ಅಭಿವ್ಯಕ್ತಿಸಿದೆ.' 'ತಳ ಒಡೆದ ದೋಣಿಯಲ್ಲಿ' ಕಾದಂಬರಿಯು ಪ್ರಾಮಾಣಿಕ ಅಧಿಕಾರಿಯೊಬ್ಬನು ಭ್ರಷ್ಟ ಸಮಾಜದಲ್ಲಿ ಎದುರಿಸಬೇಕಾದ ಸಂಕಷ್ಟಗಳು, ಬಡತನ, ರೈತನ ಸಮಸ್ಯೆ, ರಾಜಕೀಯ ಸ್ವಾರ್ಥ- ಇವೇ ಮೊದಲಾದ ವಸ್ತುವಿಷಯಗಳ ಹಿನ್ನೆಲೆಯಲ್ಲಿ ರಚನೆಗೊಂಡಿದ್ದು ಸಾರಾ ಅವರ ತುಡಿತ ಸಮಾಜದ ಇತರ ಸಮಸ್ಯೆಗಳ ಕಡೆಗೂ ಇರುವುದನ್ನು ಸೂಚಿಸುತ್ತದೆ.

'ಸುಳಿ' ಕಾದಂಬರಿಯು ಸಾರಾ ಅವರ ಅಭಿವ್ಯಕ್ತಿಯ ನೆಲೆ ಸಂಕೀರ್ಣಗೊಂಡಿರುವುದಕ್ಕೆ ಸಾಕ್ಷಿ. ಸಾಹಿತ್ಯ ರಚನೆಯ ಮಾದರಿ ಜನಪ್ರಿಯ ಮಾದರಿಯೇ ಆಗಿದ್ದರೂ, ಅದರ ಹಿಂದೆ ಅಡಗಿರುವ ಲೇಖಕಿಯ ಸಾಮಾಜಿಕ ಕಳಕಳಿ ಗಂಭೀರವಾದುದು. ಬದಲಾಗುತ್ತಿರುವ ಹಿಂದೂ ಮುಸ್ಲಿಂ ಮೊದಲಾದ ಸಮಾಜಗಳ ಚಿತ್ರಣ ಇಲ್ಲಿ ಕಂಡುಬರುತ್ತದೆ. ಈ ಕಾದಂಬರಿಯು ಮುಸ್ಲಿಂ ಸಮಾಜದ ಲಿಂಗತಾರತಮ್ಯ, ವರ್ಗ ತಾರತಮ್ಯ ಎಂತಹ ಸಮಸ್ಯೆಗಳನ್ನು ಹುಟ್ಟುಹಾಕುತ್ತದೆ. ಯುವ ಜನಾಂಗದ ಮೇಲಾಗುವ ಪರಿಣಾಮಗಳು ಹೇಗೆ ಮಾರಕವಾಗುತ್ತವೆ, ಮೋಸ, ವಂಚನೆ, ಕಪಟ ಕಾನೂನು ಬಾಹಿರ ಕೃತ್ಯಗಳನ್ನು ನಿರುಮ್ಮಳವಾಗಿ ನಡೆಸುವ ವ್ಯಾಪಾರಿ ಮನೋಭಾವದ ಹಣವಂತರು, ಬಡತನ ನಿರುದ್ಯೋಗ, ಅಸಹಾಯಕತೆಗಳನ್ನು ಬಳಸಿಕೊಂಡು, ಊರಿನ ಯುವಶಕ್ತಿಯನ್ನು ಸಮಾಜ ಬಾಹಿರ ಕುಕೃತ್ಯಗಳಿಗೆ ತೊಡಗಿಸಿ ಅವರಲ್ಲಿನ ಸ್ವಾಭಿಮಾನ, ಗೌರವ, ಅಂತಃಶಕ್ತಿಯನ್ನು ಬಲಿಕೊಡುವ ಚಿತ್ರಣಗಳಿವೆ. ಇಲ್ಲಿ ಮುಗ್ಧರಾದ ಯುವಕರು ಇದರೊಳಗಿನ 'ಸುಳಿ'ಗಳನ್ನು ಅರಿಯಲಾರದೆ ಉತ್ಸಾಹದಿಂದ

ಮುನ್ನುಗ್ಗಿ ಹಿಂದಿರುಗಿ ಬರಲಾರದಷ್ಟು ದೂರ ಹೋಗುತ್ತಾರೆ. ಮುಂದಿನ ದಾರಿ ಕಾಣದೆ, ಬಲಿಷ್ಠ ಹಿಡಿತಗಳಿಂದ ಬಿಡಿಸಿಕೊಳ್ಳಲಾರದೆ ಇದರೊಳಗೇ ತಮ್ಮ ಬದುಕು ಕಂಡುಕೊಳ್ಳುವ ಪ್ರಯತ್ನ ಮಾಡುತ್ತಾರೆ. ಈ ಕಾರಣಗಳಿಂದ ಉಂಟಾಗುವ ನೂರಾರು ಸಮಸ್ಯೆಗಳು, ಕಾನೂನು ತೊಡಕುಗಳು, ಅಪಾರ. ಹಾಗೆಯೇ ಶೋಷಕ ಮತ್ತು ಶೋಷಿತರ ಚಿತ್ರಣಗಳು ವೈಚಾರಿಕ ನೆಲೆಯಲ್ಲಿ ಬಿಂಬಿತವಾಗಿವೆ. ಮತೀಯ ಚೌಕಟ್ಟಿನೊಳಗೆ ಪುರುಷರ ದಬ್ಬಾಳಿಕೆ, ಬಡ ಜನತೆಯ ದಾರುಣ ಬದುಕು, ರಾಜಕಾರಣಿಗಳ ಕುಟಿಲತೆ, ಉಳ್ಳವರ ಖಯಾಲಿತನಗಳು, ರಾಜಕೀಯಕ್ಕೆ ಮತೀಯ ಆವರಣಗಳನ್ನು ನಿರ್ಮಿಸಿಕೊಂಡು ನಡೆಸಲಾಗುವ ಸಮಾಜ ಬಾಹಿರ ಮತ್ತು ಧರ್ಮ ಬಾಹಿರ ಕೃತ್ಯಗಳು ಅನಾವರಣಗೊಂಡಿವೆ. ವ್ಯವಸ್ಥೆಯಲ್ಲಿ ಪುರುಷರು ಪಟ್ಟಭದ್ರ ಹಿತಾಸಕ್ತಿಗಳು, ಬಡವರ, ಮಹಿಳೆಯರ ವಿರುದ್ಧವೇ ಸಂಚು ಹೂಡುವ ಅವರ ಮುಗ್ಧತೆ ಅಸಹಾಯಕತೆ ಮತ್ತು ನಂಬಿಕೆಯನ್ನು ದುರುಪಯೋಗ ಪಡಿಸಿಕೊಳ್ಳುವ ಚಿತ್ರಣವಿದೆ.

ಒಟ್ಟಾರೆ 'ಸುಳಿ' ಕಾದಂಬರಿಯಲ್ಲಿ 'ಶೋಷಣೆ' ಎಂಬುದು ಲೀಲಾಜಾಲವಾಗಿ ಹರಿದಾಡಿದೆ. ಸಂಬಂಧದೊಳಗಿನ ನೂರಾರು ಸೂಕ್ಷ್ಮ ಸಂವೇದನೆಗಳು ಪಿಸುಗುಟ್ಟಿವೆ. ಸಂಕೀರ್ಣವಾದ ಜೀವನದ ಆಗುಹೋಗುಗಳು ಸಾಗುವ ದಾರಿಯಲ್ಲಿ ಗುರಿ ತಪ್ಪಿದಾಗ ಆಗಬಹುದಾದ ಅನಾಹುತಗಳ ಸ್ಪಷ್ಟ ನಿದರ್ಶನವಿದೆ. ಹಣದ ಆಸೆಗೆ ಕೈಯಿಟ್ಟು ಭ್ರಷ್ಟರ ಕೃತ್ಯಗಳು ಅವರ ಮನೆಗಳನ್ನೇ ಸುಟ್ಟು ಸುಣ್ಣವಾಗಿಸುವ ಚಿತ್ರಣಗಳಿವೆ. ಶೋಷಕ ಶೋಷಿತ ನೆಲೆಗಳ ವೈದೃಶ್ಯದಲ್ಲಿ ನಿರೂಪಕಿಯ ಆಶಯಕ್ಕೆ ಸೂಕ್ತವಾದ ಮತ್ತು ನೇರವಾದ ಅಭಿವ್ಯಕ್ತಿ ಇದೆ.

ಸ್ತ್ರೀ ವಿಮೋಚನಾ ಬರವಣಿಗೆಯ ನೆಲೆಯಿಂದ ಬಂದ ಸಾರಾ ಅವರ ಪ್ರಧಾನ ಕಾಳಜಿ ಅರಿವು. ಆ ಮೂಲಕ ಸಾಮಾಜಿಕ ಬದಲಾವಣೆಯ ಆಶಯ ಈ ಹಿನ್ನೆಲೆಯಲ್ಲಿ ಬಂಡಾಯ ಮನೋಧರ್ಮವಿದೆ. ವ್ಯವಸ್ಥೆಯನ್ನು ವಿರೋಧಿಸುತ್ತಲೇ ಶೋಷಿತರ ಮನಸ್ಸನ್ನು ಬಡಿದೆಬ್ಬಿಸುವ ಕಾವಿನೊಂದಿಗೆ ಮಾನವೀಯತೆಯ ಸಿಂಚನವಿದೆ. ಸ್ತ್ರೀ ಸಮಾನತೆಯ ಬಯಸುವ ಸಾಮಾಜಿಕ ಕಾಳಜಿಯೂ ಇಲ್ಲಿದೆ.

**ಕಥೆಗಳಲ್ಲಿ ಕಥಾ ವಸ್ತು:**

ಸಾರಾ ಅವರ ಕಥೆಗಳು ಇಸ್ಲಾಂನ ಧಾರ್ಮಿಕ, ಸಾಮಾಜಿಕ, ಸಾಂಪ್ರದಾಯಿಕ ಬದುಕನ್ನು ಭಿನ್ನವಾಗಿ ನೋಡುವ ಕಥಾ ವಸ್ತುಗಳನ್ನು ಒಳಗೊಂಡಿದೆ.

'ಚಪ್ಪಲಿಗಳು' ಕತೆ ಇಸ್ಲಾಂ ಧರ್ಮದ ಸಂಪ್ರದಾಯಿಕ ಚೌಕಟ್ಟಿನೊಳಗಿನ ಗಂಡು-ಹೆಣ್ಣಿನ ಸಂಬಂಧಗಳನ್ನು ವಿಶ್ಲೇಷಿಸಿದರೆ, 'ಧರ್ಮ ಬಲೆಬೀಸಿದಾಗ' ಕತೆ ಮತೀಯ ಧೋರಣೆಯನ್ನು, 'ನಾವು ನಮ್ಮವರು' ಕತೆ ಹಾಗೂ 'ವಿಷ ಉಣಿಸುವವರು' ಕತೆ ಕೋಮುವಾದಿ ಧೋರಣೆಯನ್ನೂ 'ವಿಜ್ಞಾನ ಭವಿಷ್ಯ ನುಡಿದಾಗ' ಕತೆ ಗಂಡುಮಕ್ಕಳ ಹಂಬಲ ಮತ್ತದರ ಸುತ್ತಮುತ್ತ ಹಾಗೂ ವಿಜ್ಞಾನದ ಬೆಳವಣಿಗೆಯನ್ನು ದುರುಪಯೋಗಪಡಿಸಿಕೊಳ್ಳುತ್ತಿರುವ ಗಂಡಿನ ಧೋರಣೆಯ ಕುರಿತಾಗಿ ಚಿಂತಿಸಿವೆ. 'ಬಿತ್ತಿ ಬೆಳೆದವರು' ಕತೆ ಆರ್ಥಿಕ ಅಸಮಾನತೆಯನ್ನೂ, 'ನಿಮ್ಮೊಡನಿದ್ದು' ಕತೆ ಅಸ್ಪೃಶ್ಯತೆಯ ಸಮಸ್ಯೆಯನ್ನು, 'ಮರಿಯಮ್ಮನ ಅಳಿಯ' ಕತೆ ವರದಕ್ಷಿಣೆ, ಬಡತನ, ಹಸಿವುಗಳನ್ನೂ, ಬಿಂಬಿಸಿದರೆ; 'ಬಿರುಗಾಳಿ', 'ಮಸೀದಿ ಕಟ್ಟುವವರು', 'ಅರಕ್ಷಿತ', 'ಬಿಸಿಲ್ಗುದುರೆಯ ಬೆನ್ನು ಹತ್ತಿ', ಕಥೆಗಳು ವರ್ಗ ತಾರತಮ್ಯವನ್ನು ಚಿತ್ರಿಸುತ್ತದೆ. 'ಒಂದು ಕತೆ ಒಂದು ವ್ಯಥೆ',

'ಗೋಡೆ' - 'ನಿಯಮ ನಿಯಮಗಳ ನಡುವೆ', 'ಧ್ವನಿಯಿಲ್ಲದ ನೋವುಗಳು', 'ಅಂಕುರ', ಇವು ಮದುವೆ, ತಲಾಖ್ ವರದಕ್ಷಣಿಗಳಂತ, ಬಹುಪತ್ನಿತ್ವ, ಮರುವಿವಾಹಗಳಂಥ ಸಾಮಾಜಿಕ ಪಿಡುಗುಗಳು ಕುಟುಂಬಗಳನ್ನು ವಿಘಟಿಸುತ್ತಾ ಅಶಾಂತಿಯಕಡೆಗೆ ನೂಕುವುದನ್ನು ಚಿತ್ರಿಸುತ್ತವೆ. 'ಖೆಡ್ಡಾ', 'ಬಲೆ', 'ಒಂದು ಬದುಕಿನ ಕೆಲವು ಪುಟಗಳು', 'ದೋಣಿಸಾಗಲಿ', 'ಹುಟ್ಟು', 'ಬಂದಣಿಗೆ', 'ಸಾರಾಂಶ', 'ಪಯಣ' ಇವು ಅಂತರಜಾತಿಯ ವಿವಾಹವನ್ನು ಹಾಗೂ ಸ್ತ್ರೀ ಶೋಷಣೆಯ ಹಲವು ಮುಖಗಳನ್ನು ನಮ್ಮ ಮುಂದೆ ತೆರೆದಿಡುತ್ತವೆ. 'ಉರಿಬಿಸಿಲು' ಕತೆ ಹೆಣ್ಣಿನ ಆಯ್ಕೆ ಸ್ವಾತಂತ್ರ್ಯ ಮತ್ತು ಬಹುಪತ್ನಿತ್ವವನ್ನು ಕುರಿತಾಗಿ ಬಂಡಾಯ ಸಾಹಿತ್ಯದ ಹಿನ್ನೆಲೆಯಲ್ಲಿ ವಿವೇಚಿಸಿದೆ. 'ಅರ್ಧ ರಾತ್ರಿಯಲ್ಲಿ ಹುಟ್ಟಿದ ಕೂಸು', ಮತ್ತು 'ಯುದ್ಧ' ಸ್ವಾತಂತ್ರ್ಯದ ಘಟನಾವಳಿಗಳನ್ನು ಬಿಂಬಿಸುವ ಕತೆಗಳಾಗಿದ್ದು, ದೇಶಪ್ರೇಮ ಮತ್ತು ಕುಟುಂಬ ಕ್ಷೇಮ ಇವೆರಡನ್ನೂ ಸಮೀಕರಿಸಿಕೊಂಡು ಹೆಣೆಯಲ್ಪಟ್ಟಿದೆ. ಅರ್ಧರಾತ್ರಿಯಲ್ಲಿ ದೊರೆತ ಸ್ವಾತಂತ್ರ್ಯ, ಇದರ ಜೊತೆಗೆ ಬಳುವಳಿ ಎಂಬಂತೆ ಬಂದ ಕೋಮುಗಲಭೆ, ಹಿಂದೂ ಮುಸ್ಲಿಂ ದ್ವೇಷಾಸೂಯೆ, ಅಮಾನವೀಯವಾದ ದೌರ್ಜನ್ಯದ ಮುಖಗಳನ್ನು ಕಲಾತ್ಮಕವಾಗಿ, ಮಾರ್ಮಿಕವಾಗಿ ಧ್ವನಿಸುವ ಕಥೆಯಾಗಿವೆ. ತಮ್ಮ ಸ್ವಾರ್ಥ, ಪ್ರತಿಷ್ಠೆ ಹಾಗೂ ಧರ್ಮವನ್ನೇ ಆಧರಿಸಿ ನಡೆದ ಯುದ್ಧ ಯಾರಿಗೂ ಹಿತಕಾರಿಯಾಗದೆ ಎರಡೂ ದೇಶಗಳ ಅಮಾಯಕ ಮುಗ್ಧ ಜೀವಿಗಳನ್ನು ಬಲಿ ತೆಗೆದುಕೊಳ್ಳುವುದನ್ನು ಚಿತ್ರಿಸುತ್ತಲೇ, ಅಂಥ ಒಂದು ಅನಾಗರಿಕ ವರ್ತನೆಗಳಿಂದ ಬಿಡಿಸಿಕೊಂಡು, ಜಾತಿ ಧರ್ಮ ಮರೆತು ಮಾನವೀಯತುಡಿತಗಳೆಡೆಗೆ ಸಾಗುವ ಆಶಯವನ್ನು ಕತೆ ಬಿಂಬಿಸಿದೆ.

ಮುಸ್ಲಿಂ ಮೂಲಭೂತವಾದಿ ವೈಯಕ್ತಿಕ ಕಾನೂನುಗಳಿಂದ ಹೊರಬರಲು 'ಹಳೆ ಬೇರು ಹೊಸ ಚಿಗುರು' ಕತೆ ಆಶಿಸುತ್ತದೆ. ಧಾರ್ಮಿಕ ಮಿತಿಗಳು ಸಾಮಾಜಿಕ ಜೀವನ ಕ್ರಮಕ್ಕೆ ಹೊಂದಿಕೊಳ್ಳದಾದಾಗ ಸಂಘರ್ಷ ಅನಿವಾರ್ಯವೆಂಬಂತೆ ಏರ್ಪಡುತ್ತದೆ. ಹೊಸ ತಿಳಿವಳಿಕೆಗಳು ಹಳೆಯ ನಂಬಿಕೆಗಳೊಂದಿಗೆ ಹೊಂದಿಕೆಯಾಗದೆ ಹೊಸತು ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳುವುದನ್ನ ನೂರುನ್ನೀಸಾ ಪಾತ್ರದ ಮೂಲಕ ಸಾಧಿಸಲು ಪ್ರಯತ್ನಿಸಿದ್ದಾರೆ. ಒಬ್ಬರ ಬರಹದ ಮೇಲೆ ಇನ್ನೊಬ್ಬರು ಹಕ್ಕು ಚಲಾಯಿಸಿ ತಮ್ಮದನ್ನಾಗಿಸಿಕೊಳ್ಳುವ ಕೃತಿಚೌರ್ಯದಂಥ ಬೌದ್ಧಿಕ ವ್ಯಭಿಚಾರವನ್ನು 'ಅಪಹರಣ' ಕತೆ ಒಳಗೊಂಡಿದ್ದರೆ, 'ಬಿಸಿಲ್ಕುದುರೆಯ ಬೆನ್ನು ಹತ್ತಿ' ಕತೆ ಸಹ ಇದೇ ಜಾಡಿನಲ್ಲಿ ಹೆಜ್ಜೆ ಹಾಕುತ್ತದೆ. ಹುಡುಗಿಯೊಬ್ಬಳ ಮುಗ್ಧ ಮನಸ್ಸು ಘಾಸಿಗೊಳ್ಳಲು ಸಣ್ಣ ಸಣ್ಣ ಕಾರಣಗಳೇ ಸಾಕು. ಅವುಗಳು ಅವಳ ಮಾನಸಿಕ ಸೂಕ್ಷ್ಮಾವಸ್ಥೆಯ ಭಾವಲೋಕವನ್ನು ಪ್ರವೇಶಿಸಿ ತಮ್ಮ ಹಿಡಿತಕ್ಕೆ ತೆಗೆದುಕೊಂಡು ಅಸಹಜ ಸ್ಥಿತಿಗೆ ಕೊಂಡೊಯ್ಯುವ ದುರಂತವನ್ನು 'ನೀಲಿ ಚಿತ್ರದ ಕೆಂಬಣ್ಣ' ಕತೆ ಬಿಂಬಿಸಿದೆ. ತಂದೆತಾಯಿಯರ ಸ್ವಪ್ರತಿಷ್ಠೆಗಾಗಿಯೋ, ಒತ್ತಡಕ್ಕಾಗಿಯೋ ವೈವಾಹಿಕ ಸಂಬಂಧ ಮುರಿದು ಬೀಳುವ ಹಂತಕ್ಕೆ ಬಂದು ಕೊನೆಗೆ ತನ್ನದೇ ನಿರ್ಧಾರದಂತೆ ಬದುಕಿನ ದಾರಿಯನ್ನು ಆಯ್ದುಕೊಳ್ಳುವುದರ ಮೂಲಕ ಸುಖಾಂತವಾಗುವುದನ್ನು 'ಸಲಹೆ' ಕತೆ ನಿರೂಪಿಸುತ್ತೆ. ಸಂಪ್ರದಾಯದ ಚೌಕಟ್ಟಿನೊಳಗಿನಿಂದ ಲಾಭನಷ್ಟಗಳ ಲೆಕ್ಕಾಚಾರ ಹಾಕುತ್ತಾ ಕೂತ ಅಣ್ಣಂದಿರ ಒತ್ತಾಯಕ್ಕೆ ಮಣಿಯದೆ ತನ್ನ ಬದುಕಿನ ತೀರ್ಮಾನಗಳನ್ನು ತಾನೇ ತೆಗೆದುಕೊಳ್ಳುವ ಗಟ್ಟಿತನವನ್ನು 'ನಿರ್ಧಾರ' ಕತೆಯಲ್ಲಿ ಕಾಣಬಹುದಾಗಿದೆ.

## ಅಧ್ಯಾಯ-೬
# ಕಥಾ ಸಾಹಿತ್ಯದಲ್ಲಿ ಕೇಂದ್ರ ನೆಲೆಯಾಗಿ ಮಹಿಳೆ

ಆಧುನಿಕ ಕನ್ನಡ ಸಾಹಿತ್ಯದ ಸಂದರ್ಭದಲ್ಲಿ ಮೊದಲಬಾರಿಗೆ ಮುಕ್ತವಾಗಿ ಸಾಹಿತ್ಯ ಕ್ಷೇತ್ರವನ್ನು ಪ್ರವೇಶಿಸಿದ ದಲಿತರು, ಶೂದ್ರರು ಶ್ರೇಣೀಕೃತ ಸಮಾಜದಲ್ಲಿನ ಅತ್ಯಂತ ಕೆಳಸ್ತರದಿಂದ ಬಂದಂತಹ ಶ್ರಮಿಕ ವರ್ಗದವರು ಹಾಗೂ ವಿಶೇಷವಾಗಿ ಮುಸ್ಲಿಮರು, ಅದರಲ್ಲಿಯೂ ಮಹಿಳೆಯರು ಮೈಚಳಿಬಿಟ್ಟು ತಮ್ಮನ್ನು ಸೃಜನಶೀಲ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡದ್ದು ನವ್ಯೋತ್ತರದ ಸಂದರ್ಭದಲ್ಲಿ. ಅಲ್ಲಿಯವರೆಗೆ ಮುಸ್ಲಿಂ ಸಮಾಜ ಒಂದು ರೀತಿಯಲ್ಲಿ ಮುಚ್ಚಿದ ಪುಸ್ತಕದಂತೆ ಇತ್ತು. ಇಂತಹ ಅಮೂರ್ತ ಲೋಕದ ರಹಸ್ಯಗಳನ್ನು ಸಾರ್ವತ್ರಿಕ ನೆಲೆಯಲ್ಲಿ ತೆರೆದಿಡುವ ಕೆಲಸ ನಡೆದದ್ದು ಈ ಸಂದರ್ಭದಲ್ಲಿ ಹಾಗೂ ಇದಕ್ಕೂ ಹಿಂದಿನ ಅನುಭಾವದ ಸಂದರ್ಭದಲ್ಲಿ ಮಾತ್ರ, ಈ ನಡುವಿನ ಕಾಲಘಟ್ಟದಲ್ಲಿ ಸಾಹಿತ್ಯದ ತೀವ್ರತೆ ಹಾಗೂ ಸಾಕ್ಷರತೆಯ ಸ್ವರೂಪವನ್ನು ಶೂನ್ಯವೆಂದೇ ಭಾವಿಸಬಹುದಾಗಿದೆ. ಸಾಹಿತ್ಯವನ್ನು ಸಾಮಾಜಿಕ, ಸಾಂಸ್ಕೃತಿಕ ನೆಲೆಗಳಿಂದ ಶೋಧನೆಗೊಳಪಡಿಸುವ ಕಾಲಘಟ್ಟದಲ್ಲಿ ಆಯಾ ಸಮುದಾಯದ ನೆಲೆಯಿಂದಲೇ ಬಂದ ಬರಹಗಾರರು ಹೆಚ್ಚು ವಸ್ತುನಿಷ್ಠವಾಗಿ, ಸಮೂಹನಿಷ್ಠವಾಗಿ ಬರೆಯಬಲ್ಲ ಶಕ್ತಿಯನ್ನು ಹೊಂದಿದ್ದರು. ಇದರ ಪರಿಣಾಮವಾಗಿ ಇಂದು ಜನಾಂಗನಿಷ್ಠ ಬರವಣಿಗೆಗಳು ಸ್ವೀಕೃತವಾಗಿವೆ. ಪ್ರತಿಯೊಂದು ಸಮುದಾಯದಲ್ಲೂ ಸಾಮಾಜಿಕ ಮತ್ತು ಸಾಂಸ್ಕೃತಿಕ ಬದುಕಿನಲ್ಲಿ ತನ್ನದೇ ಆದ ನಿಯಮಗಳು, ಅನುಭವಗಳು, ಆಚರಣೆ, ಸಂಪ್ರದಾಯಗಳು ಇವೆ. ಇಂತಹ ಬದುಕಿನ ಸೂಕ್ಷ್ಮಗಳನ್ನು ಅವರೇ ಅನಾವರಣ ಮಾಡಿದ್ದರಿಂದಾಗಿ ಅದು ಅವರ ಸಂವೇದನೆಯಾಯಿತು. ಉದಾಹರಣೆಗೆ: ದಲಿತ ಸಂವೇದನೆ, ಶೂದ್ರ ಸಂವೇದನೆ, ಮುಸ್ಲಿಂ ಸಂವೇದನೆ, ಸ್ತ್ರೀ ಸಂವೇದನೆ, ಗ್ರಾಮೀಣ ಸಂವೇದನೆ ಮುಂತಾಗಿ. ಇದನ್ನೇ ರಹಮತ್ ತರೀಕೆರೆಯವರು 'ಪ್ರತಿ ಸಂಸ್ಕೃತಿ' ಎಂದು ಕರೆದಿರುವುದು. ಈ ಹಿನ್ನೆಲೆಯಲ್ಲಿ 'ಆ ಒಂದು ಸಂವೇದನೆ ಸಾಹಿತ್ಯದಲ್ಲಿ ಅಧಿಕೃತವಾಗುವುದು ಅರ್ಥಪೂರ್ಣವಾಗುವುದು ಅದರ ಒಳನೋಟದ ಸೂಕ್ಷ್ಮತೆಯಿಂದ ತನ್ನೊಳಗೆ ಕುದಿಯುವ ನೇರ ಅನುಭವದಿಂದ ಮಾತ್ರ ಸಾಧ್ಯ'[೬] ಎನ್ನುತ್ತಾರೆ ಡಾ. ಬಸವರಾಜ ಸಬರದ.

ಈ ಹಿನ್ನೆಲೆಯಲ್ಲಿ ಭಾರತೀಯ ಸಮಾಜದ ಕೆಳಸ್ತರದ ಜನರನ್ನು ಕಾಡಿದಂತೆ ಭಾರತೀಯ ಮುಸ್ಲಿಂ ಬಾಂಧವರನ್ನು ಹಸಿವು, ಬಡತನ, ಅನಕ್ಷರತೆ ಮತ್ತು ಮೌಢ್ಯಗಳು ಕಾಡಿವೆ. ಆದರೆ ಮುಸ್ಲಿಂ ಧರ್ಮದ ನೆಲೆಯಲ್ಲಿ ಈ ಸಮಸ್ಯೆಗಳು ಭಿನ್ನವಾದ ಸ್ವರೂಪವನ್ನು ಪಡೆದಿರುವುದನ್ನು ಕಾಣಬಹುದು. ಮುಸ್ಲಿಂ ಸಮುದಾಯದ ಧಾರ್ಮಿಕ, ಸಾಮಾಜಿಕ, ಆರ್ಥಿಕ, ರಾಜಕೀಯ, ಆಡಳಿತಾತ್ಮಕವಾದ ಅಸಮಾನತೆಯನ್ನು ಒಳಗೊಂಡಂತೆ ತಲಾಖ್ ಹಾಗೂ ಬಹುಪತ್ನಿತ್ವದಿಂದ ಉಂಟಾಗುವ ಸ್ತ್ರೀ ಶೋಷಣೆ ಮುಂತಾದ ಸಮಸ್ಯೆಗಳು ಈ ಜನಾಂಗದಿಂದ ಬಂದ ಲೇಖಕರನ್ನು ಕಾಡಿರಬಹುದು. ಇದರ ಫಲವಾಗಿ ಹುಟ್ಟಿನಿಂದ ಮುಸಲ್ಮಾನನಾದವನೊಬ್ಬ ಬರೆದ ಸಾಹಿತ್ಯ ಇಸ್ಲಾಂ ಸಂವೇದನೆಯಾಯಿತು. ಸ್ತ್ರೀ ಸಂವೇದನೆಯಲ್ಲಿ ಸ್ತ್ರೀ ವಿಮೋಚನಾ ಆಶಯದಿಂದಲೇ ಬರೆಯ ಹೊರಟ ಶ್ರೀಮತಿ ಸಾರಾಅಬೂಬಕ್ಕರ್, ಮುಸ್ಲಿಂ ಸಮುದಾಯದ ಮಹಿಳೆಯರ ಬದುಕಿನ ಒಳನೋಟಗಳನ್ನು ಎಳೆ ಎಳೆಯಾಗಿ ಬಿಡಿಸುವುದರ ಮೂಲಕ ಆ ಸಮಾಜದ

ಮಹಿಳೆಯರ ವಿಮೋಚನೆಯ ಅಗತ್ಯವನ್ನು ತಮ್ಮ ಬರಹದ ಮೂಲಕ ಒತ್ತಿಹೇಳಿದ್ದಾರೆ.

ಸಮಾಜದಲ್ಲಿ ನಡೆಯುವ ಘಟನೆಗಳು ಅವರ ಸಾಹಿತ್ಯದ ಕಥಾವಸ್ತುವಾದರೆ; ಆ ಕಥೆಗಳ ಕೇಂದ್ರ ನೆಲೆ ಮಹಿಳೆಯಾಗಿದ್ದಾಳೆ. ಮುಸ್ಲಿಂ ಸಮಾಜದ ಮಹಿಳೆ ಪುರುಷ ಪ್ರಧಾನ ವ್ಯವಸ್ಥೆಯ ನೀತಿ, ನಿಯಮಗಳ ಪ್ರಾಬಲ್ಯದಲ್ಲಿ ಸಿಕ್ಕಿ ವೈಯಕ್ತಿಕ ಸ್ವಾತಂತ್ರ್ಯ ಕಳೆದುಕೊಂಡಿದ್ದಾಳೆ. ಈಕೆ ಗಂಡಸರ ಪಾಲಿಗೆ ಸೇವಕಳಾಗಿ, ಜೀವಂತ ವಸ್ತುವಾಗಿ ಒಬ್ಬರ ಕೈಯಿಂದ ಇನ್ನೊಬ್ಬರ ಕೈಗೆ ಸಲೀಸಾಗಿ ರವಾನಿಸಬಹುದಾದ ಸರಕಿನಂತೆ ಆಗಿಬಿಟ್ಟಿದ್ದಾಳೆ ಎಂಬುದನ್ನು ಈ ಲೇಖಕರು ವಿಶದವಾಗಿ ಕಟ್ಟಿಕೊಡುತ್ತಾರೆ. ಕುರಾನಿನ ಧಾರ್ಮಿಕ ನಿಯಮಗಳನ್ನು ಪುರುಷ ತನ್ನ ವೈಯಕ್ತಿಕ ಹಿತಾಸಕ್ತಿಯ ನೆಲೆಯಿಂದ ವ್ಯಾಖ್ಯಾನಿಸಿಕೊಂಡು ತನ್ನಿಷ್ಟದಂತೆ ಅದಕ್ಕೆ ಚಾಲನೆ ನೀಡಿದ್ದಾನೆ. ಹೀಗಾಗಿ 'ತಲಾಖ್', 'ಬಹುಪತ್ನಿತ್ವ'ಗಳಂತಹ ಸಮಸ್ಯೆಗಳನ್ನು ಆ ಸಂಬಂಧವಾದ ಆತಂಕಗಳನ್ನು ಬಹುಪಾಲು ಹೆಣ್ಣು ಅನುಭವಿಸಬೇಕಾದ ಪರಿಸ್ಥಿತಿಯನ್ನು ಸವಿವರವಾಗಿ ಚಿತ್ರಿಸಿದ್ದಾರೆ. ಎಂಥ ಕ್ಷುಲ್ಲಕ ಕಾರಣಕ್ಕಾದರೂ 'ತಲಾಖ್' ನೀಡಬಹುದಾದ ಸಾಧ್ಯತೆಯಿಂದಾಗಿ ಮಹಿಳೆ ನಿರಂತರವಾಗಿ ಅಭದ್ರತೆಯಲ್ಲಿ ಸಂಸಾರವನ್ನು ಸರಿದೂಗಿಸಿಕೊಂಡು ಹೋಗಬೇಕಾದ ಅನಿವಾರ್ಯತೆಗೆ ಸಿಲುಕಿರುವುದು ಎದ್ದು ಕಾಣುತ್ತದೆ.

ಸಾಮಾಜಿಕ ಮತ್ತು ಧಾರ್ಮಿಕ ಅಡಿಪಾಯದ ಮೇಲೆ ಕಟ್ಟಿಕೊಂಡಿರುವ ಮಹಿಳೆಯರ ಕೌಟುಂಬಿಕ ಬದುಕು ಇಲ್ಲಿನ ಕಟ್ಟುಕಟ್ಟಳೆಗೆ ಬದ್ಧವಾಗಿರಬೇಕಾಗುತ್ತದೆ. ಮಕ್ಕಳನ್ನು ಎದುರಿಸುವಾಗ ಅಥವಾ ಅಳುವಾಗ ಸುಮ್ಮನಿರಿಸಲು 'ಗುಮ್ಮ' ಬರುತ್ತಾನೆ ಎಂದು ಹೇಳುವಷ್ಟು ಸುಲಭವಾಗಿ ಇಲ್ಲಿನ ಪುರುಷರು 'ತಲಾಖ್ ಗುಮ್ಮ'ನನ್ನು ಕರೆದು ಪ್ರಯೋಗ ನಡೆಸಿಯೇಬಿಡುತ್ತಾರೆ. ಕುರಾನಿನ ಧಾರ್ಮಿಕ ಆಶಯಗಳಿಗೆ ಪುರುಷ ಸಮಾಜದ ಮೂಲಭೂತವಾದಿಗಳು ಸ್ವಾರ್ಥದ ಲೇಪನವನ್ನು ಹಚ್ಚಿ ಸಾಮಾಜಿಕ ಅಸ್ವಸ್ಥತೆಗೆ ಮೂಲ ಕಾರಣರಾಗಿದ್ದಾರೆ ಎಂಬುದನ್ನು ಸಾರಾ ಅವರ ಕೃತಿಗಳು ನಿಚ್ಚಳವಾಗಿ ಬಿಂಬಿಸಿವೆ.

ಸಾರಾ ಅವರ ಬರವಣಿಗೆಯ ಕೇಂದ್ರನೆಲೆ ಮಹಿಳೆ. ಬದುಕಿನ ಇತರ ಘಟಕಗಳೆಲ್ಲಾ ಅವಳನ್ನೇ ಸುತ್ತುವರಿದಿವೆ. ಅವರು ಮುಸ್ಲಿಂ ಜನಾಂಗದ ಮಹಿಳೆಯರ ಬಹುಮುಖವಾದ ವಿಶಿಷ್ಟ ಸಮಸ್ಯೆಗಳನ್ನು ವಿವೇಚಿಸಿದ್ದಾರೆ. ಇಲ್ಲಿ ಮುಸ್ಲಿಂ ಮಹಿಳೆಯರ ಬದುಕಿನ ವಿವರಗಳು ದಟ್ಟವಾಗಿ ಕಾಣಿಸಿಕೊಂಡಿದ್ದು, ಅವುಗಳನ್ನು ಸುಂದರವಾಗಿ ಅಭಿವ್ಯಕ್ತಿಸಿದ್ದಾರೆ. ಇವರ ಕಥೆ, ಕಾದಂಬರಿಗಳಲ್ಲಿ ಬಹುಪಾಲು ದಾಂಪತ್ಯ ಸಂಬಂಧಗಳು ಅತಂತ್ರ ಸ್ಥಿತಿಯಲ್ಲೇ ಹೊಯ್ದಾಡುತ್ತವೆ. ಬದುಕುವುದಕ್ಕಾಗಿ ಭೂಮಿಯ ಮೇಲಿನ ತಮ್ಮ ಅಸ್ತಿತ್ವಕ್ಕಾಗಿ ನಿರಂತರವಾಗಿ ಹೆಣಗಾಡುತ್ತಾ ನೆಲೆಯೂರಲು ತವಕಿಸುತ್ತವೆ. ಮುಸ್ಲಿಂ ಪುರುಷ ಪ್ರಧಾನ ವ್ಯವಸ್ಥೆ ಧರ್ಮಗ್ರಂಥವನ್ನು ತನ್ನ ಅನುಕೂಲಕ್ಕೆ ತಕ್ಕಂತೆ ಅರ್ಥೈಸಿಕೊಂಡು ಬಹುಪತ್ನಿತ್ವ ಪದ್ಧತಿಯನ್ನು ಹೇಗೆ ಪೋಷಿಸಿಕೊಂಡು ಬರುತ್ತಿದೆ, ಹೀಗೆ ಪೋಷಿಸುತ್ತಲೇ ತನ್ನ ಹಿಂದಿನ ಪತ್ನಿಗೆ ಕೊಡಬೇಕಾದ ಪತಿಯ ಸಂಪತ್ತಿನ ಪಾಲನ್ನು ಕೊಡದೆ ಅವಳನ್ನು ಹೇಗೆ ಶೋಷಣೆಗೆ ಒಳಗು ಮಾಡುತ್ತಿದೆ ಎಂಬುದನ್ನು ಕಾಣುತ್ತೇವೆ. ಇಸ್ಲಾಂ ಧರ್ಮ ನಿಯಮಗಳನ್ನು ಸರಿಯಾಗಿ ಗ್ರಹಿಸದೆ ತನ್ನ ಸ್ವೇಚ್ಛೆ ಹಾಗೂ ಸ್ವಾರ್ಥಕ್ಕೆ ಅನುಕೂಲವಾಗುವಂತೆ ಅರ್ಥೈಸಿಕೊಂಡಿರುವ ಪುರುಷ ಪ್ರಧಾನ ಸಮಾಜದಲ್ಲಿ ಮಹಿಳೆಯ ಅತಂತ್ರವಾದ ಸ್ಥಿತಿ ಗೋಚರವಾಗುತ್ತದೆ.

ಸಾಮಾನ್ಯವಾಗಿ ಹದಿಮೂರು, ಹದಿನಾಲ್ಕು ವರ್ಷದೊಳಗೇ ಸಾಂಸಾರಿಕ ಜೀವನಕ್ಕೆ ಪಾದಾರ್ಪಣೆ ಮಾಡುವ ಹೆಣ್ಣುಮಕ್ಕಳು ಮದುವೆ, ಗಂಡ, ಮಕ್ಕಳು, ಮನೆ, ಸಂಸಾರದ ಆಪ್ತತೆಯನ್ನು ಅರಿಯುವುದಕ್ಕೆ

ಮುನ್ನವೇ ಅದರ ವಿಘಟನೆಯ ಸುಳಿಯಲ್ಲಿ ಸಿಕ್ಕಿ ಒದ್ದಾಡುವ, ಬದುಕುವುದಕ್ಕಾಗಿ ತಮ್ಮ ಕುಡಿಗಳ ಏಳಿಗೆಗಾಗಿ ಪರಿತಪಿಸುತ್ತಾ ಹೇಗಾದರೂ ಜೀವನವನ್ನು ನೂಕಿಕೊಂಡು ಹೋಗುವ ಸ್ಥಿತಿಯ ಚಿತ್ರಣಗಳು ಹೆಚ್ಚು ಕಂಡುಬರುತ್ತವೆ. ಕಟ್ಟಿಕೊಂಡವನು ಯಾವುದೇ ಸುಳಿವು ನೀಡದೆ ನಿರಾತಂಕವಾಗಿ ಬಿಟ್ಟು ಹೋಗುವ, ಹೆಂಡತಿ ಇದ್ದೇ ಇನ್ನೊಬ್ಬಳನ್ನು ವಿವಾಹವಾಗುವ, ಕ್ಷುಲ್ಲಕ ಕಾರಣವನ್ನು ಮುಂದಿಟ್ಟುಕೊಂಡು ನಂಬಿ ಬಂದವಳಿಗೆ ತಲಾಖ್ ಅನ್ನು ಅಸ್ತ್ರವಾಗಿ ಬಳಸುವ, ಆ ಕಾರಣದಿಂದಾಗಿ ಮಹಿಳೆ ತನ್ನ ಬದುಕಿನಲ್ಲಿ ಎದುರಿಸಬೇಕಾದ ಸಮಸ್ಯೆಗಳನ್ನು ಓದುಗರ ಮನಸ್ಸಿಗೆ ನಾಟಿಸುವಲ್ಲಿ ಸಫಲರಾಗಿದ್ದಾರೆ.

ಮದುವೆಯಾದ ಕೆಲವು ದಿನಗಳಲ್ಲೇ ಗಂಡಂದಿರು ದುಡಿಮೆಗಾಗಿ ಕೊಲ್ಲಿರಾಷ್ಟ್ರ, ದುಬಾಯಿ, ಮುಂಬೈಗೆ ಹೋದರೆ ಇಲ್ಲಿ ಹೆಂಡತಿಯರು ಅವರು ಬರುವ ದಾರಿಯನ್ನು ಕಾಯುತ್ತಾ, ಅವಿಭಕ್ತ ಕುಟುಂಬದೊಳಗೆ ಜೀವನ ಸಾಗಿಸಬೇಕಾದ ಸ್ಥಿತಿ, ಗಂಡಂದಿರು ಬಂದ ದಿನಗಳಲ್ಲಿ ಮಾತ್ರ ತಮ್ಮ ಬದುಕಿನಲ್ಲಿ ಸ್ವಲ್ಪ ಮಟ್ಟಿಗೆ ಬದಲಾವಣೆಯನ್ನು ಕಾಣುವ ಚಿತ್ರ ಸಾಮಾನ್ಯ. ಉಳಿದಂತೆ ತನ್ನ ಬದುಕಿನ ನೆಲೆಯಲ್ಲಿ ಮನೆಯಲ್ಲಿ ಅಥವಾ ಹೊರಗಿನ ಕೆಲಸಗಳಲ್ಲಿ ದುಡಿಯುತ್ತಾ ಸಾಮಾಜಿಕ ನಿಷಿದ್ಧಗಳಲ್ಲಿ ಬಂಧಿಯಾಗಿ ಯಾಂತ್ರಿಕ ಜೀವನವನ್ನು ನಡೆಸಬೇಕಾಗುತ್ತದೆ. ಸಾಂಪ್ರದಾಯಿಕ ಕೌಟುಂಬಿಕ ಆವರಣದೊಳಗೆ ಅಂದರೆ ಪುರುಷಪ್ರಧಾನ ವ್ಯವಸ್ಥೆ ಬಯಸುವ ಸಾಮಾಜಿಕ ಚೌಕಟ್ಟಿನೊಳಗೆ ಅವಿಶ್ರಾಂತವಾಗಿ ದುಡಿದು ಮನರಂಜನೆಯನ್ನೇ ಕಾಣದೆ ಶೋಷಣೆಗೊಳಗಾದ ಹೆಣ್ಣು ಇಲ್ಲಿ ಅಸಹಾಯಕಳಾಗಿ ನಿಲ್ಲುವುದನ್ನು ಕಂಡರಿಸುತ್ತಾರೆ.

ಇಲ್ಲಿನ ಬಹಳಷ್ಟು ಸ್ತ್ರೀ ಪಾತ್ರಗಳು ಗಂಡನಿಂದ ವಂಚಿತರಾಗಿ ಅಥವಾ ವಿಧವೆಯರಾಗಿ ಅಥವಾ ಗಂಡಸರ ಮೋಸಕ್ಕೆ ಬಲಿಯಾಗಿ, ಲೈಂಗಿಕ ದೌರ್ಜನ್ಯಗಳಿಗೆ ಒಳಗಾಗಿ ನಾನಾ ರೀತಿಯ ದೈಹಿಕ ಮತ್ತು ಮಾನಸಿಕ ಹಿಂಸೆಗೆ ಒಳಗಾಗುವ ಚಿತ್ರಣಗಳು ಇಲ್ಲಿ ಕಂಡುಬರುತ್ತವೆ. ಸಾಮಾಜಿಕ ಮತ್ತು ಧಾರ್ಮಿಕ ವ್ಯವಸ್ಥೆಯ ನಿರ್ದೇಶನಗಳು ಅವಳನ್ನು ಪ್ರತಿಭಟಿಸದಂತೆ ಮಾಡಿವೆ.

ಹೆಣ್ಣು ಮಕ್ಕಳು ಬಡತನದ ನೆಲೆಯಿಂದಲೆ ಬಂದವರಾಗಿರುವುದರಿಂದ ಗಂಡನ ಮನೆಗೆ ಬಂದರೂ ತವರಿನವರಿಂದ ಯಾವ ಸಹಾಯವೂ ಇಲ್ಲದೆ ಅತ್ತೆ ಮನೆಯವರ ನಿರ್ಲಕ್ಷ್ಯ, ಚುಚ್ಚುಮಾತುಗಳಿಗೆ ಗುರಿಯಾಗುವ, ತಿರಸ್ಕಾರದ ನೋಟಗಳನ್ನು ಎದುರಿಸುವ ಸ್ಥಿತಿ ನಿರ್ಮಾಣವಾಗಿರುತ್ತದಾದರೂ ಜೀವ ವಿರೋಧಿಯಾದ ಅಮಾನವೀಯ ವ್ಯವಸ್ಥೆಯನ್ನು ನಿರಾಕರಿಸುತ್ತವೆ. ಆಳವಾದ ಜೀವನ ಶ್ರದ್ಧೆಯನ್ನು ಅಳವಡಿಸಿಕೊಂಡು ಏನೆಲ್ಲಾ ಕಷ್ಟಕಾರ್ಪಣ್ಯಗಳ ನಡುವೆಯೂ ಬದುಕಿಗೆ ವಿಮುಖರಾಗಿ ನಿಲ್ಲದೆ ಜೀವನಮುಖಿಯಾಗಿವೆ.

ಸಾರಾ ಅವರು ತಮ್ಮ ಕೃತಿಗಳಲ್ಲಿ ಮಹಿಳೆಯರ ಬದುಕಿನ ಒಳನೋಟಗಳನ್ನು ಕಟ್ಟಿಕೊಡುವ ಪರಿಯನ್ನು ಮುಂದಿನ ಅಧ್ಯಾಯಗಳಲ್ಲಿ ವಿಶ್ಲೇಷಿಸಲಾಗಿದೆ.

ಅಧ್ಯಾಯ-೭

# ಕಾದಂಬರಿಗಳಲ್ಲಿ ಚಿತ್ರಣಗೊಂಡಿರುವ ಧಾರ್ಮಿಕ ಮತ್ತು ಸಾಮಾಜಿಕ ಸಮಸ್ಯೆಗಳು

ಒಂದು ವ್ಯವಸ್ಥಿತವಾದ ಬದುಕನ್ನು ಬದುಕಲು ಬೇಕಾದ ಸಾಮಾಜಿಕ ವ್ಯವಸ್ಥೆಯನ್ನು ರೂಪಿಸುವಲ್ಲಿ ಧರ್ಮ ವಹಿಸುವ ಪಾತ್ರ ಗಣನೀಯವಾದುದು. ಇದರಲ್ಲಿ ಮನುಷ್ಯನ ಒಳ ಹೊರಗುಗಳನ್ನು ನಿಯಂತ್ರಿಸುವ ನಂಬಿಕೆಗಳು, ಆಚಾರ-ವಿಚಾರಗಳು, ಕಟ್ಟುಪಾಡುಗಳು ಮತ್ತು ಒಂದು ನಿರ್ದಿಷ್ಟ ದೃಷ್ಟಿಕೋನವನ್ನು ಒಳಗೊಂಡಂತೆ ಒಟ್ಟು ಬದುಕುವ ರೀತಿ ಸೇರಿದೆ. ಮನುಷ್ಯನೇ ನಿರ್ಮಿಸಿಕೊಂಡ ಧರ್ಮ ಮತ್ತು ಸಮಾಜ ಕಾಲ-ದೇಶಗಳ ಪರಿಮಿತಿಗೆ ಒಳಪಟ್ಟು ಚಲನಶೀಲತೆಯನ್ನು ಪಡೆದುಕೊಂಡಿದೆ. ಬದುಕು ಚಲನಶೀಲವಾಗಿರುವುದರಿಂದ ಈ ಬದುಕನ್ನು ಅದಕ್ಕೆ ಮೂಲವಾದ ಮನುಷ್ಯನನ್ನು ಹೊಂದಿರುವ ಸಮಾಜ ಮತ್ತು ಧರ್ಮ ಚಲನಶೀಲವಾಗಿರಬೇಕು. ಆಗ ಮಾತ್ರ ಅದು ಜೀವಂತವಾಗಿರಲು ಸಾಧ್ಯ. ಮನುಷ್ಯ ತನ್ನ ಪರಿಪೂರ್ಣತೆಗಾಗಿ, ನೆಮ್ಮದಿಗಾಗಿ ಕಂಡುಕೊಂಡ ಧಾರ್ಮಿಕ ಶಕ್ತಿಗಳು ಅವನ ಬದುಕಿಗೆ ಮಾರಕವಾದಾಗ ಆತ ಅವುಗಳ ಪ್ರತಿರೋಧಕವಾಗಿ ನಿಲ್ಲುತ್ತಾನೆ. ತನ್ನದೇ ಆದ ಸಾಮಾಜಿಕ ವ್ಯವಸ್ಥೆಯ ನಿರ್ಮಾಣದ ಕಡೆಗೆ ಹಾತೊರೆಯುತ್ತಾನೆ. ಈ ನೆಲೆಯಲ್ಲಿ ವ್ಯವಸ್ಥೆಯ ವಿರುದ್ಧ ಬಂಡಾಯದ ಧ್ವನಿ ಕೇಳಿಬರುತ್ತದೆ. ಅನ್ಯಾಯ, ಅಸಮಾಧಾನ, ಶೋಷಣೆಯ ಪ್ರತೀಕವಾಗಿ ಹೊಸ ಸಮಾಜದ ಆಶಯ ಕಂಡುಬರುತ್ತದೆ. ಸಹನೆಗೂ ಒಂದು ಮಿತಿ ಇರುತ್ತದೆ. ಅತಿಯಾದರೆ ಅಮೃತವೂ ವಿಷವಾಗುತ್ತದೆ. ಹಾಗೆಯೇ ಸಹನೆಯೇ ಒಂದು ಮಿತಿಯಾದರೆ ಬದುಕು ಅಸಹನೀಯವಾಗುತ್ತದೆ. ಈ ಹಿನ್ನೆಲೆಯಲ್ಲಿ ಹೆಣ್ಣಿನ ಬದುಕು ಅಸಹನೀಯವಾಗುವ, ಪುರುಷ ಪ್ರಧಾನ ಸಮಾಜದ ಕ್ರೌರ್ಯಕ್ಕೆ ಬಲಿಯಾಗುವ ಅತಂತ್ರ ಸ್ಥಿತಿಯಲ್ಲಿ ಸಿಕ್ಕಿಕೊಳ್ಳುವ ಚಿತ್ರಣಗಳನ್ನು ಚಿತ್ರಿಸುತ್ತಲೇ ಹೆಣ್ಣು ಕಂಡುಕೊಳ್ಳಬೇಕಾದ ಹೊಸ ದೃಷ್ಟಿಕೋನಗಳ ಕಡೆಗೆ ಸಾರಾ ಅವರ ಕಥಾ ಸಾಹಿತ್ಯ ಚಿಂತಿಸಿದೆ. ವ್ಯಕ್ತಿ ನಿಯಮಗಳು ಸಾಮಾಜಿಕ ನೆಲೆಯಲ್ಲಿ ಹೆಣ್ಣಿನ ಬದುಕನ್ನು ನಿರ್ಣಯಿಸುವ ಧರ್ಮ ವಿರೋಧಿ ಶಕ್ತಿಗಳಾಗಿ ವಿಜೃಂಭಿಸುತ್ತಿರುವುದನ್ನು ನಿರ್ದಾಕ್ಷಿಣ್ಯವಾಗಿ ಖಂಡಿಸಿದ್ದಾರೆ.

ಈ ಹಿನ್ನೆಲೆಯಲ್ಲಿ ಬಹುಪತ್ನಿತ್ವ, ತಲಾಖ್, ಬಜ್ಜತ್, ಪರ್ದಾ ಸಮಸ್ಯೆ ಮತ್ತು ಮತೀಯ ಆಚರಣೆಯಂತಹ ಸಂಪ್ರದಾಯ ನಿಯಮಗಳು ಧರ್ಮದ ಹೆಸರಿನಲ್ಲಿ ಮುಸ್ಲಿಂ ಸಮುದಾಯದ ಮಹಿಳೆಯರನ್ನು ಶೋಷಣೆಗೆ ಒಳಪಡಿಸಿರುವ ಶಕ್ತಿಗಳ ಸ್ವರೂಪವನ್ನು ಇಲ್ಲಿ ಗಮನಿಸಲಾಗಿದೆ.

ಹಾಗೆ ನೋಡಿದರೆ ಎಲ್ಲಾ ಧರ್ಮಗಳು ಪುರುಷರ ಪರವಾಗಿವೆ. ಹೆಂಡತಿಗೆ ಗಂಡ ಬೇಡವೆನಿಸಿದರೆ ಅಷ್ಟು ಸರಳವಾಗಿ ಅವರಿಂದ ದೂರವಾಗಲು ಯಾವ ಧರ್ಮಗ್ರಂಥಗಳೂ ದಾರಿ ತೋರಿಲ್ಲ. ಅದೇ ಗಂಡನಿಗೆ ಹೆಂಡತಿ ಬೇಡವಾದರೆ ತಕ್ಷಣ ನಿಂತ ಸ್ಥಳದಲ್ಲೇ, ಇದ್ದ ಸ್ಥಿತಿಯಲ್ಲೇ ವಿಚ್ಛೇದನ ಕೈಗೊಳ್ಳಬಹುದು. ಹಾಗೆಯೇ ಜೀವನ ಪರ್ಯಂತ ತಿರಸ್ಕಾರದಿಂದ ನಡೆಸಿಕೊಳ್ಳಲೂ ಬಹುದು. ಇದು ಧರ್ಮ ಸಮ್ಮತವಾದುದು. ಆದರೆ ಹೀಗೆ ಬಿಡುವಾಗ ಹೆಣ್ಣಿಗೆ ಒಪ್ಪಿಗೆ ಇರಲಿ, ಒಂದು ಮಾತಿಗೂ ಅವಕಾಶ ನೀಡದ ಸ್ಥಿತಿ ಇದೆ. ಇದರಿಂದಾಗಿ ಹೆಣ್ಣು ನಿರಂತರವಾಗಿ ಅತಂತ್ರದ ಬದುಕನ್ನು ನೂಕುತ್ತಿರುತ್ತಾಳೆ. ಮುಸ್ಲಿಂ ಸಮುದಾಯದಲ್ಲಿ ಇಂದು ಸರ್ವೇ

ಸಾಮಾನ್ಯವಾಗಿರುವ ಬಹುಪತ್ನಿತ್ವ ಪದ್ಧತಿಯನ್ನು ಕುರಿತು ಲೇಖಕಿಯೇ ಹೇಳುವಂತೆ "ಕಾನೂನಿನ ನಿರ್ಬಂಧವಿರುವ ಹಿಂದೂ ಸಮಾಜದಲ್ಲಿ ಕಾನೂನನ್ನು ಅತಿಕ್ರಮಿಸಿಯೂ ಎರಡನೆಯ ವಿವಾಹಗಳು ನಡೆಯುತ್ತಲೇ ಇವೆ ಎಂದಮೇಲೆ ಕಾನೂನಿನ ಒಪ್ಪಿಗೆ ಇರುವ ಮುಸ್ಲಿಂ ಸಮಾಜದಲ್ಲಿ ಇದೊಂದು ದೊಡ್ಡ ಘಟನೆಯೇನೂ ಅಲ್ಲ. ಸಮಾಜದ ಮೇಲ್ವರ್ಗದ ಜನರಲ್ಲಿ ಇದರ ಹಾವಳಿ ಅಷ್ಟೊಂದಿಲ್ಲದೇ ಹೋದರೂ ಸಮಾಜದ ಕೆಳವರ್ಗದ ಪುರುಷರಲ್ಲಿ ಇದೊಂದು ಹವ್ಯಾಸವೇ ಆಗಿದೆ. ಇತ್ತೀಚೆಗಂತೂ ಈ ಹಾವಳಿ ತೀರಾ ಜಾಸ್ತಿಯಾಗಿದೆ. ಓರ್ವ ಹೆಂಡತಿ, ಮಕ್ಕಳನ್ನು ಸಾಕಲಾರದವನು ಎರಡೋ ಮೂರೋ ಹೆಂಡತಿಯರನ್ನು ಕಟ್ಟಿಕೊಂಡು ತಾವೂ ನರಳುವುದಲ್ಲದೆ, ಇವರನ್ನೂ ನರಕದ ಬಾಳಿಗೆ ನೂಕುವುದು ಇಂದು ಈ ಸಮಾಜದ ಕೆಳವರ್ಗದವರಲ್ಲಿ ಕಂಡುಬರುವ ತೀರಾ ಸಾಮಾನ್ಯ ದೃಶ್ಯವಾಗಿದೆ".[9]

ಸಾರಾ ಅವರು ಬರಹಕ್ಕೆ ಆಯ್ಕೆ ಮಾಡಿಕೊಂಡ ವಸ್ತುಗಳೆಲ್ಲಾ ದುಡಿಯುವ ವರ್ಗದ, ಮಧ್ಯಮವರ್ಗದ ಮಹಿಳೆಯರ ಬದುಕನ್ನೆ. ಇಸ್ಲಾಂ ಧರ್ಮದಲ್ಲಿ "ವಜ್ರಗಳ ಹಾಗೆ ನಮ್ಮ ಹೆಣ್ಣುಮಕ್ಕಳನ್ನು ಜೋಪಾನವಾಗಿಡುತ್ತೇವೆ"[10] ಎನ್ನುತ್ತಲೇ ಚಪ್ಪಲಿಗಳ ಹಾಗೆ ಬಳಸಿ ಎಸೆದುದರ ಬಗ್ಗೆ ಸಾಕಷ್ಟು ಸಾಕ್ಷ್ಯಾಧಾರಗಳನ್ನು ನೀಡಿದ್ದಾರೆ. ಇಸ್ಲಾಂ ಧರ್ಮದ ಹೆಸರಿನಲ್ಲಿ ಮೂಲಭೂತವಾದಿಗಳು ನಡೆಸುತ್ತಿರುವ ದೌರ್ಜನ್ಯವನ್ನು, ಅದರ ಒಳ ಮರ್ಮಗಳನ್ನು ದಿಟ್ಟವಾಗಿಯೇ ಹೊರಹಾಕಿದ್ದಾರೆ. ಸಂಸ್ಕೃತಿ ಮತ್ತು ಧರ್ಮದ ಹೆಸರಿನಲ್ಲಿ ನಡೆದಿರುವ ಮಹಿಳೆಯರ ಶೋಷಣೆಯನ್ನು ತುಂಬಾ ಗಂಭೀರವಾಗಿ ಪರಿಗಣಿಸಿ ಅದರ ನಿರ್ಮೂಲನೆಗೆ ಒತ್ತಾಯಿಸಿದ್ದಾರೆ.

ಸಾರಾ ಅಬೂಬಕ್ಕರ್ ಅವರ 'ಚಂದ್ರಗಿರಿ ತೀರದಲ್ಲಿ' ಕಾದಂಬರಿಯು ಮುಸ್ಲಿಂ ಸಮುದಾಯದಲ್ಲಿನ ಹೆಣ್ಣೊಬ್ಬಳು ಸಾಮಾಜಿಕವಾಗಿ ಹಾಗೂ ಧಾರ್ಮಿಕವಾಗಿ ಎರಡೂ ಸಂದರ್ಭಗಳಲ್ಲಿ ಪುರುಷನ ಸ್ವಾರ್ಥಕ್ಕೆ ಬಲಿಯಾಗಿ ಆಕೆಯ ಬದುಕು ದುರಂತಮಯವಾಗುವ ಚಿತ್ರಣವನ್ನು ಕಟ್ಟಿಕೊಡುತ್ತದೆ. ಮುಸ್ಲಿಂ ಸಮಾಜದ ಮತೀಯ ಆಚರಣೆಗಳ ಒಳ ಪದರಗಳನ್ನು ಬಿಡಿಸಿ ವಿಶ್ಲೇಷಿಸುತ್ತದೆ. ಧರ್ಮದ ಹೆಸರಿನಲ್ಲಿ ಹೆಣ್ಣಿನ ಮನಸ್ಸನ್ನು ಒಡೆದು ಛಿದ್ರಮಾಡುವ, ಅವಳ ಪರಾಧೀನತೆಯನ್ನು ಇಷ್ಟ ಬಂದಂತೆ ಬಳಸಿಕೊಳ್ಳುವ ಧರ್ಮ ಸಮ್ಮತವಾದ ವ್ಯಭಿಚಾರವನ್ನು ಮಾರ್ಮಿಕವಾಗಿ ಪ್ರಶ್ನಿಸುತ್ತದೆ.

'ಚಂದ್ರಗಿರಿ ತೀರದಲ್ಲಿ' ಈ ಕಾದಂಬರಿಯ ನಾಯಕಿ ನಾದಿರಾ ಗಂಡ ಹಾಗೂ ತಂದೆಯ ಪ್ರತಿಷ್ಠೆಗೆ ಬಲಿಯಾದವಳು. ಈಕೆಯ ದುರಂತಕ್ಕೆ ತಂದೆಯ ಸ್ವಾರ್ಥ, ದುಡುಕುತನ ಮತ್ತು ಗಂಡನ ವೈಯಕ್ತಿಕ ಪ್ರತಿಷ್ಠೆ ಕಾರಣವಾಗುತ್ತದೆ. ಪುರುಷ ಪ್ರಧಾನ ವ್ಯವಸ್ಥೆ ಅಲ್ಲಿಯ ಧಾರ್ಮಿಕ ನಿಯಮವಾದ 'ತಲಾಖ್' ಅನ್ನು ತಮ್ಮ ಸ್ವಾರ್ಥಕ್ಕೆ ಹೇಗೆ ಬಳಸಿಕೊಂಡಿದೆ ಎಂಬುದನ್ನು ಗಮನಿಸಲಾಗಿದೆ.

ತನ್ನ ಎರಡನೆಯ ಮಗಳು ಜಮೀಲಳ ಮದುವೆಗೆ ವರದಕ್ಷಿಣೆ ಹಣವನ್ನು ಒದಗಿಸದಿದ್ದಲ್ಲಿ ಮದುವೆ ಮುರಿದು ಬೀಳುತ್ತದೆ ಎಂದು ಭಾವಿಸಿದ ನಾದಿರಾಳ ತಂದೆ ಮಹಮ್ಮದ್ ಖಾನ್ ಅಳಿಯ ರಶೀದ್‌ನಲ್ಲಿ ಹಣದ ಸಹಾಯ ಯಾಚಿಸುತ್ತಾನೆ. ರಶೀದ್ ತನ್ನ ಹತ್ತಿರ ಹಣವಿಲ್ಲದಿರುವ ವಾಸ್ತವತೆಯನ್ನು ತಿಳಿಸುತ್ತಾನೆ. ಈ ಸಂದರ್ಭದಲ್ಲಿ ಇಬ್ಬರ ನಡುವೆ ಮಾತಿನ ಚಕಮಕಿ ನಡೆಯುತ್ತದೆ. ಇದರಿಂದಾಗಿ ಮಹಮದರಲ್ಲಿ ಸೇಡಿನ ಭಾವನೆ ಮೂಡಿ ಮಗಳ ಬದುಕು ದುರಂತವಾಗುತ್ತದೆ. ಒಲ್ಲದ ಮನಸ್ಸಿನಿಂದ ನಾದಿರಾ ಗಂಡನ ಮನೆಯಿಂದ ತವರು ಮನೆಗೆ ಹೋದರೆ, ಒತ್ತಾಯದಿಂದ ರಶೀದ್ ತಲಾಕ್ ನೀಡುತ್ತಾನೆ. ಮೋಸದಿಂದಲೇ ಮಗಳ 'ತಲಾಖ್'

ಪಡೆಯುವ ತಂದೆಯ ಕ್ರೌರ್ಯ ಊಹೆಗೂ ನಿಲುಕದ್ದು. ತನ್ನ ಸೇಡಿಗಾಗಿ ಮಗಳ ಬದುಕನ್ನೇ ಕಸಿದುಕೊಳ್ಳುವ ಆತನಿಗೆ ಮಗಳ ನೋವು ಹತಾಶೆಗಳು ಅರ್ಥವಾಗುವುದೇ ಇಲ್ಲ. ಹೆಂಗಸರೆಂದರೆ ಹೃದಯ ಭಾವನೆಗಳೇನೂ ಇಲ್ಲದ ಉಸಿರಾಡುವ ಒಂದು ಪ್ರಾಣಿ. ಆಕೆ ಗಂಡು ಸಂತತಿಯ ಅಧೀನ. ಅವರು ಹೇಳಿದಂತೆಯೇ ಕೇಳಿಕೊಂಡಿರಬೇಕೆಂದು ಯೋಚಿಸುವ ತಂದೆಗೆ ತನ್ನ ಕ್ರೂರತನದಿಂದ ಮಗಳ ಮಾನಸಿಕ ಸ್ಥಿತಿ ಏನಾಗುತ್ತದೆ ಎನ್ನುವುದರ ಕಡೆಗೆ ಕಿಂಚಿತ್ತೂ ಗಮನವಿರುವಂತೆ ಕಾಣುವುದಿಲ್ಲ. ಹೀಗೆ ನೋಡಿದರೆ ಸಾಂಸಾರಿಕವಾಗಿ ನಾದಿರಾ ಮತ್ತು ರಶೀದ್‌ರಲ್ಲಿ ಯಾವುದೇ ತೊಡಕಿಲ್ಲದಿದ್ದರೂ, ಒಬ್ಬರನ್ನೊಬ್ಬರು ಪರಸ್ಪರ ಇಚ್ಚಿಸುತ್ತಿದ್ದರೂ 'ಗಂಡ'ನೆಂಬ ಪ್ರತಿಷ್ಠೆಯಿಂದ ಈತನೂ ಹೊರ ಬರಲಿಲ್ಲ. ಹೀಗಾಗಿ ಮಹಮ್ಮದ್ ಖಾನ್‌ರ ದುಡುಕು ಸ್ವಭಾವದಿಂದ ನಂಬಿಕೆಯ ರಶೀದ್ ಹೆಂಡತಿಗೆ 'ತಲಾಖ್' ನೀಡುತ್ತಾನೆ. ಇಲ್ಲಿ ಯಾವ ತಪ್ಪನ್ನೂ ಮಾಡದ ಹೆಣ್ಣಿನ ಬದುಕನ್ನು ಬಲಿ ತೆಗೆದುಕೊಳ್ಳುವ ಮೂಲಕ ಸಾಧಿಸಿಕೊಳ್ಳಲು ಹೊರಡುವ ಅತ್ಯಂತ ಅಮಾನವೀಯ ನಡವಳಿಕೆಗಳನ್ನು ಗುರುತಿಸಬಹುದು.

ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಅಲ್ಲಿನ ಧಾರ್ಮಿಕ ನಿಯಮಗಳನ್ನು, ತಲಾಖ್‌ನ್ನು ತಮ್ಮ ಸ್ವಾರ್ಥಕ್ಕೆ ಬಳಸಿಕೊಂಡವರ ಚಿತ್ರಣವನ್ನು ಕಾದಂಬರಿಯಲ್ಲಿ ನೋಡಬಹುದು. ರಶೀದ್ ತಲಾಖ್ ಕೊಟ್ಟ ನಂತರ ಮುಸ್ಲಿಂ ಧಾರ್ಮಿಕ ನಿಯಮದಂತೆ ಮತ್ತೆ ನಾದಿರಾಳನ್ನು ಸೇರುವಂತಿಲ್ಲ. ಹಾಗೇನಾದರೂ ನಿಖಾ ಆಗುವುದಾದರೆ ಕಾದಂಬರಿಯಲ್ಲಿನ ಮೌಲ್ವಿಗಳು ವ್ಯಾಖ್ಯಾನಿಸುವಂತೆ ಆಕೆ ಬೇರೊಬ್ಬನನ್ನು ಮದುವೆಯಾಗಿ ಅವನಿಂದಲೂ ತಲಾಖ್ ಪಡೆದಿರಬೇಕು. ಹಾಗೆ ಅವಳು ಬೇರೊಬ್ಬನನ್ನು ಮದುವೆ ಆಗಲ್ಲ ಅನ್ನುವುದಾದರೆ ಒಂದು ದಿನಕ್ಕಾದರೂ ಒಬ್ಬನನ್ನು ಮದುವೆಯಾಗಬೇಕು. ಒಂದು ರಾತ್ರಿಯನ್ನು ಅವನ ಜೊತೆ ಕಳೆಯಬೇಕು. ಮರುದಿನ ಅವನಿಂದ ತಲಾಖ್ ಹೇಳಿಸಿಕೊಂಡು ಮೂರು ತಿಂಗಳು ಕಾಯಬೇಕು. ಏಕೆಂದರೆ ಗರ್ಭವೇನಾದರೂ ನಿಂತಿದೆಯೇ ಎಂದು ಋಜುವಾತುಪಡಿಸಿಕೊಳ್ಳಬೇಕು. ಇಲ್ಲ ಎಂದು ನಿಶ್ಚಯವಾದ ಮೇಲೆ ಮೊದಲ ಗಂಡನು ಆಕೆಯನ್ನು ವಿವಾಹವಾಗಬಹುದು. ಇದು ಇಸ್ಲಾಂ ಧರ್ಮಶಾಸ್ತ್ರ. ಅದಕ್ಕೆ ನಾದಿರಾ "ಈ ಗಂಡಸರು ಹೇಳಿದಂತೆ ಒಂದು ರಾತ್ರಿ ಒಬ್ಬರ ಜೊತೆ ಕಳೆಯಲು ಒಂದು ಹೊತ್ತು ಒಬ್ಬನಿಗೆ ತನ್ನ ದೇಹವನ್ನು ಒಪ್ಪಿಸಲು ತಾನೇನು ದನವೇ? ಹೃದಯ ಭಾವನೆಗಳು ಏನೂ ಇಲ್ಲದ ಒಂದು ಮೃಗ ಎನ್ನುವಂತೆ ಇವರು ವರ್ತಿಸುತ್ತಾರಲ್ಲಾ? ಏನೇ ಆದರೂ ಯಾರೋ ಒಬ್ಬನ ಜೊತೆಯಲ್ಲಿ ಒಂದು ರಾತ್ರಿ ಕಳೆಯಲು ಅವನು ವಿಧಿಪೂರ್ವಕವಾಗಿ ತನ್ನನ್ನು ವಿವಾಹ ಮಾಡಿದವನಾದರೂ ತನ್ನಿಂದ ಸಾಧ್ಯವೇ ಇಲ್ಲ"[20] ಎಂಬ ತೀರ್ಮಾನಕ್ಕೆ ಬರುತ್ತಾಳೆ. ಇಂಥ ನಿಯಮಗಳನ್ನು ಕೇಳಿದ ರಶೀದ್ ಕೂಡ ಕೋಪಾವಿಷ್ಟನಾಗುತ್ತಾನೆ. ಆ ಮೂಲಕ ಗಂಡಸರ ಮನಸ್ಥಿತಿ ಹೇಗಿರುತ್ತದೆಂಬುದನ್ನು ಬಯಲುಮಾಡುತ್ತಾನೆ. ಪ್ರಗತಿಪರ ಗಂಡಸರಲ್ಲಿ ಆಲೋಚನೆಗಳು ಮತ್ತು ಧಾರ್ಮಿಕ ನಿಯಮಗಳ ಬಗ್ಗೆ ಜಾಗೃತ ಚಿಂತನೆಯಾಗದೆ ಬದಲಾವಣೆ ಸಾಧ್ಯವಿಲ್ಲ. ಹೀಗಾಗಿ ಸೂಕ್ಷ್ಮ ವ್ಯಕ್ತಿತ್ವದ ಪ್ರಾಮಾಣಿಕ ಮನಸ್ಸಿನ ಹೆಣ್ಣುಮಕ್ಕಳು ಅಸಹಾಯಕತೆಯಿಂದ ಆತ್ಮಹತ್ಯೆಗೆ ಶರಣಾಗುತ್ತಾರೆ.

ಸಾರಾ ಇಲ್ಲಿ ಪವಿತ್ರ ಕುರಾನನ್ನು ಟೀಕಿಸದೆ ಅದನ್ನು ತಪ್ಪಾಗಿ ಗ್ರಹಿಸಿ ಅದರ ನೆಪದಲ್ಲಿ ಅಮಾಯಕರನ್ನು ಶೋಷಿಸುತ್ತಿರುವ ಸ್ವಾರ್ಥಿಗಳನ್ನು ನಿರ್ದಾಕ್ಷಿಣ್ಯವಾಗಿ ಟೀಕಿಸುತ್ತಾರೆ. ಯಾವುದೇ ಧರ್ಮ ಮತ್ತು ಸಿದ್ಧಾಂತಗಳು ಮೂಲಭೂತವಾಗಿ ಜನತೆಯ ಹಿತವನ್ನು ಬಯಸುತ್ತವೆ. ಆದರೆ ಅದರ

ಅನುಯಾಯಿಗಳು ತಮ್ಮ ಸ್ವಾರ್ಥಕ್ಕಾಗಿ ಹಲವು ಮಾರ್ಪಾಡುಗಳನ್ನು ಮಾಡಿಕೊಂಡು ಧರ್ಮದ ಹೆಸರಿನಲ್ಲಿ ಮುಗ್ಧರಾದ ಜನರನ್ನು ಶೋಷಿಸುತ್ತಾರೆ ಎಂಬುದನ್ನು ಅನಾವರಣಗೊಳಿಸಿದ್ದಾರೆ.

ಕುರಾನಿನಲ್ಲಿ ಇಲ್ಲದ ಸಾಂಪ್ರದಾಯಿಕ ಆಚರಣೆಗಳು ಹೇಗೆ ಪುರುಷ ಪ್ರಧಾನವಾದ ಕೇಂದ್ರದಲ್ಲಿ ನಿಲ್ಲುತ್ತದೆ ಎಂಬುದನ್ನು ಬಹಿರಂಗಪಡಿಸುತ್ತಾರೆ. ಅವರು ಹೇಳುವಂತೆ ಒಂದು ನಿಮಿಷದಲ್ಲಿ ತಲಾಖ್ ಎಂದಾಕ್ಷಣ ಅದು ತಲಾಖ್ ಆಗಲಾರದು. ಕುರಾನಿನಲ್ಲಿ ಈ 'ತಲಾಖ್' ಅನ್ನು ಮೂರು ಬೇರೆ ಬೇರೆ ಸಂದರ್ಭದಲ್ಲಿ ಹೇಳುವ ನಿಯಮವಿದೆ. ಮೂರು ತಿಂಗಳಲ್ಲಿ ಪ್ರತ್ಯೇಕವಾಗಿ ಹೇಳುವ ತಲಾಖ್ ಎಂದರೆ ಕುರಾನ್ ಒದಗಿಸುವ ಮೂರು ಅವಕಾಶಗಳು. ಈ ಅವಧಿಯಲ್ಲಿ ಗಂಡ-ಹೆಂಡತಿ ಕೂಡಿಯೇ ವಾಸಿಸುತ್ತಿರಬೇಕು. ಈ ಸಂಕ್ರಮಣಾವಸ್ಥೆಯಲ್ಲಿ ಗಂಡ-ಹೆಂಡತಿಯ ಜೊತೆ ಸಂಪರ್ಕ ಪಡೆದರೆ ಆ ತಲಾಖ್ ಮುರಿದು ಬೀಳುತ್ತದೆ. ತಲಾಖ್‌ನ ಈ ಮೂಲ ಉದ್ದೇಶವನ್ನು ಆಚರಣೆಗೆ ತರದೆ ಕೇವಲ ತಮ್ಮ ಸ್ವಾರ್ಥಕ್ಕಾಗಿ ಮುಸ್ಲಿಂ ಪುರುಷರು ಒಂದೇ ಸಮಯದಲ್ಲಿ ಮೂರು ಸಲ 'ತಲಾಖ್' ಹೇಳಿ ಕೈತೊಳೆದುಕೊಂಡು ಮತ್ತೊಂದು ಮದುವೆಗೆ ಸಿದ್ಧವಾಗುತ್ತಾರೆ. ಇಂತಹ ಸಂದರ್ಭದಲ್ಲಿ ಮೊದಲಿನ ಗಂಡನನ್ನೇ ಮದುವೆಯಾಗಲಿಕ್ಕಾಗಿ ಒಬ್ಬನನ್ನು ಒಂದು ರಾತ್ರಿಗೆ ವಿವಾಹವಾಗಬೇಕೆಂದು ಕುರಾನ್‌ನಲ್ಲಿ ಎಲ್ಲಿಯೂ ಹೇಳಿಲ್ಲ. ಇದೆಲ್ಲಾ ಈ ಮೂರ್ಖ ಗಂಡಸರು ತಮ್ಮ ಸ್ವಾರ್ಥಕ್ಕಾಗಿ ಕುರಾನನ್ನು ಈ ರೀತಿಯಾಗಿ ತಮಗಿಷ್ಟವಾದ ರೀತಿಯಲ್ಲಿ ತಿದ್ದುಪಡಿ ಮಾಡಿಕೊಂಡಿದ್ದಾರೆಂಬ ವಾಸ್ತವ ಸಂಗತಿಯನ್ನು ಲೇಖಕಿ ಈ ಕಾದಂಬರಿಯ ಮೌಲ್ವಿಗಳ ಮುಖೇನ ಸ್ಪಷ್ಟಪಡಿಸಲು ಹೊರಟಿರುವುದು ಹೆಚ್ಚು ಅರ್ಥಪೂರ್ಣವಾಗಿದೆ. ಮೌಲ್ವಿಗಳ ಮಾತಿನಲ್ಲಿ ಈ ಲೇಖಕಿಯ ಮಾತುಗಳಿವೆ ಎಂಬುದು ಸುಸ್ಪಷ್ಟ.

ಕಾದಂಬರಿಯಲ್ಲಿ ಮೌಲ್ವಿಗಳು ಧರ್ಮದ ಹೆಸರಿನಲ್ಲಿ ಹೆಣ್ಣಿನ ಮೇಲೆ ನಡೆಯುತ್ತಿರುವ ಶೋಷಣೆ ಹಾಗೂ ಸ್ವಾರ್ಥ ಪ್ರೇರಿತವಾದ ಸಂಪ್ರದಾಯವನ್ನು ಖಂಡಿಸಬಲ್ಲರು. ಆದರೆ ವ್ಯವಸ್ಥೆಯೊಡನೆ ಸಂಘರ್ಷಕ್ಕೆ ಇಳಿಯಲು ಸಿದ್ಧರಿಲ್ಲ. ರಶೀದ್‌ಗೆ ಅವರೇ ಹೇಳುವಂತೆ "ವ್ಯವಸ್ಥೆಯೊಡನೆ ಘರ್ಷಣೆಗಿಳಿಯಲು ನಾನಂತೂ ಸಿದ್ಧನಿಲ್ಲ. ಈ ಪ್ರಶ್ನೆಗಳನ್ನು ನಿನ್ನಲ್ಲೇ ಇಟ್ಟುಕೋ"[09] ಎಂದು ಹೇಳುತ್ತಾ ಕೊಳಕ್ಕೆ ಕಲ್ಲೆಸೆದರೆ ನೀರು ರಾಡಿಯಾಗುತ್ತದೆ ಎಂಬ ಮಾತಿನ ಮೂಲಕ ವ್ಯವಸ್ಥೆಯ ಹಿಡಿತ ಸಾರ್ವತ್ರಿಕವಾಗಿರುವುದನ್ನು ತಿಳಿಸಿದ್ದಾರೆ. ಅವರದು ಯಾರಿಗೂ ಗೋಚರಿಸದ ಒಂದು ರೀತಿಯ ಗುಪ್ತವಾದ ಪ್ರತಿಭಟನೆಯಾಗಿದೆ. ಎಲ್ಲಾ ಸತ್ಯಸಂಗತಿಗಳ ಅರಿವಿದ್ದು, ತಿಳಿಸಿ ಹೇಳುವ ಸ್ಥಾನದಲ್ಲಿ ಇದ್ದರೂ ಹೇಳಲಾಗದ ಇವರು ಕಣ್ಣಿದ್ದೂ ಕುರುಡರಾದಂತಹ, ಕಿವಿಯಿದ್ದೂ ಕಿವುಡರಾದಂತಹ ವ್ಯಕ್ತಿತ್ವ ಉಳ್ಳವರೆಂದು ಭಾವಿಸಬಹುದು. ಪುರುಷ ಪ್ರಧಾನ ಸಮಾಜದ ಬೆಂಬಲದಿಂದಲೇ ಧರ್ಮ ಗುರುವಿನ ಅಧಿಕಾರ ಸಿಕ್ಕಿರುವುದರಿಂದ ಮುಸ್ಲಿಂ ಸಮಾಜವನ್ನು ಎದುರು ಹಾಕಿಕೊಂಡು ಬದುಕಲಾರದ ಅಸಹಾಯಕ ಸ್ಥಿತಿ ಮೌಲ್ವಿಯವರನ್ನು ಇಂಥ ಇಕ್ಕಟ್ಟಿಗೆ ಎಡೆಮಾಡಿರಬಹುದು ಎನಿಸುತ್ತದೆ.

ಈ ಕಾದಂಬರಿಯಲ್ಲಿ ತಲಾಖ್‌ಗೆ ನಾದಿರಾಳ ಬೆಂಬಲವಿಲ್ಲ ಎಂಬುದನ್ನು ತಿಳಿದ ರಶೀದ್ ಕುಟುಂಬದಲ್ಲಿ ಮತ್ತೆ ಒಂದಾಗುವ ಆಶಯ ವ್ಯಕ್ತಪಡಿಸುತ್ತಾನೆ. ಅದಕ್ಕಾಗಿ ಆತ ಮುಸ್ಲಿಂ ಸಂಪ್ರದಾಯವನ್ನು ಸ್ವಲ್ಪಮಟ್ಟಿಗೆ ತೊರೆಯಲು ಮುಂದಾಗುತ್ತಾನೆ. ಆದರೆ ತಾಯಿಯ ಒತ್ತಾಸೆ ಆತನಿಗೆ ದೊರೆಯುವುದಿಲ್ಲ.

ರಶೀದ್ ಒಂದು ರೀತಿಯ ತನ್ನ ಪ್ರತಿಷ್ಠೆಗಾಗಿ, ಮಾವನ ಮೇಲಿನ ಹಠಕ್ಕಾಗಿ ಬಹುವಾಗಿ ತನ್ನ ಮೇಲೆ ಸಂಪೂರ್ಣ ನಂಬಿಕೆ ಇಟ್ಟಿದ್ದ ನಾದಿರಾಳನ್ನು ಅವಳ ನೆಲೆಯಿಂದ ಅರ್ಥೈಸಿಕೊಳ್ಳುವ ಪ್ರಯತ್ನವನ್ನು ಮಾಡುವುದಿಲ್ಲ. ಜೊತೆಗೆ ತಾಯಿ ಮಗುವನ್ನು ಬೇರ್ಪಡಿಸುವ ಮೂಲಕ ತನ್ನ ಸ್ವಾರ್ಥವನ್ನೇ ಸಾಧಿಸಿಕೊಳ್ಳುತ್ತಾನೆ. ವ್ಯವಸ್ಥೆ ನಿರ್ಮಿಸಿದ ಇಕ್ಕಟ್ಟಿಗೆ ಸಿಕ್ಕಿಕೊಳ್ಳುತ್ತಾನೆ.

ಆದರೆ ಈ ಎಲ್ಲದರ ನೇರ ಪರಿಣಾಮವನ್ನು ಮುಸ್ಲಿಂ ಮಹಿಳೆ ಅನುಭವಿಸಬೇಕಾಗಿದೆ. ಇಲ್ಲಿ ನಾದಿರಾ ಮುಸ್ಲಿಂ ಧಾರ್ಮಿಕ ನಿಯಮಕ್ಕೆ ಒಂದು ರೀತಿಯಲ್ಲಿ ಹರಕೆಯ ಕುರಿಯಂತಾಗಿದ್ದಾಳೆ. ಕೊನೆಗೆ ಧರ್ಮದ ನಿಯಮಗಳಿಗೆ ಕಟ್ಟುಬಿದ್ದು ತನ್ನ 'ನಿಖಾ' ದ ರಾತ್ರಿ ತನ್ನೆಲ್ಲಾ ನೋವು, ನಲಿವುಗಳನ್ನು ಆಸೆ-ಆಕಾಂಕ್ಷೆಗಳನ್ನು ಧರ್ಮದ ಹೆಸರಿನಲ್ಲಿ ಕಟ್ಟಿಕೊಂಡು ನಾದಿರಾ ಅನ್ಯಾಯದ ವಿರುದ್ಧ ಅಲ್ಲಾಹುವಿನ ಸಾಮ್ರಾಜ್ಯದ ಸಾನಿಧ್ಯದಲ್ಲಿ ನ್ಯಾಯ ಕೇಳುವಂತೆ ಮಸೀದಿಯ ಕೊಳಕ್ಕೆ ಧುಮುಕಿ ಪ್ರಾಣ ಕಳೆದುಕೊಳ್ಳುತ್ತಾಳೆ. ಇದು ಒಂದು ಹೆಣ್ಣಿನ ದುರಂತವಷ್ಟೇ ಆಗಿರದೆ ಮುಸ್ಲಿಂ ಸಮುದಾಯದ ಅಮಾಯಕ ಹೆಣ್ಣು ಮಕ್ಕಳ ಬದುಕಿನ ದುರಂತವೂ ಆಗಿ ಕಾಣಿಸಿಕೊಳ್ಳುತ್ತದೆ. ಜೊತೆಗೆ ಬೆಳೆಯುವ ಹೆಣ್ಣು-ಗಂಡುಗಳು ತಮಗರಿವಿಲ್ಲದಂತೆ ಸಮಾಜದ ರೀತಿ-ರಿವಾಜುಗಳನ್ನು ಮೈಗೂಡಿಸಿಕೊಂಡು ಬೆಳೆದ ನಂತರ ಅವರ ಹಿಡಿತದಲ್ಲಿ ಬಂಧಿಯಾಗುತ್ತ ತಮ್ಮದಲ್ಲದ ಅಪರಾಧಗಳಿಗಾಗಿ ನರಕಯಾತನೆಯನ್ನು ಅನುಭವಿಸುವ, ತಮ್ಮ ಬದುಕನ್ನೇ ಭಯಾನಕವಾಗಿಸಿಕೊಳ್ಳುವ ಸ್ಥಿತಿ ತಲುಪಬೇಕಾಗುತ್ತದೆ ಎಂಬ ಸತ್ಯವನ್ನು ಕಾದಂಬರಿ ಕಂಡರಿಸಿದೆ.

ಸಾರಾ ಅವರ ಬಹುತೇಕ ಕಥೆ ಕಾದಂಬರಿಗಳ ಮೂಲ ದ್ರವ್ಯ 'ತಲಾಖ್' ಸಮಸ್ಯೆ ಕುರಿತದ್ದೇ ಆಗಿದೆ. 'ವಜ್ರಗಳು' ಕಾದಂಬರಿ ಇಂಥ ಸಮಸ್ಯೆಯ ಇನ್ನೊಂದು ಮುಖವನ್ನು ಪರಿಚಯಿಸುತ್ತದೆ.

ಇಸ್ಲಾಂ ಸಂಪ್ರದಾಯದಲ್ಲಿ ಮದುವೆಗೆ ಮುಂಚೆ ಹುಡುಗಿಯನ್ನು ಹುಡುಗ ನೋಡುವಂತಿಲ್ಲ. ಇದು ಧರ್ಮ ನಿಷಿದ್ಧ. ಇಂಥ ಸಂಪ್ರದಾಯವೇ ಮುಸ್ಲಿಂ ಸಮುದಾಯದ ಗಂಡು ಹೆಣ್ಣುಗಳ ಬದುಕನ್ನು ಬಲಿ ತೆಗೆದುಕೊಳ್ಳುತ್ತದೆ. ಅದರಲ್ಲಿಯೂ ಇದಕ್ಕೆ ನೇರವಾಗಿ ಬಲಿಪಶುವಾಗುವವಳು ಹೆಣ್ಣು ಎಂಬುದನ್ನು 'ವಜ್ರಗಳು' ಕಾದಂಬರಿ ವಿಶ್ಲೇಷಿಸುತ್ತದೆ.

'ನಫೀಸಾ' ಈ ಕಾದಂಬರಿಯ ಮುಖ್ಯಪಾತ್ರ. ಈಕೆ ಗಂಡನಿಂದ ತಲಾಕ್ ಪಡೆದ ನಂತರದಲ್ಲಿ ಬದುಕಿನಲ್ಲಿ ಅನುಭವಿಸಿದ ಕರಾಳ ಸ್ವರೂಪವನ್ನು ಕಾದಂಬರಿ ಪರಿಚಯಿಸುತ್ತದೆ. ನಫೀಸಾ ಮಹಮದ್ ಹಾಜಿಯವರ ನಾಲ್ಕನೇ ಮಗಳು. ಮೂರು ಹೆಣ್ಣು ಮಕ್ಕಳನ್ನು ಹಳ್ಳಿಯವರಿಗೆ ಕೊಟ್ಟು 'ನಿಖಾ' ಮಾಡಿ ಅವರ ಕಷ್ಟ-ಸುಖಗಳನ್ನು ಕಂಡುಕೊಂಡ ತಾಯಿ ಹಲೀಮಾ ನಾಲ್ಕನೆಯ ಮಗಳನ್ನಾದರೂ ಪಟ್ಟಣದ ಹುಡುಗನಿಗೆ ಕೊಡಬೇಕೆಂದು ಬಯಸುವುದು ಸಹಜವೇ ಆಗಿದೆ. ಇದರ ಹಿಂದಿರುವ ಉದ್ದೇಶ ಪಟ್ಟಣದ ಮಗಳಾದರೂ ಸುಖವಾಗಿರಲಿ ಎಂಬುದಾಗಿದೆ. ಹೆಂಡತಿ ಹಲೀಮಾಳ ಈ ತೀರ್ಮಾನ ಮಹಮ್ಮದ್ ಹಾಜಿಯವರಿಗೆ ಸಮ್ಮತವಾಗಿ ಕಾಣದಿದ್ದರೂ ತನ್ನ ಮಗಳ ಮೇಲಿನ ಅತಿಯಾದ ಮಮತೆ ಹೆಂಡತಿಯ ಬಯಕೆಗೆ ಸಮ್ಮತಿ ಸೂಚಿಸುವಂತೆ ಮಾಡುತ್ತದೆ. ನಫೀಸಾ ಮಹತ್ವಾಕಾಂಕ್ಷೆ ಹೊಂದಿದ ಹೆಣ್ಣೇನೂ ಅಲ್ಲ. ತನ್ನನ್ನು ಪ್ರೀತಿಯಿಂದ ಕಾಣುವ ಗಂಡಸಿಕ್ಕರೆ ಅವಳ ಜೀವನ ಸಾರ್ಥಕ ಎಂದು ನಂಬಿದವಳು. ಗುಣದಲ್ಲಿ ನಡವಳಿಕೆಯಲ್ಲಿ ಅಪ್ಪಟ ಚಿನ್ನದಂತಿದ್ದ ನಫೀಸಾಳನ್ನು ಮದುವೆಯಾಗುವ ಹುಡುಗ ನಾಗರಿಕ ಸಮಾಜದ ವಿದ್ಯಾವಂತ

ಬದ್ರುದ್ದೀನ್ ಬಣ್ಣಕ್ಕೆ ಪಟ್ಟಣದ ತಳುಕಿಗೆ ಮರುಳಾಗಿ ಹಳ್ಳಿಯ ಮುಗ್ಧೆಯಾದ ನಫೀಸಾಳನ್ನು ತಿರಸ್ಕಾರ ರೂಪವಾಗಿ ಕಾಣುವುದನ್ನು ಕಾದಂಬರಿಯಲ್ಲಿ ಕಾಣುತ್ತೇವೆ. ಇಂತಹ ಸ್ಥಿತಿಯಲ್ಲಿ ಗಂಡ ಬದ್ರುದ್ದೀನ್ ಬೊಂಬಾಯಿಗೆ ಹೊರಟು ನಿಂತಾಗ ಅಬ್ದುಲ್ಲಾ ಸಾಹೇಬರು ಮಗನನ್ನು ಕುರಿತು 'ಹುಡುಗಿ ತುಂಬಾ ಒಳ್ಳೆಯವಳು ದೊಡ್ಡ ಮನೆತನದವಳು, ಮದುವೆ ಮಾಡಿ ಕರೆದುಕೊಂಡು ಬಂದೂ ಆಯಿತು. ಬೇಕಾದರೆ ಅವಳನ್ನು ಬೊಂಬಾಯಿಗೆ ಕರೆದುಕೊಂಡು ಹೋಗು' ಎಂಬಂತಹ ಬುದ್ಧಿಮಾತುಗಳನ್ನು ಹೇಳುತ್ತಾರೆ. ಹಾಗೆ ನೋಡಿದರೆ ಮನೆಯ ಇತರೆ ಎಲ್ಲರಿಗಿಂತಲೂ ಸೊಸೆಯ ಬಗ್ಗೆ ಅತ್ಯಂತ ವಾತ್ಸಲ್ಯ ಹಾಗೂ ಆತ್ಮೀಯತೆಯಿಂದಲೇ ನಡೆದುಕೊಳ್ಳುತ್ತಾರೆ. ಆದರೆ ಬದ್ರುದ್ದೀನ್‌ದು ಒಂದೇ ಹಠ' ಸಮನಾಗಿ ಸೀರೆಯುಡಲೂ, ರವಿಕೆ ತೊಡಲೂ ಬಾರದ ಹಳ್ಳಿಯ ಕಪ್ಪು ಹುಡುಗಿಯನ್ನು ಬೊಂಬಾಯಿಗೆ ಕರೆದೊಯ್ಯಬೇಕೆ? ಎಂಬ ತಿರಸ್ಕಾರದ ಮೂತುಗಳನ್ನಾಡುತ್ತಾನೆ. ಗಂಡನ ಈ ಮಾತುಗಳು ನಫೀಸಾಳನ್ನು ಜರ್ಝರಿತಳಾಗುವಂತೆ ಮಾಡುತ್ತವೆ. ಬೊಂಬಾಯಿಗೆ ಹೋಗುವಾಗ ತನಗೆ ಒಂದು ಮಾತು ಹೇಳದೆ ಹೋದಾಗ ತನ್ನೆಲ್ಲಾ ಕನಸುಗಳು, ನುಚ್ಚು ನೂರಾಗುತ್ತದೆ ಇಂತಹ ಸ್ಥಿತಿಯಲ್ಲಿ ಅವಳ ಆರೋಗ್ಯ ಹದಗೆಟ್ಟು ಗರ್ಭಿಣಿಯಾಗಿ ತವರು ಮನೆಗೆ ಬರುತ್ತಾಳೆ. ಕೆಲವು ದಿನಗಳ ಬಳಿಕ ಬದ್ರುದ್ದೀನ್ ಬೇರೊಂದು ಹೆಣ್ಣನ್ನು ಮದುವೆ ಆಗುವ ಸಲುವಾಗಿ ನಫೀಸಳಿಗೆ ತಲಾಖ್ ಕಳಿಸುವುದನ್ನು ಕಾದಂಬರಿಯಲ್ಲಿ ಕಾಣುತ್ತೇವೆ.

ಪುರುಷರಿಗೆ ಉದ್ಯೋಗ ಆರ್ಥಿಕ ಭದ್ರತೆಯನ್ನು ನೀಡಿದರೆ ಆರ್ಥಿಕವಾಗಿ ಪರಾವಲಂಬಿಯಾದ ಹೆಣ್ಣಿಗೆ ಅವಳ ವಿವಾಹವೇ ಭದ್ರತೆಯನ್ನು ಒದಗಿಸುವ ನೆಲೆಯಾಗಿರುತ್ತದೆ. ಇಂತಹ ಸ್ಥಿತಿಯಲ್ಲಿ ಹೆಣ್ಣಿಗೆ 'ತಲಾಖ್' ಕೊಡುವುದೆಂದರೆ ದಾಂಪತ್ಯದ ಸಂಬಂಧದಿಂದ, ಸುಖದಿಂದ ಮಾತ್ರ ಆಕೆಯನ್ನು ಹೊರದೂಡುವುದಲ್ಲ; ಆರ್ಥಿಕ ಸ್ಥಿತಿಯಿಂದಲೂ ಅವಳು ಅಭದ್ರತೆಯನ್ನು ಎದುರಿಸಬೇಕಾಗುತ್ತದೆ. ನಿರುದ್ಯೋಗಿ ಯುವಕ ಹೇಗೆ ಕುಟುಂಬದಲ್ಲಿ ನಿರ್ಲಕ್ಷ್ಯಕ್ಕೆ ಒಳಗಾಗುತ್ತಾನೋ ಅದೇ ರೀತಿಯಲ್ಲಿ ತಲಾಖ್ ಪಡೆದ ಹೆಣ್ಣು ಕೂಡ ನಿರ್ಲಕ್ಷ್ಯಕ್ಕೆ ಗುರಿಯಾಗುತ್ತಾಳೆಂಬುದು ಸ್ಪಷ್ಟ. ಈ ಕಾರಣವಾಗಿ ತನ್ನ ಬದುಕುವ ಹಕ್ಕನ್ನೇ ಕಳೆದುಕೊಳ್ಳಬೇಕಾದ ದುಸ್ಥಿತಿ ಎದುರಾಗುತ್ತದೆ. ಕಾದಂಬರಿಯಲ್ಲಿ ಇಂತಹುದೇ ದಾರುಣ ಸ್ಥಿತಿಯನ್ನು ಅನುಭವಿಸುವ ನಫೀಸಾ ಗಂಡನ ಮನೆಯಲ್ಲಿ ಒಂದು ರೀತಿಯ ಶೋಷಣೆಯನ್ನು ಅನುಭವಿಸಿದರೆ, ತವರು ಮನೆಯಲ್ಲಿ ಮತ್ತೊಂದು ರೀತಿಯ ಶೋಷಣೆಯನ್ನು ಅನುಭವಿಸಬೇಕಾದ ಸ್ಥಿತಿ ನಿರ್ಮಾಣವಾಗುತ್ತದೆ.

ಈ ನೆಲೆಯಲ್ಲಿ ನಫೀಸಾ ಸಾಮಾಜಿಕವಾಗಿ ಹಾಗೂ ಆರ್ಥಿಕವಾಗಿ ಅಭದ್ರ ಸ್ಥಿತಿಯನ್ನು ಎದುರಿಸುತ್ತಾಳೆ. 'ಪಾಪಿ ಸಮುದ್ರಕ್ಕೆ ಹೋದರೂ ಮೊಳಕಾಲುದ್ದ ನೀರು' ಎಂಬಂತೆ ತವರು ಮನೆಯಲ್ಲೂ ಅಣ್ಣ ಅತ್ತಿಗೆಯವರಿಂದ 'ಗಂಡ ಬಿಟ್ಟವಳೆಂದು ಉಪೇಕ್ಷೆಗೆ ಒಳಗಾಗುತ್ತಾಳೆ. ಹಾಗೂ ಅವರ ಚುಚ್ಚು ನುಡಿಗಳು ಅವಳ ಮನಸ್ಸಿನಲ್ಲಿ ನಾಟಿಕೊಳ್ಳುತ್ತವೆ. ಮದುವೆಯಾದ ಹೆಣ್ಣು ಆ ವ್ಯವಸ್ಥೆಯಿಂದ ಹೊರಬಂದರೆ ಸಮಾಜದ ನೆಲೆಯಲ್ಲಿ ಸಂಬಂಧಗಳ ನೆಲೆಯಲ್ಲೂ ಎಂಥ ನಿರ್ಲಕ್ಷ್ಯಕ್ಕೆ ಒಳಗಾಗಬೇಕಾಗುತ್ತದೆ' ಎಂಬುದನ್ನು ಕಾದಂಬರಿ ಧ್ವನಿಸುತ್ತದೆ.

ಇಂತಹ ಅಸಹಾಯಕ ಸ್ಥಿತಿಯಲ್ಲಿ ಮಾನಸಿಕ ವೇದನೆಗೆ ಒಳಗಾದ ನಫೀಸಾಳಿಗೆ ತಂದೆ-ತಾಯಿಗಳ ಸಾಂತ್ವನದ ಮಾತುಗಳು ಮತ್ತೊಮ್ಮೆ ನಿಖಾ ಮಾಡಿಕೊಳ್ಳುವುದಕ್ಕೆ ಸಮ್ಮತಿಸುವಂತೆ ಮಾಡುತ್ತದೆ. ನಫೀಸಾಳ

ಬಗ್ಗೆ ಬಾಲ್ಯದಿಂದಲೇ ಒಲವು ಹೊಂದಿದ್ದ ಶಫಿಯುಲ್ಲಾ ತನ್ನನ್ನು ಮದುವೆಯಾಗುವ ಇಚ್ಛೆ ತೋರಿದಾಗ ತನ್ನ ಮಗನ ಸಲುವಾಗಿ ತಿರಸ್ಕರಿಸುತ್ತಾಳೆ. ಆದರೆ ಮಗನನ್ನು ಶಿಕ್ಷಣದ ನೆಪದಲ್ಲಿ ನಗರಕ್ಕೆ ಕರೆದೊಯ್ಯುವ ಬದ್ರುದ್ದೀನ ಇದ್ದ ಒಂದೇ ಒಂದು ಕರುಳ ಸಂಬಂಧವನ್ನು ದೂರಮಾಡುತ್ತಾನೆ. ಹುಟ್ಟಿದ ದಿನದಿಂದ ಒಂದು ದಿನವೂ ತನ್ನ ಮಗುವೆಂದು ಬಂದು ನೋಡದ ಹೆತ್ತ ತಾಯಿಯ ಸಂಬಂಧವನ್ನೇ ಕಡಿದುಕೊಂಡರೂ, ತಂದೆ ಎಂಬ ಅಧಿಕಾರವನ್ನು ಮಾತ್ರ, ಗಂಡುಮಗು ಎನ್ನುವ ಕಾರಣಕ್ಕಾಗಿ ಚಲಾಯಿಸುವ ಪುರುಷ ಸಮಾಜದ ದಬ್ಬಾಳಿಕೆಯನ್ನು ಇಲ್ಲಿ ಕಾಣಬಹುದು. "ಉರಿವ ಗಾಯದ ಮೆಲೆ ಉಪ್ಪು ಸುರಿದಂತೆ", ಮಗ ತಾಯಿಯನ್ನು ದೈಹಿಕವಾಗಿ ಮಾತ್ರವಲ್ಲ ಮಾನಸಿಕವಾಗಿಯೂ ದೂರಮಾಡಿದ್ದು ನಫೀಸಳ ಮಾನಸಿಕ ತಳಮಳವನ್ನು ಹೆಚ್ಚಿಸಿತು. ತಾಯಿ ಹೃದಯ ಒಳಗೊಳಗೇ ಬೆಂದು ಬಸವಳಿದುಹೋದುದನ್ನು ಕಾದಂಬರಿ ಮನೋಜ್ಞವಾಗಿ ಚಿತ್ರಿಸುತ್ತದೆ. ಈ ನೋವನ್ನು ಮರೆಯುವ ಸಮಾಜದ ನಿಂದನೆ ಹಾಗೂ ಅಣ್ಣ ಅತ್ತಿಗೆಯ ಕುಹಕದ ನುಡಿಗಳಿಂದ ಮುಕ್ತವಾಗುವುದಕ್ಕೆ ತಂದೆಯ ವಯಸ್ಸಿನ, ಈಗಾಗಲೇ ಎಂಟು ಮಕ್ಕಳ ತಂದೆಯಾಗಿರುವ ಉಸ್ಮಾನರನ್ನು 'ನಿಖಾ' ಮಾಡಿಕೊಂಡು ಬದುಕು ಸಾಗಿಸುವ ದಾರುಣ ಸ್ಥಿತಿ ಎದುರಾಗುತ್ತದೆ.

ನಫೀಸಾ ಈ ನೋವು - ಅವಮಾನಗಳಿಂದ ಕ್ಷಣಕಾಲವಾದರೂ ಹೊರಗುಳಿಯುವಂತಹ ಔದಾರ್ಯವನ್ನು ತೋರಿದ ಉಸ್ಮಾನರ ಕುಟುಂಬದಲ್ಲಿ ಆಕೆ ಒಂದಾಗಲೂ ಪ್ರಯತ್ನಿಸುತ್ತಾಳೆ. ಆತನ ಹೆಣ್ಣುಮಕ್ಕಳನ್ನೇ ಸಂಬಾಳಿಸಿಕೊಂಡು ಪ್ರೀತ್ಯಾದರಗಳನ್ನು ಗಳಿಸುವ ನಫೀಸಾಳನ್ನು ಗಂಡನ ಹಿರಿಯಮಗ ಹುಸೈನ್ ದ್ವೇಷಿಸುತ್ತಾನೆ. ತಂದೆಯ ಆಸ್ತಿಯಲ್ಲಿ ನಫೀಸಾ ಹಕ್ಕುದಾರಳು ಎಂಬುದು ಖಚಿತವಾದಾಗ ಹಣ-ಆಸ್ತಿಯನ್ನು ಲಪಟಾಯಿಸುವ ಉದ್ದೇಶದಿಂದ ನಫೀಸಾಳನ್ನು ಉಪಾಯದಿಂದ ತವರಿಗೆ ಹೋಗುವಂತೆ ಮಾಡುತ್ತಾನೆ.

ಪಕ್ಷವಾತ ಕಾಯಿಲೆಯಿಂದ ಸಾವು-ಬದುಕಿನ ಸ್ಥಿತಿಯಲ್ಲಿದ್ದ ತಂದೆಯ ಹೆಬ್ಬೆರಳಿನ ಗುರುತು ಹಾಕಿಸಿ 'ತಲಾಖ್' ಕಳಿಸುತ್ತಾನೆ. ಎರಡು ಸಲ 'ತಲಾಖ್'ಗೆ ಒಳಗಾಗುವ ನಫೀಸಾ ಗಂಡಸರ ಸ್ವಾರ್ಥ ಮತ್ತು ನಿಷ್ಕರುಣೆಗೆ ಬಲಿಯಾಗುತ್ತಾಳೆ.

ಸ್ವಾರ್ಥ ಸಮಾಜದ ನೀತಿ ಎಷ್ಟು ಕಠೋರವಾಗಿದೆ ಎಂದರೆ ನಫೀಸಾ ಸತ್ತ ಗಂಡನ ಸಾವಿಗೆ ಹೋಗಲು 'ತಲಾಖ್' ಅಡ್ಡಬರುತ್ತದೆ. ಹತ್ತು ವರ್ಷಗಳ ಕಾಲ ಗಂಡ-ಮಕ್ಕಳಿಗಾಗಿ ಆ ಮನೆಯಲ್ಲಿ ಅವಿಶ್ರಾಂತವಾಗಿ ದುಡಿದ ನಫೀಸಾ ತನಗರಿಯದೇ ನಡೆದ ಕಾರ್ಯದಲ್ಲಿ ಬರಿಗೈಯಲ್ಲಿ ತವರು ಮನೆಯಲ್ಲೇ ಉಳಿಯುವಂತಾಗುತ್ತದೆ. ಈ ನಡುವೆ ಮಗನೂ ಕೂಡ ನಗರ ವ್ಯಾಮೋಹ ಮತ್ತು ಶಿಕ್ಷಣದ ಅಪಾಕಾರಿ ಘಟಕಗಳನ್ನು ಮೈಗೂಡಿಸಿಕೊಂಡು ತಾಯಿಯನ್ನು ತಿರಸ್ಕರಿಸುತ್ತಾನೆ. ಇಷ್ಟೆಲ್ಲಾ ದುರಂತಗಳಿಂದ ಬದುಕಿನ ಅರ್ಥ, ಆಸೆಗಳನ್ನು ಕಳೆದುಕೊಂಡ ಆಕೆಯ ಮಾನಸಿಕ ಸ್ವಾಸ್ಥ್ಯ ಹದಗೆಡುತ್ತದೆ. ಆರ್ಥಿಕ ಅಸಹಾಯಕತೆ, ಭವಿಷ್ಯದ ಬಗೆಗಿನ ಆತಂಕ, ಪ್ರೀತಿಯ ಕೊರತೆ ಇವೆಲ್ಲವೂ ಸೇರಿ ದಾರಿಕಾಣದ ಸ್ಥಿತಿ ತಲುಪುತ್ತಾಳೆ. ಹೀಗೆ ಧಾರ್ಮಿಕವಾದ ಸಂದರ್ಭದಲ್ಲಿ 'ತಲಾಖ್' ಅನ್ನು ಪುರುಷ ಪ್ರಧಾನ ವ್ಯವಸ್ಥೆ ಬಳಸಿಕೊಳ್ಳುತ್ತಾ ಹೆಣ್ಣನ್ನು ಸರಕುಗಳಂತೆ ಒಬ್ಬರಿಂದ ಒಬ್ಬರಿಗೆ ರವಾನಿಸುವ ಆಕೆಯನ್ನು ಮಾನಸಿಕವಾಗಿ, ದೈಹಿಕವಾಗಿ ದುರ್ಬಲಗೊಳಿಸುವ ತಂತ್ರವನ್ನು ಬಳಸಿದೆ. 'ಚಂದ್ರಗಿರಿಯ ತೀರದಲ್ಲಿ'ನ ಮೌಲ್ವಿಗಳಂತೆಯೇ ಇಲ್ಲಿಯೂ ಮೌಲ್ವಿಗಳು ಹೆಣ್ಣಿಗೆ

ಆಗುವ ಅನ್ಯಾಯವನ್ನು ಒಪ್ಪಬಲ್ಲರು. ಆದರೆ ವ್ಯವಸ್ಥೆಯನ್ನು ವಿರೋಧಿಸಲು ಸಿದ್ಧರಿಲ್ಲ.

ಮುಸ್ಲಿಂಮರಲ್ಲಿ ವಿಚ್ಛೇದನ ನೀಡಿದ ಪತ್ನಿಗೆ ಜೀವನಾಂಶವನ್ನು ಕೊಡಬೇಕೆಂಬ ನಿಯಮವಿಲ್ಲದಿರುವುದರಿಂದ ನಫೀಸಾಳಂತಹ ಸಾವಿರಾರು ಹೆಣ್ಣುಮಕ್ಕಳು ಅತಂತ್ರವಾದ ಸ್ಥಿತಿಯಲ್ಲಿ ತೊಳಲಾಡಬೇಕಾಗುತ್ತದೆ. "ವಿವಾಹ ವಿಚ್ಛೆದನ, ಆಸ್ತಿಯ ಹಕ್ಕು ಮುಂತಾದವುಗಳು ಈ ವ್ಯಕ್ತಿನಿಯಮದಲ್ಲಿ ಒಳಗೊಂಡಿದೆ. ಹಿಂದೂ ಮತ್ತು ಕ್ರಿಶ್ಚಿಯನ್ ನಿಯಮದಲ್ಲಿ ಬಹುಪತ್ನಿತ್ವ ಕಾನೂನುಬಾಹಿರವಾದರೆ ಮುಸ್ಲಿಮರು ನಾಲ್ಕು ಜನ ಪತ್ನಿಯರನ್ನು ಇಟ್ಟುಕೊಳ್ಳಬಹುದು. ಹೀಗೆಂದರೆ ನಾಲ್ಕಕ್ಕಿಂತ ಹೆಚ್ಚುಬಾರಿ ವಿವಾಹವಾಗಬಾರದೆಂದೇನೂ ಇಲ್ಲ. ಆತನು ಐದನೆಯವಳನ್ನೇ ವಿವಾಹವಾಗಬಾರದೆಂದೇನೂ ಇಲ್ಲ! ಆಗ ಈ ನಾಲ್ವರಲ್ಲಿ ಓರ್ವಳನ್ನು ಮೂರು ಬಾರಿ 'ತಲಾಖ್'ಎಂದು ಹೊರತಳ್ಳಿದರಾಯಿತು!"[2]

ಮೂರು ತಿಂಗಳಿಗಿಂತಹೆಚ್ಚು ಕಾಲ ಆಕೆಗೆ ಜೀವನಾಂಶ ಕೊಡಬೇಕಾಗಿಲ್ಲ. ಅಲ್ಲದೆ ಆತನ ಹೊಣೆ ಮುಗಿಯುತ್ತದೆ. ಒಂದುವೇಳೆ ಆತನು ನಾಲ್ವರಲ್ಲಿ ಯಾರಿಗೂ 'ತಲಾಖ್' ಕೊಡದೆ ಐದನೆಯವಳನ್ನು ತಂದಿಟ್ಟುಕೊಂಡರೂ, ಆಗ ಮೊದಲ ಪತ್ನಿ ಯಾಂತ್ರಿಕವಾಗಿ ವಿಚ್ಛೇದನಗೊಳ್ಳುತ್ತಾಳೆ. ಹಾಗಾಗಿ ತಾನು ಹೊರಟು ಹೋಗಬೇಕಾಗುತ್ತದೆ! ಎಲ್ಲಿಗೆ ಎಂಬ ಪ್ರಶ್ನೆಗೆ ವ್ಯಕ್ತಿನಿಯಮದಲ್ಲಿ ಉತ್ತರವೇನೂ ಇಲ್ಲ ಆಕೆ ಜೀವನೋಪಾಯಕ್ಕೇನು ಮಾಡಬೇಕು ಎಂಬ ಪ್ರಶ್ನೆಗೆ ಉತ್ತರವಿಲ್ಲ" ಕೇವಲ ಹೆಣ್ಣು ಮಕ್ಕಳು ಎಂಬ ಕಾರಣಕ್ಕಾಗಿಯೇ ಮುಸ್ಲಿಮರಲ್ಲಿ ತಂದೆ ತಾಯಿಗಳ ಆಸ್ತಿ ಒಡಹುಟ್ಟಿದವರಲ್ಲದ ಯಾರ‍್ಯಾರಿಗೋ ಸೇರುವುದನ್ನು ಹೆಣ್ಣಿನ ಹಿತದೃಷ್ಟಿಯಿಂದ ಪ್ರಶ್ನಿಸುತ್ತಾರೆ. ಇದಕ್ಕೆ ಷಾಬಾನು ಪ್ರಕರಣವನ್ನು ಉಲ್ಲೇಖಿಸಬಹುದು. ಇಸ್ಲಾಂನ ವೈಯಕ್ತಿಕ ಕಾನೂನು ಮಹಿಳೆಯರಿಗೆ ತಾರತಮ್ಯವೆನಿಸುತ್ತವೆ. ಈ ಕಾನೂನಿನ ಅಡಿಯಲ್ಲಿ ಮಹಿಳೆಯರು ಎಂಥ ಘೋರ ಅನ್ಯಾಯಕ್ಕೆ ಒಳಗಾಗುತ್ತಾರೆ, ಅನಕ್ಷರಸ್ತರಾದ ಬಹುಪಾಲು ಮುಸ್ಲಿಂ ಮಹಿಳೆಯರು ತಮ್ಮ ಕಾಲಮೇಲೆ ತಾವು ನಿಲ್ಲಲಾಗದ ಬಡತನದ ಅಸಹಾಯಕ ಸ್ಥಿತಿ ಹೇಗಿರುತ್ತದೆ ಎಂಬುದನ್ನು ಹಲವು ನಿದರ್ಶನಗಳ ಮೂಲಕ ಸಾರಾ ಅವರು ತಮ್ಮ ಕಾದಂಬರಿಯಲ್ಲಿ ತೆರೆದಿದ್ದಾರೆ.

ಕಾದಂಬರಿಯ 'ಮುನ್ನುಡಿ'ಯಲ್ಲಿ ಹೇಳಿರುವಂತೆ ಸಮಾರಂಭವೊಂದರಲ್ಲಿ ಮುಸ್ಲಿಮರೊಬ್ಬರು ಭಾಷಣ ಮಾಡುತ್ತಾ "ನಮ್ಮ ಮಹಿಳೆಯರನ್ನು ನಾವು ಹೂವಿನಂತೆ ಕಾಪಾಡಿಕೊಳ್ಳುತ್ತೇವೆ. ವಜ್ರದಂತೆ ರಕ್ಷಿಸಿಕೊಳ್ಳುತ್ತೇವೆ." ಎಂದೆಲ್ಲಾ ಹೇಳುತ್ತಾರೆ. ಆದರೆ ಮುಸ್ಲಿಂ ಜನಾಂಗದಲ್ಲೇ ಹುಟ್ಟಿ ಬೆಳೆದ ಸಾರಾ ಅವರು ಕಂಡುಂಡ ಅನುಭವವೇ ಬೇರೆ ಎಂಬುದನ್ನು ಅವರ ಸಾಹಿತ್ಯ ಪ್ರತಿಬಿಂಬಿಸಿದೆ. ಅವರೇ ಮುನ್ನುಡಿಯಲ್ಲಿ ಹೇಳುವಂತೆ ಮುಸ್ಲಿಂ ಸ್ತ್ರೀ ಹೂವು ಆಗುತ್ತಾಳೆ, ವಜ್ರವೂ ಆಗುತ್ತಾಳೆ. ಇಲ್ಲವೆಂದಿಲ್ಲ ಆದರೆ ಇಂತಹ ಹೂಗಳು, ವಜ್ರಗಳು ಕಾಲ ಕಸವಾಗಿ ಬೀದಿಗೆ ಎಸೆಯಬಹುದಾದ ಸರಕುಗಳಾಗಿಬಿಡುತ್ತವೆಂಬ ಕಠೋರಸತ್ಯವನ್ನು ಓದುಗರ ಮುಂದಿಡುವುದನ್ನು ಅವರು ಮರೆಯುವುದಿಲ್ಲ.

ಕಾದಂಬರಿಯಲ್ಲಿ ಹಿಂದೊಮ್ಮೆ ಮನೆಯ ಯಜಮಾನಿಯಂತೆ ಮೆರೆದ ನಫೀಸ, ಇಂದು ಪರಕೀಯಳಂತೆ ಕಾಲಕಸಕ್ಕೂ ಕಡೆಯಾಗಿ ಗುಲಾಮಳಂತೆ ಬದುಕಬೇಕಾದ ವಾಸ್ತವ ಸತ್ಯವನ್ನು ತೆರೆದಿಟ್ಟಿದೆ. ನಫೀಸ ಇಷ್ಟೆಲ್ಲಾ ಸಂಕಷ್ಟಗಳ ನಡುವೆಯೂ ಬದುಕನ್ನು ಹುಡುಕುವುದು ಅವಳ ಜೀವನ ಪ್ರೀತಿಯ ದ್ಯೋತಕವಾಗಿದೆ. ಆಕೆ ಆತ್ಮಹತ್ಯೆಯಂತಹ ಅಸಹಾಯಕ ಸೋಲಿಗೆ ಶರಣಾಗದೆ, ಕಳ್ಳಬಸುರೆಂದು

ಸಮಾಜದಿಂದ ತಿರಸ್ಕೃತವಾದ ಹೆಣ್ಣು ಮಗುವನ್ನು ತನ್ನ ವೈಯಕ್ತಿಕ ದುಡಿತದ ಗಳಿಕೆಯಲ್ಲಿ ಭವಿಷ್ಯದ ಆಶಯವಾಗಿ ಗುರುತಿಸಿಕೊಳ್ಳುವುದು. ಮೋಸ ಮತ್ತು ಕ್ರೌರ್ಯದಿಂದ ತುಂಬಿರುವ ಪುರುಷ ಪ್ರಧಾನ ಸಮಾಜಕ್ಕೆ ತೋರಿದ ಅರ್ಥಪೂರ್ಣ ಪ್ರತಿಭಟನೆಯೇ ಆಗಿದೆ. ಅಮಾನವೀಯತೆಗೆ ತೋರಿದ ತಿರಸ್ಕಾರವಾಗಿದೆ. ಇದನ್ನು ಸಾರಾ ಆರಂಭದ ತಮ್ಮ ಮಿತಿಯೊಳಗೆ ಸಮರ್ಥವಾಗಿಯೇ ನಿರ್ವಹಿಸಿದ್ದಾರೆ.

ವ್ಯವಸ್ಥೆಗೆ ಇಂಥ ಮಾದರಿಗಳನ್ನು ಬದಲಿ ಒಡ್ಡುತ್ತಾ ಹೋದಂತೆ ಅದರ ಸತ್ಯ ಕ್ರಮೇಣ ಕುಗ್ಗುತ್ತದೆ. ಅದನ್ನು ಪೂರ್ಣ ನಿರ್ಧಾರಿತವಾದ ಯಾವ ತಾತ್ವಿಕ ದೃಷ್ಟಿಕೋನವೂ ಇಲ್ಲದೆ ಬದುಕಿಗೆ ಸಹಜವಾಗಿ ಒಲಿಯುವ ನಫೀಸಳಂಥ ಹೆಣ್ಣು ಇಂಥ ನಿರ್ಧಾರ ಮಾಡಬೇಕು. ಆಗ ವ್ಯವಸ್ಥೆ ತನ್ನ ಕ್ರೌರ್ಯಕ್ಕೆ ತಾನೇ ನಾಚಿಕೊಳ್ಳುತ್ತದೆ.

ಇಂಥ ಸ್ಥಿತಿಯಿಂದಾಗಿ ಹೆತ್ತವರು ಮಾನಸಿಕ ಹಿಂಸೆ, ನೋವು, ತೊಳಲಾಟಗಳಲ್ಲಿ ನಿತ್ಯ ಬೆರೆತು ಹೋಗುವ ಸ್ಥಿತಿ ನಿರ್ಮಾಣವಾಗಿದೆ. ನೆಮ್ಮದಿಯ ಬದುಕನ್ನೇ ಕಳೆದುಕೊಂಡು ಅಸಹಾಯಕರಾಗಿ ವ್ಯವಸ್ಥೆಯ ಹಿಡಿತದಲ್ಲಿ ಸಿಕ್ಕಿರುವ ತಮ್ಮ ಮಗಳ ಸ್ಥಿತಿಯಿಂದಾಗಿ ತಂದೆ-ತಾಯಂದಿರಿಗೆ ನೆಮ್ಮದಿ ಇಲ್ಲವಾಗುತ್ತದೆ. ನಫೀಸಳ ಅಣ್ಣ ಖಾಲಿದ್ ತನ್ನ ಸಮಾಜದ ಇಂಥ ನಿಯಮಗಳ ಬಗ್ಗೆ ತಿರಸ್ಕಾರದ ಮಾತನಾಡುತ್ತನಾದರೂ, ಅದನ್ನು ಪ್ರತಿಭಟಿಸುವ ಪ್ರಯತ್ನ ಮಾಡುವುದಿಲ್ಲ. ಹೀಗೆ ವ್ಯವಸ್ಥೆಯನ್ನು ಪ್ರಶ್ನಿಸಿ ಪ್ರತಿಭಟಿಸಲು ಸಾಧ್ಯವಾಗದ ಸ್ಥಿತಿಯಲ್ಲಿ ಆಧುನಿಕ ಚಿಂತನೆಗಳನ್ನೊಳಗೊಂಡ ಗಂಡುಮಕ್ಕಳು ಇರುವುದನ್ನು ಕಾದಂಬರಿಯಲ್ಲಿ ಗಮನಿಸಬಹುದು. ಧರ್ಮ, ವೈಯಕ್ತಿಕ ಕಾನೂನು ಸಂಪ್ರದಾಯದ ಹಿಡಿತದಲ್ಲಿ ಇಡೀ ಕುಟುಂಬವೇ ನಲುಗಿಹೋಗಲು ಕಾರಣವಾಗುತ್ತದೆ. ವ್ಯವಸ್ಥೆಯ ಹಿಡಿತದಲ್ಲಿ ಎಲ್ಲರೂ ಅಸಹಾಯಕರಾಗಿ, ಮೂಕರಾಗಿ ಒಪ್ಪಿಕೊಳ್ಳುವ ಅಸಹಾಯಕತೆಗೆ ಒಳಗಾದರೆ ವಾಸ್ತವದ ನೆಲೆಯಲ್ಲಿ ನಫೀಸಳ ಬದುಕು ಹಕ್ಕಿನ ಪ್ರತೀಕವಾಗುತ್ತದೆ.

ಸಾರಾ ಅವರು 'ತಲಾಖ್' ಸಮ್ಮತವಾದ ಪದ್ಧತಿಯನ್ನು ತಮ್ಮ ಕೃತಿಗಳ ಕೇಂದ್ರದಲ್ಲಿಟ್ಟು ಕುರಾನ್‌ಗ್ರಂಥವನ್ನು ಪದೇ ಪದೇ ವಿಮರ್ಶೆಗೆ ಒಳಪಡಿಸುತ್ತಾರೆ. ಇಸ್ಲಾಂ ಧರ್ಮದಲ್ಲಿ ಗಂಡು-ಹೆಣ್ಣಿನ ಸಂಬಂಧ ಮತ್ತು ಧಾರ್ಮಿಕವಾಗೇ ಒಟ್ಟು ಮುಸ್ಲಿಂ ಮಹಿಳೆಯನ್ನು ಹೇಗೆಲ್ಲಾ ಕ್ರೂರವಾಗಿ ಹಿಂಸಿಸಬಹುದು ಎಂಬುದನ್ನು ಅವರ ಕಥೆ-ಕಾದಂಬರಿಗಳಲ್ಲಿ ಕಟ್ಟಿಕೊಟ್ಟಿದ್ದಾರೆ. ಮತ-ಧರ್ಮಗಳಾಚೆ ಸಾಧ್ಯವಾಗುವ ಮಾನವೀಯ ಸಂಬಂಧಗಳ ಬಗ್ಗೆ ಅವರ ತುಡಿತವಿದೆ. ಧರ್ಮದ ಪರದೆಯ ಹಿಂದೆ ನಡೆಯುವ ಅಮಾನವೀಯ ಕ್ರೌರ್ಯವನ್ನು ಸಿಟ್ಟು ಮತ್ತು ನೋವಿನಿಂದ ಖಂಡಿಸುತ್ತಾರೆ.

ಸಾರಾ ಅವರ ಕಥೆ-ಕಾದಂಬರಿಗಳೆಲ್ಲಾ ಮೇಲು ನೋಟಕ್ಕೆ 'ತಲಾಖ್' ಕಥೆಗಳಂತೆ ತೋರುತ್ತವೆಯಾದರೂ ಅವು ಕೇವಲ ಮುಸ್ಲಿಂ ಧಾರ್ಮಿಕ ವ್ಯವಸ್ಥೆಯ ಚಿತ್ರಣವನ್ನು ನೀಡುವುದಕ್ಕಾಗಿ ಹುಟ್ಟುಕೊಂಡವಲ್ಲ ಎಂಬುದು ಮುಖ್ಯ. 'ತಲಾಖ್'ನಂಥ ಧರ್ಮ ಸಮ್ಮತವಾದ ಬಿಡುಗಡೆಯ ಹಾದಿ ಹೆಣ್ಣನ್ನು ಆಕೆಯ ಮನಸ್ಸನ್ನು, ಆಕೆಯ ಬದುಕನ್ನು, ಒಟ್ಟಾರೆ ಹೆಣ್ಣಿನ ಅಸ್ತಿತ್ವವನ್ನೇ ಹೇಗೆ ಅಲುಗಾಡಿಸುತ್ತದೆ ಎಂಬುದರ ವಾಸ್ತವ ಸ್ಥಿತಿಯನ್ನು ವಸ್ತುನಿಷ್ಠವಾಗಿ ಅರ್ಥಪೂರ್ಣವಾಗಿ ಅನಾವರಣಗೊಳಿಸುತ್ತದೆ. ಧರ್ಮ ಸಮ್ಮತವಾದ ನಿಯಮಗಳೆಂಬ ಚೌಕಟ್ಟಿನಲ್ಲೇ ಪುರುಷ ಸಮಾಜ ಅದರಲ್ಲೂ ಮತೀಯ ಸಮಾಜ ಎಂಥ ಭದ್ರವಾದ ಅಡಿಪಾಯವನ್ನು ಹಾಕಿ ತಡೆಗೋಡೆಗಳನ್ನು ನಿರ್ಮಾಣ ಮಾಡಿದೆ ಎಂಬುದನ್ನು ವಿಶ್ಲೇಷಿಸುತ್ತದೆ.

ಸಾರಾ ಅವರ ತುಡಿತವಿರುವುದು ಮಹಿಳೆಯರ ಜೀವಂತ ಬದುಕಿನ ಕಡೆಗೆ ಆದ್ದರಿಂದ ಅವರು ತಲಾಖ್‌ಅನ್ನು ಗಂಭೀರ ಸಮಸ್ಯೆಯಾಗಿ ಪರಿಗಣಿಸುತ್ತಾರೆ. ತಲಾಖ್‌ನಿಂದಾಗಿಯೇ ಉದ್ಭವಿಸುವ ಹೆಣ್ಣಿನ ಸಮಸ್ಯೆಗಳ ಕಡೆ ಗುರಿಕಾರರಂತೆ ದಿವ್ಯವಾದ ದೃಷ್ಟಿಯನ್ನು ಇಟ್ಟಿದ್ದಾರೆ ಆ ಮಟ್ಟಿನ ಶ್ರದ್ಧೆ ಅವರ ಬರಹದಲ್ಲಿ ಕಂಡುಬರುತ್ತದೆ.

ಸಾರಾ ಅವರ 'ಚಂದ್ರಗಿರಿಯ ತೀರದಲ್ಲಿ' ಮತ್ತು 'ವಜ್ರಗಳು' ಕಾದಂಬರಿಗಳು ಮಹಿಳಾ ಸಮುದಾಯ ಎದುರಿಸಬೇಕಾದ 'ತಲಾಖ್' ಸಮಸ್ಯೆಯನ್ನು ಕುರಿತು ವಿಶ್ಲೇಷಣಾತ್ಮಕ ನೆಲೆಯಲ್ಲಿ ಚಿತ್ರಿಸಿದರೆ 'ಸಹನಾ' ಕಾದಂಬರಿಯು ಆ ಸಮಸ್ಯೆಯನ್ನು ಮೀರುವ, ಬಹುಪತ್ನಿತ್ವ ಪದ್ಧತಿಯ ವಿರುದ್ಧ ಸೆಟೆದು ನಿಲ್ಲುವ ಬದುಕಿನ ಹೋರಾಟವನ್ನು ಸಂಘರ್ಷಾತ್ಮಕ ನೆಲೆಯಲ್ಲಿ ಕಟ್ಟಿಕೊಡುತ್ತದೆ. ಮುಸ್ಲಿಂ ಮಹಿಳೆ ತನ್ನ ಬದುಕಿನ ಹಕ್ಕನ್ನು ಮತ್ತು ಅಸ್ತಿತ್ವವನ್ನು ಉಳಿಸಿಕೊಳ್ಳಲು ಪುರುಷ ಪ್ರಧಾನ ವ್ಯವಸ್ಥೆಯಿಂದ ಬಿಡಿಸಿಕೊಂಡು ಸ್ವತಂತ್ರವಾಗಿ ಬದುಕುವ 'ಆತ್ಮವಿಶ್ವಾಸ'ವನ್ನು ಕಾದಂಬರಿಯ ನಾಯಕಿ 'ನಸೀಮಾ'ತೋರುತ್ತಾಳೆ. ಸಾರಾ ಅವರು ಮೇಲಿನ ಕಾದಂಬರಿಗಳಲ್ಲಿ ಕಂಡರಿಸಿದ ಮೂಲಭೂತ ಸಮಸ್ಯೆಗಳಿಗೆ ಸಂಬಂಧಿಸಿದಂತೆ ಈ ಕಾದಂಬರಿ ಪರಿಹಾರಾತ್ಮಕ ನೆಲೆಯಲ್ಲಿ ಉತ್ತರಗಳನ್ನು ಹುಡುಕಿದಂತಿದೆ. ಈ ನೆಲೆಯಲ್ಲಿ 'ಸಹನಾ' ಕಾದಂಬರಿ ಮಹಿಳೆಯರ ಬದುಕಿನ ಸಮಸ್ಯೆಗೆ ಸಂಬಂಧಿಸಿದಂತೆ ಹೊಸ ಬೆಳಕನ್ನು ಹಾಯಿಸಿದೆ. ಲೇಖಕಿ ತಮ್ಮ ಕಥೆ ಕಾದಂಬರಿಗಳಲ್ಲಿ ಚಿತ್ರಿಸಿರುವ ಬಹುಪಾಲು ಸ್ತ್ರೀಪಾತ್ರಗಳು ತಮ್ಮ ಶೋಷಣೆಗೆ ಕಾರಣವಾದ ವ್ಯವಸ್ಥೆಯನ್ನು ಪ್ರತಿಭಟಿಸಿದರೂ, ಅದಕ್ಕೆ ಎದುರಾಗಿ ತಮ್ಮನ್ನೇ ಒಡ್ಡಿಕೊಂಡು ನಿಲ್ಲುವುದಿಲ್ಲ. ಆದರೆ 'ಸಹನಾ' ಕಾದಂಬರಿಯ 'ನಸೀಮಾ' ಕಾದಂಬರಿಯ ಶೀರ್ಷಿಕೆಯಲ್ಲಿ ಸೂಚಿಸಿರುವಂತೆ 'ಸಹನಾ' ಮಯಿ ಆಗದೆ ಆ ಸಹನೆಯನ್ನುಮೀರಿ ಬದುಕಿನ ಹೋರಾಟದಲ್ಲಿ ತನ್ನನ್ನು ಗುರುತಿಸಿಕೊಳ್ಳುವ ದಿಟ್ಟತನದ ಹೆಣ್ಣಾಗಿ ಬೆಳೆಯುತ್ತಾಳೆ.

ಬಡತನದ ಬದುಕಿನಲ್ಲಿಯೇ ತಾಯಿಯ ಕಣ್ಮಣಿಯಾಗಿ ಬೆಳೆದ ನಸೀಮಾ ಹದಿಮೂರನೆಯ ವರ್ಷಕ್ಕೆ ಪಾಷಾನನ್ನು 'ನಿಖಾ' ಮಾಡಿಕೊಂಡು ವೈವಾಹಿಕ ಜೀವನವನ್ನು ಪ್ರವೇಶಿಸುತ್ತಾಳೆ. ಹದಿನಾಲ್ಕನೇ ವರ್ಷಕ್ಕಾಗಲೇ ಒಂದು ಹೆಣ್ಣುಮಗುವಿನ ತಾಯಿಯಾಗಿ ಗಂಡನ ಮನೆ ಸೇರುತ್ತಾಳೆ. ಕಷ್ಟದಲ್ಲೇ ಹುಟ್ಟಿಬೆಳೆದ ನಸೀಮಾಳಿಗೆ ಬಡತನದ ಅನುಭವ ಹೊಸದೇನು ಅಲ್ಲ. ಹಾಗಾಗಿ ಗಂಡನ ಮನೆಯ ಕಷ್ಟ ನಿಷ್ಠೂರಗಳನ್ನು ಸಹಿಸಿಕೊಂಡು ತನ್ನ ಕನಸುಗಳಿಗೆ ಕಡಿವಾಣಹಾಕಿ ಎಲ್ಲರೊಡನೆಯೂ ಹೊಂದಿಕೊಂಡು ಸಹನಾಮೂರ್ತಿಯಾಗಿಯೇ ಇರುತ್ತಾಳೆ. ತನ್ನ ಅತ್ತೆ, ಗಂಡ ಬಯಸುವ 'ಗಂಡು ಮಗು'ವನ್ನು ಹೆರಲಿಲ್ಲವೆಂಬ ದೋಷ ಹೊರಿಸಿದಾಗಲೂ ಸಹನೆಯ ನೆಲೆಯಲ್ಲೇ ವ್ಯವಹರಿಸುತ್ತಾಳೆ. ಆದರೆ ತನ್ನ ಗಂಡ ಮತ್ತೊಬ್ಬಳನ್ನು ಮದುವೆಯಾಗಿ ಕರೆತಂದಾಗ ನಸೀಮಾಳ ಮನಸ್ಸಿನ ಆಕ್ರೋಶದ ಜ್ವಾಲೆ ಧಗಧಗಿಸಿ ಉರಿಯತೊಡಗುತ್ತದೆ. ನಂತರದಲ್ಲಿ ಆಕೆ ತನ ಸಹನೆಯ ಮುಸುಕನ್ನು ಕಿತ್ತೆಸೆದು ಹೊರಬರುವುದನ್ನು ಕಾದಂಬರಿಯಲ್ಲಿ ಕಾಣುತ್ತೇವೆ.

ಡಾ. ಬಸವರಾಜ ಸಬರದ ಅವರ ಅಭಿಪ್ರಾಯದಂತೆ 'ಕೊನೆಯ ಹಂತದಲ್ಲಿ ಗಂಡನ ಬೆದರಿಕೆಗೆ ಬಗ್ಗಲಾರದೆ, ಸಮಾಜ ವ್ಯವಸ್ಥೆಯ ಅನಿಷ್ಟಗಳಿಗೆ ಕುಗ್ಗಲಾರದೆ, ಬಂದದ್ದನ್ನು ಎದುರಿಸಿ ಮುನ್ನಡೆಯುವ ಭೋರ್ಗರೆಯುವ ನದಿಯಾಗುತ್ತಾಳೆ. ಈವರೆಗೂ ತನ್ನ ಒಂದೇ ಒಂದು ಚಿಕ್ಕ ಕೋರಿಕೆಯನ್ನು ತನ್ನ ಗಂಡ ಈಡೇರಿಸದೇ ಹೋಗಿದ್ದರೂ ಗಂಡ ಮತ್ತು ಅತ್ತೆಯೊಡನೆ ಕೋಪಿಸಿಕೊಂಡಿರಲಿಲ್ಲ. ಹೊಟ್ಟೆ ತುಂಬಾ

ಅನ್ನವಿಲ್ಲದೆಹೋಗಿದ್ದರೂ ತಾಯಿಯೊಡನೆ ದೂರು ಸಲ್ಲಿಸಿರಲಿಲ್ಲ. ಎಲ್ಲವನ್ನೂ ಸಹಿಸಿಕೊಂಡೇ ಬಂದಿದ್ದಳು. ಕ್ಷಮಾಯಾಧರಿತ್ರಿ ಎಂಬ ಹೆಸರನ್ನು ಸಾರ್ಥಕಪಡಿಸಿಕೊಂಡಿದ್ದಳು'.[೧] ನಸೀಮಳ ಕುರಿತು ಮೂಡಿಬಂದಿರುವ ಈ ಮಾತುಗಳು ಇಂದು ಹೆಣ್ಣು ಸಿಡಿದೇಳಬೇಕಾಗಿರುವ ಅಗತ್ಯವನ್ನು ಒತ್ತಿ ಹೇಳುತ್ತವೆ.

ಗಂಡಿನ ದುಡಿಮೆಗೆ ಮಾತ್ರ ಪ್ರಾಧಾನ್ಯತೆ ನೀಡಿ ಹೆಣ್ಣಿನ ದುಡಿಮೆಯನ್ನು ಕಡೆಗಣಿಸುವ, ಹೆಂಡತಿಯ ಮಾನಸಿಕ ಮತ್ತು ದೈಹಿಕ ಆರೋಗ್ಯಕ್ಕಿಂತ ಆಕೆಯಿಂದ ಸಿಗುವ ಲೈಂಗಿಕ ಅಗತ್ಯಗಳೇ ಮುಖ್ಯವೆನಿಸಿ ವರ್ಷಕ್ಕೊಮ್ಮೆ ನಿರಂತರವಾಗಿ ಹೆರುತ್ತಾ ದೈಹಿಕ ಅಸಾಮರ್ಥ್ಯದಿಂದಾಗಿ ಕಾಯಿಲೆಗೆ ಒಳಗಾಗಿ ಚಿತ್ರಹಿಂಸೆ ಅನುಭವಿಸುವ ಸ್ಥಿತಿ ಹೆಣ್ಣಿನದು. ರೋಗಿಷ್ಠೆಯಾಗಿ ಕಾಣಿಸಿಕೊಳ್ಳುವ ಹೆಂಡತಿಯ ಬಗ್ಗೆ ಗಂಡನಿಗಾಗಲಿ, ಅತ್ತೆಗಾಗಲಿ ಅನುಕಂಪವಿಲ್ಲದಿರುವುದು ಇದೇ ವೃತ್ತದಲ್ಲಿ ಸುತ್ತುತ್ತಿರುವ ಇಲ್ಲಿನ ಮಹಿಳೆಯರಿಗೆ ತಮ್ಮ ನೈಜಸ್ಥಿತಿ ಅರಿವಿಗೆ ಬರದಂತೆ ಇರಿಸಿರುವ ವ್ಯವಸ್ಥೆಯ ಕ್ರೌರ್ಯ ಬೆಚ್ಚುವಂತೆ ಮಾಡುತ್ತದೆ. ಮೇಲ್ನೋಟಕ್ಕೆ ತೀವ್ರವಾಗಿ ಪರಿಗಣಿಸಬೇಕಾದ ವಿಷಯಗಳಲ್ಲ ಎಂದು ಕಡೆಗಣಿಸುವ ಸಾಧ್ಯತೆಗಳೇ ಹೆಚ್ಚು. ಆದರೆ ಇಂಥ ಸಮಸ್ಯೆಗಳೇ ತೀವ್ರವಾಗಿ  ಪರಿಣಾಮದ ಘೋರತೆ ಅಸಹನೀಯವಾಗುತ್ತದೆ. ಇದಕ್ಕೆ ಸಾರಾ ಚಿತ್ರಿಸಿರುವ ಮಹಿಳೆಯರ ಬದುಕೆ ಸಾಕ್ಷಿ. ನಸೀಮಳ ಪಾತ್ರ ಈ ಸ್ಥಿತಿಯಿಂದ ಹೊರಬರುವ ಆಶಯವನ್ನು ಪ್ರತಿಪಾದಿಸಿದೆ. ಲೇಖಕಿ ನಸೀಮಳ ಮೂಲಕ ಪುರುಷ ಪ್ರಧಾನ ಸಮಾಜದ ಮೌಲ್ಯಗಳನ್ನು ಪ್ರಶ್ನಿಸುವ ಜೀವನದ ತಲ್ಲಣಗಳನ್ನು ಎತ್ತಿ ಹಿಡಿಯುತ್ತಲೇ ಹೊಸ ಸತ್ಯಗಳನ್ನು ಅನ್ವೇಷಿಸುವ, ಸಂಕೀರ್ಣವಾದ ಬದುಕಿನ ಅನಂತ ಸಾಧ್ಯತೆಗಳನ್ನು ತೆರೆದಿಡುವ ಪ್ರಯತ್ನವನ್ನು ಮಾಡಿದ್ದಾರೆ.

ಈ ನೆಲೆಯಲ್ಲಿ ಸಂಪ್ರದಾಯ ಮೌಢ್ಯ, ಅಜ್ಞಾನ, ಬಡತನ, ಕಿರುಕುಳಗಳ ನಡುವೆ ಸಿಕ್ಕಿ ನರಳಿದ ಹೆಣ್ಣೊಂದು ಅಂತಿಮವಾಗಿ ಸ್ವತಂತ್ರವಾಗಿ ಬದುಕಲು ಹಾತೊರೆಯುವುದು ಸಹಜವೇ ಆಗಿದೆ. ನಸೀಮ ಮುಸ್ಲಿಂ ಸಮಾಜದ ವಿಷ ವರ್ತುಲದಿಂದ ದೂರ ಸರಿದು ಆತ್ಮಾಭಿಮಾನದಿಂದ ತಲೆ ಎತ್ತಿ ನಿಲ್ಲುವುದಕ್ಕೆ ಯತ್ನಿಸುತ್ತಾಳೆ. ಪರಿಸ್ಥಿತಿಯ ಒತ್ತಡಗಳೇ ಬಂಡಾಯದ ಪಾಠ ಕಲಿಸಿಕೊಡುತ್ತವೆ ಎಂಬುದಕ್ಕೆ ಕಾದಂಬರಿಯಲ್ಲಿನ ನಸೀಮಳೇ ಸ್ಪಷ್ಟ ನಿದರ್ಶನ. ಮುಸ್ಲಿಂ ಮೌಢ್ಯತೆಗೆ ಸಂಕೇತವಾಗಿ ಕಾಣಿಸಿಕೊಳ್ಳುವ ಮತ್ತು ಈಗಾಗಲೇ ಎರಡನೆಯ ಹೆಂಡತಿಗೂ 'ತಲಾಖ್' ನೀಡಿರುವ ಅನ್ವರ್ ಪಾಷ ನಸೀಮಳನ್ನು ಎದುರಿಸಿ ನಿಲ್ಲಲು ಈ ನಡುವೆ ಯತ್ನಿಸಿದಾಗ ಆಕೆ ಕೊಡುವ ಒಂದೊಂದು ಉತ್ತರವೂ ಮುಸ್ಲಿಂ ಮಹಿಳೆಯರಿಗಷ್ಟೇ ಸೀಮಿತವಾಗದೆ ಇಡೀ ಸ್ತ್ರೀ ಸಮುದಾಯಕ್ಕೆ ಅನುಕರಣೀಯವಾಗಿದೆ. ಅವಳು ಹೇಳುವಂತೆ "ನಾನು ಆಗಾಗ ನಿಮ್ಮ ಬಳಿಬಂದು ಭಿಕ್ಷೆ ಬೇಡಬೇಕಾಗಿತ್ತೆ? ಆ ಭಿಕ್ಷಾನ್ನ ನನಗೆ ಬೇಕಾಗಿರಲಿಲ್ಲ ನಾನು ಯಾರಿಂದಾಗಿ ರೋಗಿಯಾದೆ? ನಿಮಗೆ ನನ್ನಿಂದ ಸುಖ ಸಿಗಲಾರದೆಂದು ಮನವರಿಕೆಯಾಯಿತೇನೋ. ನಿಮ್ಮ ಸುಖಕ್ಕಾಗಿ ಇನ್ನೊಬ್ಬಳನ್ನು ಮದುವೆಯಾದಿರಿ, ಈಗ ನಾನು ನಿಮ್ಮೊಡನೆ ಬಂದರೆ ಮೊದಲಿನಂತೆಯೇ ವರ್ಷಕ್ಕೊಂದು ಮಗುವಾಗಿ ನನ್ನ ಆರೋಗ್ಯ ಮಾಯವಾಗುತ್ತದೆ. ನಾನು ರೋಗಿಯಾಗಿ ಹಾಸಿಗೆ ಹಿಡಿಯುತ್ತೇನೆ. ಆಗ ನಿಮ್ಮ ದೇಹಸುಖಕ್ಕಾಗಿ ನೀವು ಇನ್ನೊಬ್ಬಳನ್ನು ನಿಖ ಮಾಡಿಕೊಳ್ಳುತ್ತೀರಿ ಅಲ್ಲವೆ? ಕ್ಷಮಿಸಿ. ಇನ್ನೊಮ್ಮೆ ಭೂಮಿಯಂತೆ ಸಹನಾಮಯಿಯಾಗಿರಲು ನಿಮ್ಮ ಕೋಣೆಯಿಂದ ತೇಲಿಬರುವ ಆ ಪಿಸುನುಡಿಗಳನ್ನು ಕಿಲಕಿಲ ನಗುವನ್ನು ಕೇಳಿಕೊಂಡು ಆ ಅಗ್ನಿ ಕುಂಡದಲ್ಲಿ ಬೇಯಲು ನಾನು ಸಿದ್ಧಳಿಲ್ಲ"[೧೦] ಎಂದು ಹೇಳುವ ನಸೀಮಳ ಮಾತುಗಳಲ್ಲಿ ಗಂಡನನ್ನು ಕುರಿತ ತಿರಸ್ಕಾರದ ಧ್ವನಿಯಿದೆ.

ಹೆಂಡತಿಯ ನಿರ್ದಾಕ್ಷಣ್ಯವಾದ ನುಡಿಗಳನ್ನು ಕೇಳಿದ ಅನ್ವರ್‌ಪಾಷ ಧಾರ್ಮಿಕ ನಿಯಮಗಳನ್ನು ಪುರುಷ ತನ್ನ ಸ್ವಾರ್ಥಕ್ಕೆ ಹೇಗೆ ದುರುಪಯೋಗಪಡಿಸಿಕೊಳ್ಳುತ್ತಾನೆ ಎಂಬುದನ್ನು ಗಮನಿಸಬುದು. "ನಾನು ಇನ್ನೊಂದು 'ನಿಕಾಹ್' ಮಾಡಿಕೊಳ್ಳುತ್ತೇನೇ ಹೊರತು ಸಾಯುವವರೆಗೂ ನಿನಗೆ ತಲಾಖ್ ಕೊಡಲಾರೆ"[೧೫] ಎಂಬ ದ್ವೇಷ ಮತ್ತು ಈರ್ಷ್ಯೆ ಬೆರೆತ ಧ್ವನಿಯಲ್ಲಿ ನುಡಿದಾಗ ನಸೀಮ 'ನೀವು ತಲಾಖ್ ಎಂದು ಹೇಳದಿದ್ದರೂ ಪರವಾಗಿಲ್ಲ ನನ್ನನ್ನು ಅರ್ಥಮಾಡಿಕೊಳ್ಳುವ, ನನ್ನನ್ನು ಮಾತ್ರ ಪ್ರೀತಿಸುವವನೊಬ್ಬ ಬಂದರೆ ಅಂತಹವನಿಗೆ ನನ್ನನ್ನು ನಾನೇ ಅರ್ಪಿಸಿಕೊಳ್ಳುತ್ತೇನೆ. ಅವನೊಡನೆ ಓಡಿಹೋಗುತ್ತೇನೆ'[೧೬] ಎಂದು ಉತ್ತರಿಸಿದ ನುಡಿಗಳು ಎದೆಯಾಳದಲ್ಲಿ ಉಳಿದುಕೊಂಡು ಗಂಡನನ್ನು ಧಿಕ್ಕರಿಸಿ ನಿಲ್ಲುವ ಬಂಡಾಯದ ಮನೋಭಾವವನ್ನು ನಸೀಮಳಲ್ಲಿ ಗುರುತಿಸಬಹುದು. 'ಗಂಡು ಮನುಷ್ಯತ್ವವಿಲ್ಲದ ರಾಕ್ಷಸನಾಗಬಲ್ಲನಾದರೆ ಹೆಣ್ಣು ಹುಲಿಯೋ ಸರ್ಪವೋ ಆಗಲೇ ಬೇಕಾಗುತ್ತದೆ.'[೧೭] ಎಂಬ ಮಾತುಗಳು "ಬಾಳು ಪೂರ್ತಿ ಅವಧಿಕೊಟ್ಟರೂ ತಾನಿನ್ನೂ ಪಾಷನ ಬಳಿ ಹಿಂದಿರುಗಲಾರೆ. ಒಬ್ಬಳು ಜೀವಂತವಿರುವಾಗ ಆಕೆಯ ಕಣ್ಣೆದುರಿಗೆ ಇನ್ನೊಬ್ಬಳನ್ನು ವಿವಾಹವಾಗುವ ಸಮಾಜದ ಈ ವ್ಯವಸ್ಥೆ ಬದಲಾಗಬೇಕು. ತನ್ನಂತೆ ಈ ಯಾತನೆಗೆ ಒಳಗಾದವರು, ಈ ಅಗ್ನಿಕುಂಡದಲ್ಲಿ ಬೆಂದ, ಬೇಯುತ್ತಿರುವ ಹೆಣ್ಣು ಮಕ್ಕಳೆಲ್ಲರೂ ಈ ಕುರಿತು ಯೋಚಿಸುವಂತಾಗಬೇಕು. ತನ್ನಂತೆ ನೊಂದ ಹೆಣ್ಣು ಮಕ್ಕಳೆಲ್ಲಾ ಸೇರಿ ವಿರೋಧಿಸಬೇಕು. ಇವರ ವಿರುದ್ಧ ದಂಗೆಯೇಳಬೇಕು" ಎನ್ನುವಲ್ಲಿ ಅವಳಲ್ಲಿನ ಬಂಡಾಯದ ಸ್ವರೂಪವನ್ನು ಗುರುತಿಸಬಹುದಾಗಿದೆ. ಕಾದಂಬರಿಯ ಕೊನೆಯಲ್ಲಿ ನಸೀಮಾ ತನ್ನ ಮಗಳು ರೋಸಿಯನ್ನು ಕುರಿತು ಮಾಡುವ ಆಲೋಚನೆ 'ಇನ್ನೆಂದೂ ರೋಸಿಯನ್ನು ನೋಯಿಸಬಾರದು. ಅವಳಿಗೆ ಚೆನ್ನಾಗಿ ವಿದ್ಯಾಭ್ಯಾಸ ಮಾಡಿಸಿ ನಮ್ಮ ಸಮಾಜದಲ್ಲಿ ಹೆಣ್ಣು ಮಕ್ಕಳಿಗಾಗುತ್ತಿರುವ ಅನ್ಯಾಯವನ್ನು ಪ್ರತಿಭಟಿಸಿ ಅದರ ವಿರುದ್ಧ ಹೋರಾಡಲು ಅವಳನ್ನೇ ಬಿಡಬೇಕು' ಎಂಬ ನಿರ್ಧಾರದಲ್ಲಿ ಲೇಖಕಿಯ ದನಿಯೂ ಬೆರೆತಿರುವುದನ್ನು ಕಾಣಬಹುದು. ಇಂಥ ನಿರ್ಧಾರಗಳು ಹೇಗಿರಬೇಕೆಂದರೆ ನಸೀಮ ನದಿಯಲ್ಲಿ ಇಳಿಯುವಾಗ ಗಮನಿಸಿದ ಬಂಡೆಕಲ್ಲಿನಂತೆ ಎಂತಹ ಪ್ರವಾಹಕ್ಕೂ ಅಲುಗಾಡದೆ ಅಚಲವಾದ ಕ್ರಿಯೆಯಲ್ಲಿ ತೊಡಗುವ ಸೂಚನೆ ಇದೆ ಎನಿಸುತ್ತದೆ.

ಈ ಹಿನ್ನೆಲೆಯಲ್ಲಿ ಕಾದಂಬರಿಯಲ್ಲಿನ ನಸೀಮ ಸಹನಾಮೂರ್ತಿಯಾಗಿ ಬೆಳೆದು ಅಂತಿಮವಾಗಿ ತನ್ನ ಮಿತಿಗಳನ್ನು ತಾನೇ ಮೀರುವುದರ ಮೂಲಕ ಬದುಕಿನ ಸತ್ಯಗಳನ್ನು ಕಂಡುಕೊಳ್ಳುತ್ತಾಳೆ. ಪ್ರಾರಂಭದಿಂದ ಅಂತ್ಯದವರೆಗೂ ನಸೀಮಳ ನೋವು ನಿರಾಸೆಗಳನ್ನು ಬಿಂಬಿಸುವ ಈ ಕಾದಂಬರಿ ವ್ಯವಸ್ಥೆಯಲ್ಲಿನ ಕೊಳಕು ತನವನ್ನು ಹೊರಗೆಳೆಯುತ್ತದೆ. ಮಾತ್ರವಲ್ಲದೆ ಕುರಾನ್ ಧರ್ಮ ಗ್ರಂಥವನ್ನು ತಮ್ಮ ಸ್ವಾರ್ಥಕ್ಕೆ ಬಳಸಿಕೊಳ್ಳುವ ವ್ಯಕ್ತಿಗಳ ಸಣ್ಣತನಗಳನ್ನು ಬಯಲು ಮಾಡುತ್ತದೆ. ಈ ಅರ್ಥದಲ್ಲಿ ಬದುಕಿನಲ್ಲಿ ಬರುವ ನೋವು ನಿರಾಸೆಗಳಂತಹವುಗಳನ್ನು ಸನೀಮಾಳಂಥವರು ಮೀರಿ ನಿಲ್ಲುವುದರಿಂದ ಕಾದಂಬರಿಯಲ್ಲಿ ಜೀವಂತಿಕೆಯನ್ನು ಕಾಣಬಹುದಾಗಿದೆ. ಮುಸ್ಲಿಂಮರಲ್ಲಿನ ಯಥಾಸ್ಥಿತಿ ವ್ಯವಸ್ಥೆಯನ್ನು ಈ ಕಾದಂಬರಿ ಉಗ್ರವಾಗಿ ಖಂಡಿಸುತ್ತದೆ.

'ಸುಳಿ' ಕಾದಂಬರಿಯಲ್ಲಿ ಮುಮ್ಮಟಿ ಬೊಂಬಾಯಿಯಲ್ಲಿದ್ದ ತನ್ನ ಇನ್ನೊಂದು ಕುಟುಂಬವನ್ನು ಮನೆಗೆ ಕರೆತಂದಾಗ ನಿರೂಪಕಿ ಆಡುವ ಮಾತುಗಳು ಹೆಣ್ಣಿನ ಮನಸ್ಸಿನ ಒಳತೋಟಿಗಳ ಅಭಿವ್ಯಕ್ತಿಯೇ ಆಗಿದೆ. "ಹವಾನಿಯಂತ್ರಿತ ಕೊಠಡಿಯೂ ಆಕೆಯ ಪಾಲಿಗೆ ಅಗ್ನಿ ಕುಂಡವೇ ಆಯಿತು. ಆಕೆಯ ಎಲ್ಲಾ ಸುಖ-

ಸಂತೋಷಗಳಲ್ಲಿ ಪಾಲು ಪಡೆಯಲು ಇನ್ನೋರ್ವ ಹೆಣ್ಣು ಬಂದಿದ್ದಳು. ತಾನು ಹಸಿವಿನಿಂದ ನರಳುತ್ತಿದ್ದಾಗ ಮಕ್ಕಳನ್ನು ಬೆಳೆಸಲು ತನ್ನ ದೇಹವನ್ನು ಹಗಲಿರುಳೂ ತೇಯುತ್ತಿದ್ದಾಗ, ಆಗೆಲ್ಲಾ ನನ್ನ ಗಂಡ ಇನ್ನೊಬ್ಬ ಹೆಣ್ಣಿನ ತೋಳ ತೆಕ್ಕೆಯಲ್ಲಿ ಸುಖವಾಗಿದ್ದನು!... ಇಷ್ಟು ವರ್ಷವೂ ಆತನು ತನ್ನನ್ನು ವಂಚಿಸುತ್ತಲೇ ಬಂದಿದ್ದಾನೆ!" ಗಂಡನ ಬಗೆಗಿನ ವಿಶ್ವಾಸ ಅವಳಲ್ಲಿ ತಿರಸ್ಕಾರವಾಗಿ ಮಾರ್ಪಟ್ಟಿತು. ಮುಮ್ಮಟಿಯನ್ನು ಸಮರ್ಥಿಸಿಕೊಂಡ ಅತ್ತೆ ಮತ್ತು ನಾದಿನಿಗೆ ಸೊಸೆ ರುಖ್ಯಾಬಿ "ಹತ್ತುವರ್ಷಗಳವರೆಗೆ ಒಂದು ಗಂಡಿನ ಸಂಪರ್ಕ ಬಿಡಿ, ಬಿಡಿ ಕಾಸೂ ಇಲ್ಲದೆ ಮೂರು ಮಕ್ಕಳು ನಾನು ಬದುಕು ಸಾಗಿಸಿಲ್ಲವಾ? ಮಕ್ಕಳ ಯೋಗಕ್ಷೇಮಕ್ಕಾದರೂ ಒಂದು ಪತ್ರ ಬರೆಯ ಬೇಕೆಂದರೂ ಆಗ ಅವರಿಗೆ ಅನ್ನಿಸಿತ್ತೆ?... ನಿಮ್ಮ ಮಗಳ ಗಂಡನೇ ಇನ್ನೊಬ್ಬಳನ್ನು ಕಟ್ಟಿಕೊಂಡು ಬರಲಿ, ಆಗ ಗೊತ್ತಾದೀತು" ಈಕೆಯ ಮಾತಿನ ಆಳದಲ್ಲಿ ಅಡಗಿರುವ ವ್ಯಥೆ, ನಿರಾಸೆಗಳು ಇಣುಕಿವೆ. ಈ ಮಾತುಗಳು ಒಂದು ಹೆಣ್ಣು ಇನ್ನೊಂದು ಹೆಣ್ಣಿನ ನೆಲೆಯಲ್ಲಿ ಯೋಚಿಸಬೇಕಾದ ಅಗತ್ಯವನ್ನು ಪ್ರತಿಬಿಂಬಿಸಿದೆ.

ಬಹು ಪತ್ನಿತ್ವದ ನೆಲೆಯಲ್ಲಿ ರುಖ್ಯಾಬಿ ಮತ್ತು ಫರೀದ ಅಸಹಾಯಕರಾಗಿ ಮುಮ್ಮಟಿಯೊಡನೆ ಬದುಕಿನಲ್ಲಿ ಹೊಂದಾಣಿಕೆ ಮಾಡಿಕೊಂಡರೆ, ಶ್ರೀಧರನ ಹೆಂಡತಿ ಕುಸುಮ ತನ್ನ ಮೇಲಿನ ಅತ್ಯಾಚಾರವನ್ನು ಪ್ರತಿಭಟಿಸಲು ಹೋಗಿ ಹುಚ್ಚಿ ಪಟ್ಟ ಕಟ್ಟಿಕೊಳ್ಳುತ್ತಾಳೆ. ಮರಿಯಮ್ಮ ಅತ್ತೆ, ಮಾವ, ಗಂಡನ ಮೌಢ್ಯಕ್ಕೆ ಬಲಿಪಶುವಾದರೆ ಹಾಜಿರಾ ಶ್ರೀಮಂತಿಕೆಯ ಆಸೆ ಬಿದ್ದು ತಿಳಿವಳಿಕೆ ಹೊಂದಿದ್ದ ಗಂಡನಿಂದ ತಲಾಖ್ ಪಡೆದು ಬೇರೊಬ್ಬನನ್ನು ಮದುವೆಯಾಗಿ ಅತ್ತೆ ಗಂಡನ ಹಿಂಸೆಗೆ ಗುರಿಯಾಗುತ್ತಾಳೆ.

ಹೆಂಗಸಿನ ಬದುಕನ್ನು ನಿಯಂತ್ರಿಸುವ ಶಕ್ತಿಗಳು ತಮಗೆ ಅನುಕೂಲವಾಗುವಂತೆ ಅವಳನ್ನು ಬಳಸಿಕೊಳ್ಳಲು ಹಿಂಜರಿಯುವುದಿಲ್ಲ. ಕೌಟುಂಬಿಕ ಆವರಣದೊಳಗೆ ದಾಂಪತ್ಯ ನೆಲೆಯಿಂದ ಹೊರತಾದ ಸ್ತ್ರೀ ಶೋಷಣೆಯ ಹಲವು ನೆಲೆಗಳನ್ನು 'ಸುಳಿ' ಕಾದಂಬರಿಯಲ್ಲಿ ಹೇಗೆ ಚಿತ್ರಿಸಲಾಗಿದೆ ಎಂಬುದನ್ನು ಕಾಣಬಹುದು.

ಶ್ರೀಮಂತರ ಮನೆಯಲ್ಲಿ ಅಡುಗೆಯವಳಾದ ಆಚುಮ್ಮ ಮತ್ತು ಜಲೀಲ ಇಲ್ಲಿ ಶೋಷಣೆಗೆ ಒಳಗಾಗುವವರು. ಬಡತನ ಮತ್ತು ತೀರದ ಬಯಕೆಯಿಂದ ಕಳ್ಳವ್ಯವಹಾರಕ್ಕೆ ಕೈಹಾಕಿ ಮೇಸ್ತ್ರಿ ಉಂಬಾಯಿಯ ಕೈಗೆ ಸಿಕ್ಕಿ ಬೀಳುತ್ತಾಳೆ. ಇಲ್ಲಿ ಈ ಕೃತ್ಯವನ್ನು ಯಜಮಾನನಿಗೆ ತಿಳಿಸುವ ನೆಪದಲ್ಲಿ ಮೋಸಮಾಡುತ್ತಿದ್ದ ಉಂಬಾಯಿ ಹೆಣ್ಣಿನ ಅಸಹಾಯಕತೆಯನ್ನು ಮುಂದಿಟ್ಟುಕೊಂಡು ಸಂದರ್ಭವನ್ನು ಹೇಗೆ ಸ್ವಾರ್ಥಕ್ಕಾಗಿ ದುರುಪಯೋಗ ಪಡಿಸಿಕೊಳ್ಳುತ್ತಾನೆ ಎಂಬುದರ ಒಳನೋಟವಿದೆ.

ಈ ಕಾರಣವನ್ನೇ ಬಳಸಿಕೊಂಡು ಆಕೆ ಕೂಡಿಟ್ಟಿದ್ದ ಹಣವನ್ನೆಲ್ಲಾ ಲಪಟಾಯಿಸುವುದಲ್ಲದೆ ಆಶ್ರಯ ನೀಡುವ ಪೊಳ್ಳು ಭರವಸೆ ನೀಡಿ ಅವಕಾಶ ಸಿಕ್ಕಾಗಲೆಲ್ಲಾ ದೈಹಿಕವಾಗಿ ಬಳಸಿಕೊಳ್ಳುತ್ತಾನೆ. ನಂತರ ಆಕೆ ಗರ್ಭಿಣಿಯಾದಾಗ ಆಕೆಯಿಂದಲೇ ದೂರ ಸರಿಯುತ್ತಾನೆ. ಹಣದ ಜೊತೆ ದೇಹವನ್ನು ಆತನಿಗೆ ಒತ್ತೆ ಇಟ್ಟು ನಂಬಿದ್ದಕ್ಕೆ ಹಾದರದ ಪಟ್ಟ, ಹಿಂಸೆ, ಅವಮಾನ, ಆತಂಕಗಳು ಆಚುಮ್ಮನ ಪಾಲಿಗುಳಿಯುತ್ತವೆ.

ಅನಾಥ ಹೆಣ್ಣು ಕೈಗೆ ಸಿಕ್ಕಳೆಂದು ಅವಕಾಶವನ್ನು ತನ್ನಿಷ್ಟದಂತೆ ಬಳಸಿಕೊಂಡು ಆಕೆಗೆ ರಕ್ಷಣೆ ಕೊಡದೆ ಪಲಾಯನ ಮಾಡುವ ಉಂಬಾಯಿಯಂಥ ಅವಕಾಶವಾದಿಗಳಿಂದ ದೂರವಿರಬೇಕಾದ ಎಚ್ಚರಿಕೆಯನ್ನು

ಕಾದಂಬರಿ ಪ್ರತಿಪಾದಿಸಿದೆ. ಇದನ್ನು ಕಂಜಮ್ಮಳ ಮಾತಿನ ಮೂಲಕ ನಿರೂಪಕಿ ಆಡಿಸಿದ್ದಾರೆ. ಮುಳ್ಳನ್ನು ಮುಳ್ಳಿನಿಂದ ತೆಗೆಯುವ ತಂತ್ರವನ್ನು ಬೆಂಬಲಿಸಿದ್ದಾರೆ. ಹೆಣ್ಣು ಶೋಷಣೆಗೆ ಒಳಗಾಗುವುದಲ್ಲದೆ. ತಪ್ಪಿತಸ್ಥೆಯಾಗಿ ನಿಲ್ಲುವುದರ ಬಗೆಗೂ ವಿರೋಧದ ಧ್ವನಿಯಿದೆ. ಅಸಹಾಯಕತೆಯಿಂದ ಹೊರಬಂದು ಮಾನಸಿಕ ಸ್ಥೈರ್ಯದಿಂದ ಎದುರಿಸಬಹುದಾದ ಸಾಧ್ಯತೆಗಳ ಕಡೆಗೆ ಸುಳಿವು ನೀಡುತ್ತಾರೆ. ಆಚುಮ್ಮಳಂತೆ ಫಾತಿಬಿಯನ್ನು ತನ್ನ ಬಲೆಗೆ ಹಾಕಿಕೊಳ್ಳಲು ಹೋದ ಉಂಬಾಯಿ ಪೊರಕೆ ಏಟು ತಿಂದು ಬರುತ್ತಾನೆ. ಇನ್ನೆಂದೂ ಅತ್ತಕಡೆ ಆತ ಸುಳಿಯುವುದಿಲ್ಲ. ಗಂಡಸರ ಕಚ್ಚೆಹರಕುತನವನ್ನು ಬಡಿದು ಎಚ್ಚರಿಸುವ ಫಾತಿಬಿಯಂತವರನ್ನು ಆಚುಮ್ಮಳಿಗೆ ಪರ್ಯಾಯವಾಗಿ ತರುತ್ತಾರೆ. ಗಂಡಿನ ಕ್ರೌರ್ಯಕ್ಕೆ ಒಳಗಾದ ಆಚುಮ್ಮಳಿಗೆ ಆಶ್ರಯಕೊಡುವ ಕಂಜಮ್ಮಳಂತಹ ಹೆಣ್ಣುಗಳು ಬಡತನದ ನೆಲೆಯಲ್ಲೇ ತಮ್ಮಿಂದಾದ ಮಾನಸಿಕ ಸಾಂತ್ವನ ನೀಡುವುದನ್ನು ಕಂಡಿರಿಸಿದ್ದಾನೆ.

ಮತ್ತೊಂದು ರೀತಿಯ ಶೋಷಣೆ ಅನುಭವಿಸುವವಳು ಅವಿವಾಹಿತ ಹುಡುಗಿ ಜುಲೇಕ. ಯಜಮಾನಿಕೆಯ ಸೊಕ್ಕಿನೆದುರು ಹೆಣ್ಣಿನ ಅಂತಸ್ತು ಗೌಣವಾಗುತ್ತದೆ. ಹೆದರಿಸಿ, ನಂಬಿಸಿ ಅಥವಾ ಇನ್ನಾವುದೇ ಆಸೆ ತೋರಿಸಿ ಹೆಣ್ಣಿನ ದೇಹವನ್ನು ಕಬಳಿಸುವ ಸಂಚು ಗಂಡಿನದು. ಇಂಥ ಸಂಚಿಗೆ ಬಲಿಯಾದವಳು ಕೆಲಸದ ಹುಡುಗಿ ಜುಲೇಕ. ಹರೆಯದ ತನ್ನ ಚೆಲ್ಲುತನದಿಂದ ಮನೆಯ ಯಜಮಾನನ ಕಾಮತೃಷೆಗೆ ಒಳಗಾದವಳು. ಇದನ್ನು ಕಂಡ ಸಾಂತ್ವಾನ ಹೇಳುವ ನೆಪದಲ್ಲಿ ಕೆಲಸದಾಳು ಮುಮ್ಮೂಟಿ ಆಕೆಯನ್ನು ದೈಹಿಕವಾಗಿ ಬಳಸಿಕೊಳ್ಳುತ್ತಾನೆ. ಮುಂದಿನ ಪರಿಣಾಮಗಳ ಸಂಕೀರ್ಣತೆಯನ್ನು ಕಾದಂಬರಿ ವಸ್ತುನಿಷ್ಠವಾಗಿ ಕಟ್ಟಿಕೊಡುತ್ತದೆ.

ಇಲ್ಲಿ ಆಚುಮ್ಮಳ ಸಮಸ್ಯೆ ಅವಳಿಗೆ ಮೀಸಲಾದರೆ, ಜುಲೇಕಳ ಸಮಸ್ಯೆ ಕೌಟುಂಬಿಕ ಆವರಣದಿಂದ, ದಾಂಪತ್ಯದ ನೆಲೆಗೆ ಪ್ರವೇಶ ಮಾಡಿ, ಸಮಸ್ಯೆಯ 'ಸುಳಿ' ವಿಸ್ತೃತಗೊಳ್ಳುವುದನ್ನು ಕಾಣಬಹುದು. ಇಲ್ಲಿನ ಗಂಡುಗಳು ತಮ್ಮ ಆಶ್ರಿತ ಅಸಹಾಯಕ ಹೆಣ್ಣುಗಳಿಗೆ ಮೋಸಮಾಡುವುದಲ್ಲದೆ, ತಮ್ಮನ್ನು ನಂಬಿದ್ದ ಹೆಂಡತಿಗೂ ಮೋಸ ಮಾಡುತ್ತಾರೆ. ಅಲ್ಲದೆ ಅವರನ್ನು ನಾನಾ ರೀತಿಯ ಇಕ್ಕಟ್ಟಿಗೆ ಗುರಿಮಾಡುತ್ತಾರೆ. ಸಾರಾ ಅವರು ಸಾಮಾಜಿಕ ಸಂದರ್ಭದಲ್ಲಿ ಸಮಸ್ಯೆಗಳ ಸಂಕೀರ್ಣ ಸ್ವರೂಪವನ್ನು ಇಲ್ಲಿ ತೆರೆದಿಟ್ಟಿದ್ದಾರೆ.

ಜಲೀಲ ಮತ್ತು ಜುಲೇಕಳ ಅನೈತಿಕ ಸಂಬಂಧದಿಂದ ಆಕೆ ಗರ್ಭಿಣಿಯಾದಾಗ ಮನೆಯ ಮರ್ಯಾದೆಗಾಗಿ ಮತ್ತೊಬ್ಬರ ಬದುಕಿಗೆ ಕಿಚ್ಚಿಡುವ ಸಂದರ್ಭ ನಿರ್ಮಾಣವಾಗುತ್ತದೆ. ಗಂಡನ ತಪ್ಪಿನಿಂದ ಜೊಹರಾ ಹೆತ್ತವರ ಮುಂದೆ ಮಾನಸಿಕ ಅವಮಾನಕ್ಕೆ ಗುರಿಯಾಗುತ್ತಾಳೆ. ಮನೆತನದ ಮರ್ಯಾದೆಗಾಗಿ ತಮ್ಮ ಅಳಿಯನ ಅವಾಂತರದಿಂದ ಆದ ಅನಾಹುತವನ್ನು ಇನ್ನೊಬ್ಬರ ತಲೆಗೆ ಕಟ್ಟಲು ಹೋಗಿ ಅವಮಾನಕ್ಕೆ ಒಳಗಾಗುವ ಆಮೀನಮ್ಮ, ಯಾರದೋ ತಪ್ಪಿಗಾಗಿ ಮಗನನ್ನೇ ದೂರ ಮಾಡಿಕೊಂಡ ಉಮ್ಮಾಲಿ, ಹತ್ತು ವರ್ಷಗಳ ಕಾಲ ಗಂಡನಿಂದ ಯಾವುದೇ ಸುದ್ದಿ ಇಲ್ಲದೆ ಜಂಜಾಟದಲ್ಲೇ ಬದುಕಿದ ರುಖ್ಯಾಬಿ, ಈ ಕಾರಣಗಳಿಂದಾಗಿ ನಿರಪರಾಧಿ ಮಕ್ಕಳು ಅನುಭವಿಸಿದ ಯಾತನೆ, ಕಳೆದುಕೊಂಡ ಪ್ರೀತಿ, ಸಂತೋಷಗಳಿಗೆ ಯಾರು ಹೊಣೆಗಾರರು? ಗಂಡಸರ ಲೈಂಗಿಕ ದೌರ್ಬಲ್ಯಗಳು ಎಷ್ಟು ಜನ ಹೆಂಗಸರು ಮತ್ತು ಮಕ್ಕಳ ನೆಮ್ಮದಿಯನ್ನು ಆಹುತಿ ತೆಗೆದುಕೊಂಡಿದೆ ಎಂಬುದನ್ನು ಈ ಹಿನ್ನೆಲೆಯಲ್ಲಿ ಗ್ರಹಿಸಬಹುದಾಗಿದೆ.

ಅನಾಹುತಕ್ಕೆ ಕಾರಣವಾದ ಗಂಡು ಪರದೆ ಹಿಂದೆ ಉಳಿದು ಅದರಿಂದುಂಟಾದ ಪರಿಣಾಮಗಳ

ಫಲಿತಗಳನ್ನು ಅನುಭವಿಸುವವಳು ಹೆಣ್ಣು. ಇಷ್ಟೆಲ್ಲಾ ಸಮಸ್ಯೆ ತನ್ನಿಂದ ನಿರ್ಮಾಣವಾಗಿದ್ದರೂ ಏನೂ ನಡೆದೇ ಇಲ್ಲ ಎಂಬಂತೆ ಎದೆ ಎತ್ತಿ ಸಹಜವಾಗಿ ಗಂಡು ಬದುಕಿದರೆ, ಹೆಣ್ಣು ತನ್ನೊಳಗೆ ಸುಳಿಯಲ್ಲಿ ಸಿಕ್ಕಂತೆ ಒದ್ದಾಡುವುದಕ್ಕೆ ಕಾರಣವಾದ ವ್ಯವಸ್ಥೆಯೆಡೆಗೆ ಕಣ್ಣು ಹೊರಳಿಸಬೇಕಾಗುತ್ತದೆ. ದೈಹಿಕ ಶೋಷಣೆಗಿಂತ ಮಾನಸಿಕ ಶೋಷಣೆಯೇ ವ್ಯಾಪಿಸಿರುವುದೆಂಬುದನ್ನು ವಿವರಣಾತ್ಮಕವಾಗಿ ಕಾದಂಬರಿ ನಿರೂಪಿಸಿದೆ.

ಶೋಷಣೆಯ ಮತ್ತೊಂದು ಆಯಾಮವನ್ನು 'ಪಂಜರ' ಕಾದಂಬರಿಯಲ್ಲಿ ಕಾಣಬಹುದು. ಅವಿವಾಹಿತ ತಾಯಿ ತನ್ನ ಮಗುವಿನೊಂದಿಗೆ ನಮ್ಮ ಸಮಾಜದಲ್ಲಿ ಬದುಕಿ ಬಾಳಬೇಕೆಂದಾಗ ಆಕೆ ಎದುರಿಸಬೇಕಾದ ಸಮಸ್ಯೆಗಳು ನೂರಾರು. ತನ್ನ ಮಗು ಕಣ್ಣೆದುರಿಗೆ ಇದ್ದರೂ ಅದು ನನ್ನ ಮಗುವೆಂದು ಹೇಳಿಕೊಳ್ಳಲಾಗದಂತಹ ಪರಿಸ್ಥಿತಿಯಲ್ಲಿ ಹೆಣ್ಣು ಅನುಭವಿಸುವ ಮಾನಸಿಕ ತಳಮಳ-ತಾಕಲಾಟಗಳು ಆಕೆಯನ್ನು ಜೀವಂತವಾಗಿ ದಹಿಸುವುದನ್ನು ವಿಶ್ಲೇಷಿಸಿದೆ.

ತನ್ನ ನಯವಂಚನೆಯ ನಡವಳಿಕೆಯ ಮೂಲಕ ಹೆಣ್ಣನ್ನು ಮರಳುಮಾಡಿ ಉಪಾಯವಾಗಿ ಆಕೆಯೊಡನೆ ದೈಹಿಕ ಸಂಬಂಧ ಬೆಳೆಸಿ, ನಂತರ ದೂರ ಸರಿಯುವ ತಂತ್ರ ಹೂಡಿದ ವಸಂತಕುಮಾರ ಯಾವುದೇ ರೀತಿಯ ಕೀಳರಿಮೆ ಇಲ್ಲದೆ ಬೇರೊಂದು ಮದುವೆಯಾಗಿ ಸಮಾಜದಲ್ಲಿ ತಲೆ ಎತ್ತಿ ಬದುಕುವುದನ್ನು ಕಾದಂಬರಿಯಲ್ಲಿ ಕಾಣುತ್ತೇವೆ. ಆದರೆ ಗಂಡಿನ ವಂಚನೆಗೆ ಒಳಗಾದ ಸುನಯನ ಮಾನಸಿಕವಾಗಿ ಆತಂಕದ ಕ್ಷಣಗಳನ್ನು ಎದುರಿಸುತ್ತಲೇ ಕೌಟುಂಬಿಕ, ಸಾಮಾಜಿಕ ನೆಲೆಯಲ್ಲಿ ಅಪರಾಧಿ ಪ್ರಜ್ಞೆಯಿಂದ ನರಳುವುದು, ವಿವಾಹ ಪೂರ್ವದಲ್ಲಿ ಹುಟ್ಟಿದ ತನ್ನ ಮಗುವನ್ನು ತನ್ನದೆಂದು ಹೇಳಲು ಆಗದ ಸಾಮಾಜಿಕ ಪರಿಸ್ಥಿತಿಗಳಿಂದಾಗಿ ಅನಾಥಾಲಯ ಸೇರುತ್ತಾಳೆ. ಇದೇ ಕಾರಣದಿಂದಾಗಿ ಇಡೀ ಕುಟಂಬ ನಾನಾ ರೀತಿಯ ಸಂಕಷ್ಟಕ್ಕೆ ಒಳಗಾಗುವುದನ್ನು ಕಾದಂಬರಿಯಲ್ಲಿ ಕಟ್ಟಿಕೊಟ್ಟಿದ್ದಾರೆ.

ಒಂದು ಹೆಣ್ಣಿನ ಬದುಕಿನಲ್ಲಿ ಪ್ರವೇಶ ಮಾಡುವ ಮೂರು ಜನ ಗಂಡುಗಳ ವಿಭಿನ್ನ ವ್ಯಕ್ತಿತ್ವ ಇಲ್ಲಿ ಅನಾವರಣಗೊಂಡಿದೆ. ಹೆಣ್ಣಿನ ನಂಬಿಕೆಯ ಗುಣವನ್ನೇ ಅಸ್ತ್ರವನ್ನಾಗಿ ದುರುಪಯೋಗ ಪಡಿಸಿಕೊಳ್ಳುವ ವಸಂತಕುಮಾರ ತನಗೆ ಮಕ್ಕಳಾಗಲಿಲ್ಲ ಎಂಬ ಕಾರಣಕ್ಕೆ ಸುನಯನಳ ಬದುಕಿನ ಸಂದರ್ಭಗಳನ್ನು ತನ್ನ ಸ್ವಾರ್ಥಕ್ಕೆ ಬಳಸಿಕೊಳ್ಳುವ ತಂತ್ರ ಹೂಡುತ್ತಾನೆ. ಕೇವಲ ಬಾಯಿಮಾತಿನ ಮೂಲಕ ಔದಾರ್ಯವನ್ನು ತೋರಿ ಬದುಕಿನ ಸಂದರ್ಭದಲ್ಲಿ ಹೆಣ್ಣಿನ ಶೀಲಕ್ಕೆ ಜೋತು ಬೀಳುವ ರಾಜೀವ, ನಯ, ವಿನಯ, ಸೌಂದರ್ಯಗಳ ಆಗರ ಹೆಣ್ಣಾಗಬೇಕೆಂದು ಆಶಿಸುವ ಪ್ರಕಾಶ ಇವರೆಲ್ಲರೂ ತಮ್ಮದೇ ಆದ ರೀತಿಯಲ್ಲಿ ಆಲೋಚಿಸುವಂತವರು. ಹೆಣ್ಣಿನ ಬಿಡುಗಡೆಯ ಆಯಾಮವಾದ ವಿವಾಹ ಮತ್ತು ಕುಟುಂಬ ಅವಳಿಗೆ ಬಂಧನದ 'ಪಂಜರ'ವೂ ಆಗಿರುವುದನ್ನು ಕಾದಂಬರಿ ಬಿಂಬಿಸಿದೆ.

ವಸಂತನಿಂದ ತನಗಾದ ಅನ್ಯಾಯವನ್ನು ನಾಶಮಾಡಲು ಕೊನೆಗೆ ಪ್ರಕಾಶನೇ ಬೆಂಬಲವಾಗಿ ನಿಲ್ಲುವುದರ ಮೂಲಕ ಕಾದಂಬರಿ ಪ್ರಗತಿದಾಯಕ ಆಶಯವನ್ನು ಬಿಂಬಿಸಿದೆ. ಗಂಡು-ಹೆಣ್ಣು ವೈರತ್ವಕ್ಕಿಂತ ಪರಸ್ಪರ ಅರ್ಥೈಸಿಕೊಂಡಾಗ ಅಂಥ ಹೃದಯವಂತಿಕೆಯನ್ನು ಗಂಡು ಮೆರೆದಾಗ ಸಾಮಾಜಿಕ ಸ್ವಾಸ್ಥ್ಯ ಸಾಧ್ಯ ಎಂಬುದು ತಿಳಿಯುತ್ತದೆ. ಅನಗತ್ಯವಾಗಿ ಪುರುಷದ್ವೇಷಮಾಡುವ, ಸಮಾನತೆಯನ್ನು ಪ್ರಧಾನವಾಗಿಸಿಕೊಂಡು ಸಾಮಾಜಿಕ ಸಮತೋಲನವನ್ನು ಅಳಿಸಿಹಾಕುವ ಆಸಕ್ತಿಗಿಂತ ಅಸಮಾನತೆ, ಶೋಷಣೆ, ವಂಚನೆಗಳಿಗೆ

ಬಲಿಯಾಗದಂತೆ ಎಚ್ಚರಗೊಳ್ಳಬೇಕಾದ ಸುಳಿವು ಕಾಣುತ್ತದೆ.

ವಸಂತಕುಮಾರನಂಥ ಅವಕಾಶವಾದಿ ವಂಚಕತನದ ಗಂಡಸು, ಕೇವಲ ಸಾಂತ್ವನದ ತೋರಿಕೆಯ ಮಾತುಗಳ ಮೂಲಕ ಜಾರಿಕೊಳ್ಳುವ ರಾಜೀವನಂಥ ಗಂಡಸರ ನಡುವೆಯೇ ವಸ್ತುಸ್ಥಿತಿಯನ್ನು ಅರ್ಥಮಾಡಿಕೊಂಡು ಒಂದು ಹಂತಕ್ಕಾದರೂ ಸುನಯನಳಿಗೆ ಒತ್ತಾಸೆಯಾಗಿ ನಿಲ್ಲುವ ಪ್ರಕಾಶನಂಥ ಗಂಡಸರು ಇದೇ ವ್ಯವಸ್ಥೆಯಲ್ಲಿ ಇದ್ದಾರೆ ಎಂಬುದು ಗಮನಾರ್ಹ.

ವ್ಯವಸ್ಥೆಯ ನಿರ್ಬಂಧಗಳು ಹೆಣ್ಣಿನ ಇಚ್ಛೆಯನ್ನು ಹೇಗೆ ಬಂಧಿಸಿವೆ ಎಂಬುದನ್ನು ಕಾದಂಬರಿ ಎಳೆಎಳೆಯಾಗಿ ನಿರೂಪಿಸಿದೆ. ಹೆಣ್ಣನ್ನು ಕೇಂದ್ರ ಬಿಂದು ಮಾಡಿಕೊಂಡು ಅವಳ ಆಸೆ, ಆಕಾಂಕ್ಷೆ, ಶಕ್ತಿ ಸಾಮರ್ಥ್ಯ, ಮಾತೃವಾತ್ಸಲ್ಯಗಳನ್ನು ತೆರೆದು ತೋರಿಸಿದ್ದಾರೆ. ಹೆಣ್ಣಿನ ಮೇಲೆ ಗಂಡಿನಿಂದ ಹಾಗೂ ಹೆಣ್ಣಿನಿಂದಲೂ ಅವ್ಯಕ್ತವಾಗಿ ಆಗುವ ದೌರ್ಜನ್ಯಗಳನ್ನು ಶೋಧಿಸಿ, ಆ ಮೂಲಕ ವ್ಯವಸ್ಥೆಯ ಹುಳುಕುಗಳನ್ನು ಬಿಡಿಸಿಟ್ಟಿದ್ದಾರೆ. ಹೆಣ್ಣನ್ನು ಸರಿಯಾದ ದೃಷ್ಟಿಯಿಂದ ನೋಡಬೇಕು, ತೆರೆದ ಹೃದಯದಿಂದ ಅರಿಯಬೇಕೆಂಬ ಆಸೆ ಸಾರಾ ಅವರದು. ಹಾಗಾಗಿ ದಾಂಪತ್ಯ, ಮತ್ತಿತರ ಸಮಸ್ಯೆಗಳನ್ನು ಹೆಣ್ಣಿನ ಬದುಕಿನಿಂದಲೇ ನೋಡುವ ಪ್ರಯತ್ನವಿದೆ. ಮಹಿಳೆಯ ಪರವಾದ ಸಹಾನುಭೂತಿ ಇದೆ. ಪುರುಷ ಪ್ರಧಾನ ಸಮಾಜದ ನೀತಿ ನಿಯಮಗಳ ಪ್ರಾಬಲ್ಯದಲ್ಲಿ ಹೆಣ್ಣು ಯಾವ ವೈಯಕ್ತಿಕ ಸ್ವಾತಂತ್ರ್ಯವೂ ಇಲ್ಲದೆ, ಗಂಡಿನ ಪಾಲಿಗೆ ದಕ್ಷಿಣೆಯಾಗಿ ಕೊಡುವ ವಸ್ತುವಾಗಿದ್ದಾಳೆ. ಎಲ್ಲಾ ಜಾತಿ, ಧರ್ಮ, ಸಮುದಾಯಗಳಲ್ಲೂ ಹೆಣ್ಣು ನಿರ್ಲಕ್ಷಕ್ಕೆ ಒಳಗಾಗಿದ್ದಾಳೆ ಎಂಬುದನ್ನು ಸಾರಾ ಅವರ ಸಾಹಿತ್ಯ ಪ್ರತಿಬಿಂಬಿಸಿದೆ. ವಾಸ್ತವತೆಯನ್ನೇ ಪ್ರಧಾನವಾಗಿಸಿಕೊಂಡು ಸಾಹಿತ್ಯ ಬರೆಯಹೊರಟ ಲೇಖಕಿ ಮುಸ್ಲಿಂ ಮತ್ತು ಇತರ ಸಮುದಾಯದ ಹೆಣ್ಣುಗಳು ಅನುಭವಿಸುವ ನೋವಿನ ಬಗೆಗೆ ಅರಿವು ಮೂಡಿಸುತ್ತಾರೆ. ಓದುಗರನ್ನು ವಿವೇಚನೆಯೆಡೆಗೆ ಕರೆದೊಯ್ಯುತ್ತಾರೆ.

ಅಧ್ಯಾಯ-೪

# ಕಥೆಗಳಲ್ಲಿ ಚಿತ್ರಣಗೊಂಡಿರುವ ಧಾರ್ಮಿಕ ಮತ್ತು ಸಾಮಾಜಿಕ ಸಮಸ್ಯೆಗಳು

'ತಲಾಖ್', 'ಬಹುಪತ್ನಿತ್ವ', 'ಒಜ್ಜತ್'ನಂಥ ಧರ್ಮ ಸಂಬಂಧಿಯಾದ ಸಮಸ್ಯೆಗಳನ್ನು ಕುರಿತು 'ಪಯಣ ಮತ್ತು ಇತರ ಕಥೆಗಳು' ಸಂಕಲನದ 'ಉರಿಬಿಸಿಲು', 'ಅರ್ಧರಾತ್ರಿಯಲ್ಲಿ ಹುಟ್ಟಿದ ಕೂಸು' ಕಥಾಸಂಕಲನದ 'ಗೋಡೆ', 'ನಿಯಮ ನಿಯಮಗಳ ನಡುವೆ', ಮುಂತಾದ ಕತೆಗಳಲ್ಲಿ ಧಾರ್ಮಿಕ ಮತ್ತು ಸಾಮಾಜಿಕ ಸಮಸ್ಯೆಗಳು ಪಡೆದುಕೊಂಡ ಸ್ವರೂಪವನ್ನು ತಿಳಿಯಬಹುದಾಗಿದೆ.

'ಧ್ವನಿಯಿಲ್ಲದ ನೋವುಗಳು' ಕತೆಯ ಜರೀನಾ ಹುಟ್ಟು ಸೋಮಾರಿಯಾದ ಮುಸ್ತಾಫನ ಕೈಹಿಡಿದ ಮೇಲೆ ಅತ್ತೆ ಮಾವಂದಿರಿಗೆ ಭಾರವಾಗಿ ತನ್ನ ಉಡಾಫೆಯ ಗಂಡನ್ನು ಕಟ್ಟಿಕೊಂಡು ತವರು ಮನೆ ಸೇರುತ್ತಾಳೆ. ಇಸ್ಲಾಂ ಧರ್ಮವನ್ನು ಮುಸ್ಲಿಂ ಪುರುಷ ಪ್ರಧಾನ ಸಮಾಜ ತನ್ನ ಸ್ವಾರ್ಥಕ್ಕೆ ಬಳಸಿಕೊಂಡಿರುವುದನ್ನು ಈ ಕತೆಯಲ್ಲಿ ಕಾಣುತ್ತೇವೆ. ಯಾವುದೇ ಅರ್ಹತೆ ಇಲ್ಲದಿದ್ದರೂ 'ಗಂಡು' ಎಂಬ ಕಾರಣಕ್ಕೆ ಮದುವೆಯಾಗುವ ಹಕ್ಕನ್ನು ಪಡೆಯುವ ಮುಸ್ತಾಫ ಜರೀನಾಳನ್ನು ವಿವಾಹವಾಗುತ್ತಾನೆ ಮುಸ್ತಾಪ ತನ್ನ ಉಡಾಫೆ ಹಾಗೂ ಸೋಮಾರಿತನದಿಂದ ಹೆತ್ತವರಿಂದಲೂ ತಿರಸ್ಕೃತನಾಗುತ್ತಾನೆ. ನಂತರ ಹೆಂಡತಿಯನ್ನು ಕರೆದುಕೊಂಡು ಆಕೆಯ ತವರಿಗೆ ಬರುತ್ತಾನೆ. ಮುಸ್ತಾಫ ಮಾವನ ಮನೆಯಲ್ಲೇ ಗಟ್ಟಿಯಾಗಿ ತಳವೂರುವ ಲಕ್ಷಣ ಕಂಡಾಗ ಇದರ ಸೂಕ್ಷ್ಮತೆ ಅರಿತ ಜರೀನಾಳ ಅಣ್ಣ ಮಗರಿಬ್ ಮೌಲದಿಯವರು ಅವನನ್ನು ಹಣಗಳಿಸಲು ಕೊಲ್ಲಿ ರಾಷ್ಟ್ರಕ್ಕೆ ಕಳಿಸಿಕೊಡುತ್ತಾರೆ.

ಆ ನಂತರದಲ್ಲಿ ಆತ ಬದಲಾವಣೆ ಹೊಂದಿ, ತಮಗೆ ನೆಲೆಯೊದಗಿಸಿದ ಕುಟುಂಬದ ಬಗ್ಗೆ ಕಾಳಜಿ ತೋರುತ್ತಾನೆ. ಆದರೆ ಇದು ಸ್ವಲ್ಪಕಾಲ ಮಾತ್ರ 'ದಡಸೇರಿದ ಮೇಲೆ ಅಂಬಿಗನ ಹಂಗೇಕೆ': ಎಂಬಂತೆ ಕ್ರಮೇಣ ಬದಲಾವಣೆ ಹೊಂದಿ, ಮನೆಯವರ ನಂಬಿಕೆಯನ್ನು ಸುಳ್ಳು ಮಾಡುತ್ತಾನೆ. ತನ್ನ ಬದುಕಿನ ಬಗೆಗೆ ಹೊಸ ಕನಸುಗಳನ್ನು ಕಟ್ಟುತ್ತಿದ್ದ ಜರಿನಾಳಿಗೆ ವಿನಾಕಾರಣ ತಲಾಖ್ ಕಳುಹಿಸುತ್ತಾನೆ. ಇದನ್ನು ತಿಳಿದ ಜರೀನಾಳಿಗೆ ಆಘಾತವಾಗುತ್ತದೆ. ಆಲೋಚನಾ ಶಕ್ತಿ ಇರುವ ಆಕೆ ಧರ್ಮ ಗ್ರಂಥದ ಬೋಧನೆಯನ್ನೇ ದುರುಪಯೋಗ ಪಡಿಸಿಕೊಂಡ ಮುಸ್ತಾಫನ ವಿಚಾರದಲ್ಲಿ ಹಾಗೂ ಧರ್ಮದ ವಿಚಾರದಲ್ಲಿ ಅತೀವವಾದ ಆಕ್ರೋಶ ವ್ಯಕ್ತಪಡಿಸುತ್ತಾಳೆ. "ಅಣ್ಣಾ ಒಂದುವರೆ ವರ್ಷಗಳಿಂದ ಒಮ್ಮೆಯೂ ನನ್ನ ಮುಖ ನೋಡದೆ ಕಡಲಾಚೆಗಿದ್ದವರು ನನ್ನ ಯಾವ ತಪ್ಪು ಇಲ್ಲದೆ ನ್ಯಾಯ ವಿಚಾರಣೆಯನ್ನು ಮಾಡದೆ ನನ್ನನ್ನು ಸಮರ್ಥಿಸಿಕೊಳ್ಳಲು ನನಗೆ ಒಂದು ಅವಕಾಶವನ್ನು ಕೊಡದೆ ಒಂದೇ ಬಾರಿ ಈ ರೀತಿ ಮೂರು 'ತಲಾಖ್'ಗಳನ್ನು ಹೇಳಿ ಬಿಡುಗಡೆ ಮಾಡಬಹುದು ಎಂದು ಧರ್ಮಗ್ರಂಥ ಬೋಧಿಸುತ್ತದೆಯೇ?"[೧] ಎಂದು ಪ್ರಶ್ನಿಸುತ್ತಾಳೆ. ಹೀಗೆ ಪುರುಷ ಕೇಂದ್ರಿತ ವ್ಯವಸ್ಥೆಯ ವಿರುದ್ಧ ತನ್ನ ಧ್ವನಿಯನ್ನು ಮೊಳಗಿಸಿದ ಜರೀನಾಳಲ್ಲಿ ಪ್ರತಿಭಟನೆಯ ಸ್ವರೂಪವನ್ನು ಕಾಣಬಹುದಾದರೂ ಇಂಥ ವ್ಯವಸ್ಥೆಯನ್ನು ಮೀರಿ ನಿಲ್ಲುವ ಯಾವುದೇ ಸೂಚನೆಗಳು ಕತೆಗಳಲ್ಲಿ ಸಿಗುವುದಿಲ್ಲ.

ಮಗಳ 'ತಲಾಖ್' ವಿಷಯ ತಿಳಿದಾಗ 'ನನ್ನಳಿಯ ಸತ್ತುಹೋದ' ಎಂಬ ಜರೀನಾಳ ತಾಯಿಯ

ಪ್ರತಿಕ್ರಿಯೆ ಅವಳ ಸಿಟ್ಟನ್ನು ತಿಳಿಸುತ್ತದೆ. ತಮಗಾದ ಅನ್ಯಾಯಕ್ಕೆ ಮಹಿಳೆಯರು ಧ್ವನಿ ತೆಗೆಯುವ ಅವಕಾಶವಿಲ್ಲದಂತೆ ಧರ್ಮದ ಹೆಸರಿನಲ್ಲಿ ಅವರ ಬಾಯಿ ಮುಚ್ಚಿಸಲಾಗುತ್ತಿದೆ. ತಲಾಖ್ ಕೊಡುವಾಗ ಧರ್ಮದ ಪ್ರಕಾರ ಮದುವೆಯಲ್ಲಿ ಪಡೆದ 'ಮೆಹರ್' ನ್ನು ಹಿಂದಿರುಗಿಸಿದರಾಯಿತು. ಹೆಂಡತಿಯ ಬಗೆಗೆ ಗಂಡನಿಗೆ ಇನ್ನಾವುದೇ ಬದ್ಧತೆಯಿಲ್ಲ.

ಯಾವುದೋ ಕಾಲಮಾನದಲ್ಲಿ ಬರೆದ ಧರ್ಮ ಗ್ರಂಥವನ್ನು ತಮಗೆ ಅನುಕೂಲವಾಗುವಂತೆ ವ್ಯಾಖ್ಯಾನಿಸುತ್ತಿರುವ ಪುರುಷವರ್ಗ ಮಹಿಳೆಯರ ಬಾಳನ್ನು ಅಭದ್ರತೆಗೆ ತಳ್ಳುತ್ತಿರುವುದನ್ನು ಕತೆ ಧ್ವನಿಸಿದೆ. ಈ ಕತೆಯಲ್ಲಿ ಇರುವ ಜರೀನಳ ಅಣ್ಣ ಒಬ್ಬ ಮೌಲ್ವಿಯೇ ಆಗಿದ್ದರೂ ತಂಗಿಯನ್ನು ಮುಸ್ತಾಫನಂತಹ ಬೇಜವಬ್ದಾರಿ ಹುಡುಗನಿಗೆ 'ನಿಖಾ' ಮಾಡಿ ಕೈತೊಳೆದುಕೊಂಡು ತನ್ನ ಹೊಣೆಗಾರಿಕೆಯಿಂದ ಹೊರ ಬರುವ ಆತುರದಲ್ಲಿ ಜರೀನಾಳನ್ನು ಬಲಿಪಶುವನ್ನಾಗಿಸುತ್ತಾನೆ. ಧಾರ್ಮಿಕ ವ್ಯವಸ್ಥೆಯ ಪ್ರತಿನಿಧಿಯಂತಿರುವ ಮೌಲ್ವಿಯೇ ವ್ಯವಸ್ಥೆಯ ಕ್ರೌರ್ಯದಲ್ಲಿ ಮೌನಿಯಾಗುವುದು ಅವರ ಅಸಹಾಯಕತೆಯನ್ನು ತೋರಿಸುತ್ತದೆ.

ತನ್ನ ಮಾತಿಗೆ ಎದುರಾಡಿದ ಹೆಂಗಸರನ್ನು ಹೆದರಿಸಲು ಅವರ ಧ್ವನಿಯನ್ನು ಹತ್ತಿಕ್ಕಲು 'ತಲಾಖ್' ಮಂತ್ರವನ್ನು ಪ್ರಯೋಗಿಸುತ್ತಾರೆ. ಸಾರಾ ಅವರ 'ಅಂಕುರ' ಕತೆ ಇದೇ ಹಿನ್ನೆಲೆಯನ್ನು ಹೊದಿದ್ದು, ತನಗೆ ಎದುರಾಡಿದ ನಾದಿನಿ ಶಕೀಲಳಿಗೆ ಅವಳ ಭಾವ ಕರೀಂ ತಮ್ಮನಿಂದ 'ತಲಾಖ್' ಕೊಡಿಸುತ್ತಾನೆ. ಅವಳ ವಿರುದ್ಧ ಸುಳ್ಳು ಹೇಳಿ ತಮ್ಮನ ಮನಸ್ಸನ್ನು ಕೆಡಿಸುತ್ತಾನೆ. ದುಬಾಯಿಯಲ್ಲಿರುವ ಗಂಡ ತನ್ನ ಖರ್ಚಿಗಾಗಿ ತನಗೆ ಹಣ ಕಳುಹಿಸುವಂತೆ ಕೇಳಿದ್ದೇ ಆಕೆ ಮಾಡಿದ ದೊಡ್ಡ ಅಪರಾಧ. ಹೆಂಗಸರನ್ನು ಭದ್ರವಾಗಿ ಮುಷ್ಠಿಯಲ್ಲಿ ಹಿಡಿದಿಡಲು ಅವಳ ಕೈಗೆ ಒಂದು ಬಿಡಿಗಾಸೂ ಸಿಗದಂತೆ ಮಾಡುವುದು ಒಂದು ಆಯುಧ ಎಂಬುದನ್ನು ಬಲ್ಲ ಕರೀಂ ಅಂತೆಯೇ ಮಾಡುತ್ತಾನೆ. ಶಕೀಲಳ ಬೇಡಿಕೆ ಅವಳ ಬದುಕನ್ನೇ ಅಸ್ತವ್ಯಸ್ತ ಗೊಳಿಸುತ್ತದೆ. ಆರ್ಥಿಕ ಧಾರ್ಮಿಕ, ಸಾಮಾಜಿಕ ದಿಗ್ಬಂಧನಗಳು ಹೆಣ್ಣು ಜೀವಗಳನ್ನು ಹೇಗೆ ಅಣು ಅಣುವಾಗಿ ಹಿಂಸಿಸಿ ಕೊಲ್ಲುತ್ತದೆ ಎಂಬುದನ್ನು ಶಕೀಲಳ ಬದುಕಿನ ಮೂಲಕ ಲೇಖಕಿ ಪ್ರತಿಬಿಂಬಿಸಿದ್ದಾರೆ. ಕೊನೆಯಲ್ಲಿ ಶಕೀಲ 'ಧರ್ಮ ಎಂದರೇನು?' ಎಂದು ಪ್ರಶ್ನಿಸುತ್ತಾಳಾದರೂ, ಪುರುಷರ ಸ್ವಾರ್ಥದ ಮುಂದೆ ಅವಳ ಧ್ವನಿ ಕಮರಿ ಹೋಗುವುದನ್ನು ಕತೆಯಲ್ಲಿ ಕಾಣುತ್ತೇವೆ.

ತನಗೆ ಸೇರಬೇಕಾದ ವರದಕ್ಷಿಣೆಯ ಬಾಬ್ತಿಗಾಗಿ ಹೆಂಡತಿಯನ್ನು ತವರಿನಿಂದ ದೂರ ಇಟ್ಟ ಸಲೀಂ, ಮಾವನ ವಿಚಾರದಲ್ಲಿ ಕೋಪಗೊಂಡಿದ್ದರೂ ಹೆಂಡತಿಯ ಬಗ್ಗೆ ಆಸ್ಥೆ ಹೊಂದಿದವ. ಅದಕ್ಕಾಗಿಯೇ ಕೊಲ್ಲಿ ರಾಷ್ಟಕ್ಕೆ ಹೋದಾಗ ಮಗಳ ಹಾಗೂ ಹೆಂಡತಿಯ ಖರ್ಚಿಗೆ ಹಣವನ್ನು ಕಳುಹಿಸುವ ದೊಡ್ಡತನವನ್ನು ತೋರುತ್ತಾನೆ. ಆದರೆ ತನ್ನ ಹೆಂಡತಿಯ ನಡತೆಯನ್ನು ಕುರಿತು ಸಂಶಯ ವ್ಯಕ್ತಪಡಿಸಿ ಅಣ್ಣ ಕರೀಂ ಪತ್ರ ಬರೆದಾಗ, ಅದನ್ನು ನೇರವಾಗಿ ಒಪ್ಪಿಕೊಳ್ಳುವುದು, ನಂತರದಲ್ಲಿ ಅಣ್ಣನಿಗೆ ಹಣವನ್ನು ಕಳುಹಿಸಿ ಹೆಂಡತಿಗೆ 'ತಲಾಖ್' ಕೊಡುವದು ಗಂಡಸಿನ ಸ್ವಾರ್ಥ, ಸಣ್ಣತನ ಮತ್ತು ಆತುರ ಬುದ್ಧಿಯನ್ನು ತೋರುತ್ತದೆ. 'ಧ್ವನಿಯಿಲ್ಲದ ನೋವುಗಳು' ಕತೆಯಲ್ಲಿನ ಮುಸ್ತಾಫ ತಾನೇ ನೇರವಾಗಿ 'ತಲಾಖ್' ಕಳುಹಿಸಿದರೆ ಇಲ್ಲಿಯ ಸಲೀಂನು ಅಣ್ಣನ ಪತ್ರದಿಂದ ಪ್ರಚೋದಿತನಾಗಿ 'ತಲಾಖ್' ಕಳುಹಿಸುತ್ತಾನೆ. ಇಲ್ಲಿನ ನಿರುಪ ದ್ರವಿಗಳಾದ ಹೆಣ್ಣುಗಳು ಗಂಡಿನ ಉಪದ್ರವಗಳನ್ನು ಮೌನವಾಗಿ ಸಹಿಸಿ ಕೊಂಡಿರುವುದು ಧ್ವನಿಯಿಲ್ಲದೆ ಅನುಭವಿಸಿದ ನೋವುಗಳೇ ಆಗಿವೆ.

'ಅರ್ಧರಾತ್ರಿಯಲ್ಲಿ ಹುಟ್ಟಿದ ಕೂಸು' ಕಥಾಸಂಕಲನದ 'ನಿಯಮ ನಿಯಮಗಳ ನಡುವೆ' ಕತೆ 'ತಲಾಖ್' ಸಂಬಂಧಿಯಾದ ಕತೆಯಾದರೆ ಅದರ ಮುಂದುವರೆದ ಸ್ವರೂಪವನ್ನು ಬಯಲಿಗೆಳೆಯುತ್ತದೆ. ಒಂದು ಸಲ 'ತಲಾಖ್'ಗೆ ಬಲಿಯಾದ ಹೆಣ್ಣನ್ನು ಅವಳ ಗಂಡ ತಿರುಗಿ ಮದುವೆಯಾಗಿ ಬಯಸಿದರೆ ಒಂದು ದಿನದ ಮಟ್ಟಿಗಾದರೂ ಆಕೆ ಬೇರೊಬ್ಬ ಗಂಡಸಿನೊಡನೆ ಮದುವೆಯಾಗಿ ನಂತರ ಆ ಗಂಡನಿಂದ ತಲಾಖ್ ಪಡೆಯಬೇಕಾಗುತ್ತದೆ ಇದನ್ನು 'ಒಜ್ಜತ್' ಎಂದು ಕರೆಯಲಾಗುತ್ತದೆ. ಇಸ್ಲಾಂ ಧರ್ಮದಲ್ಲಿ ಗಂಡಸಿಗೆ ಯಾವುದೇ ಇಂತಹ ನಿರ್ಬಂಧವಿರುವುದಿಲ್ಲ. ಮುಸ್ಲಿಂ ಮಹಿಳೆಯರಿಗೆ 'ತಲಾಖ್' ಪಡೆಯುವ ಹಕ್ಕಿಲ್ಲ, ಗಂಡಸಿಗೆ ಮಾತ್ರ ಅದನ್ನು ಕೊಡುವ ಹಕ್ಕಿದೆ. ಒಂದೊಂದು ತಿಂಗಳ ಅಂತರದಲ್ಲಿ ತಲಾಖ್ ಹೇಳಬೇಕೆನ್ನುವ ನಿಯಮವಿರುವುದಾದರೂ ಒಂದೇ ಸಲ ಮೂರು ಬಾರಿ 'ತಲಾಖ್' ಹೇಳಿ ವಿಚ್ಛೇದನ ನೀಡುವುದು ನಡೆದು ಬಂದ ಪದ್ಧತಿ.

ಇಲ್ಲಿ ಮುಖ್ಯವಾಗಿ ಗಮನಿಸಬೇಕಾದುದು ಹೆಂಗಸನ್ನೂ ಬಿಡುವುದು ಗಂಡಸಾದರೂ ಅದರ ಪರಿಣಾಮವಾಗಿ ಎಲ್ಲಾ ನೋವು, ಅವಮಾನ, ಹಿಂಸೆಗಳನ್ನು ಅನುಭವಿಸುವವಳು ಮಾತ್ರ ಹೆಣ್ಣು. ಇಂತಹ ಸ್ಥಿತಿಯನ್ನು ಅನುಭವಿಸುವವಳು 'ನಿಯಮ ನಿಯಮಗಳ ನಡುವೆ' ಕತೆಯ ಜೊಹರಾ ಇದಕ್ಕೊಂದು ನಿದರ್ಶನ.

ಮದುವೆಯಾದ ಹೆಣ್ಣಿಗೆ ಸ್ವಂತದ್ದು ಎಂಬುದು ಯಾವುದೂ ಇಲ್ಲ ಇರಬೇಕಾಗಿಲ್ಲ. ಒಂದು ರೀತಿಯಲ್ಲಿ ಗಂಡನನ್ನು ಸ್ವಂತಕ್ಕೆ ಸಂಬಂಧಿಸಿದವನು ಎಂದು ಹೇಳುವ ಹಕ್ಕು ಮಹಿಳೆಯರಿಗೆ ಇಲ್ಲ. ಆದರೆ ಹೆಂಡತಿ ಮಾತ್ರ ಸಂಪೂರ್ಣವಾಗಿ ಗಂಡನಿಗೆ ಸಂಬಂಧ ಪಟ್ಟವಳಾಗುತ್ತಾಳೆ. ತಾಯಿಯ ಪರಿಶ್ರಮದಿಂದ ಮಾಡಿಸಿದ ಕಿವಿಯ ಆಭರಣಗಳನ್ನು ಗಂಡ ಕಾದರ್ ಕೇಳಿದಾಗ ಜೊಹರಾ ಗಂಡನಿಗೆ ಒಡವೆ ಕೊಡಲು ನಿರಾಕರಿಸುತ್ತಾಳೆ ಇದೇ ಕಾರಣಕ್ಕೆ ಜೊಹರಾಳ ಗಂಡ ತಲಾಖ್ ನೀಡುತ್ತಾನೆ. ಮಕ್ಕಳನ್ನು ಬಿಟ್ಟಿರಲು ಸಾಧ್ಯವಾಗದೆ ತಿರುಗಿ ಜೊಹರಾಳನ್ನು ಮದುವೆಯಾಗಲು ಸಿದ್ಧನಾಗುತ್ತಾನೆ. 'ಒಜ್ಜತ್' ಆಗದೆ ಆತ ಅವಳನ್ನು 'ನಿಖಾ' ಮಾಡಿಕೊಳ್ಳಲು ಅವಕಾಶವಿಲ್ಲದ್ದರಿಂದ ಜೊಹರಾ ಒಜ್ಜತ್ತಿಗೆ ಒಪ್ಪಬೇಕಾಗುತ್ತದೆ. ಇಲ್ಲಿ ಜೊಹರಾಳಿಗೆ ಈ ರೀತಿಯ ಸಂಬಂಧ ಬೇಡದಿದ್ದರೂ ತಾಯಿಯ ಒತ್ತಡ, ತಿರಸ್ಕಾರ, ಅಸಡ್ಡೆ, ನಿಂದನೆಯ ಮಾತುಗಳು, ತವರ ಬಡತನ, ಆರ್ಥಿಕ ಅಸಹಾಯಕತೆ, ಮಕ್ಕಳ ಭವಿಷ್ಯ ಅವಳನ್ನು ಮೆತ್ತಗಾಗಿಸಿತು. ಹೆರಿಗೆಯಾದ ಮೇಲೆ ಆಕೆಗೆ ಋತುಸ್ನಾನವಾಗದೇ ಇರುವುದರಿಂದ ಒಂದು ದಿನದ ಮದುವೆಗೆ ಅಡ್ಡಿಯೆಂದು ನಾಟಿ ಔಷಧಿಯನ್ನು ಅವಳಿಗೆ ಕೊಡಲಾಗುತ್ತದೆ. ದೇಹ ಅದಕ್ಕೂ ಪ್ರತಿರೋಧ ತೋರಿ ರಕ್ತಸ್ರಾವ ಹೆಚ್ಚಾಗಿ ಅವಳು ಸಾವನ್ನಪ್ಪುತ್ತಾಳೆ. ಇಲ್ಲಿ ಹೆಣ್ಣಿನ ದೇಹ ಪ್ರಕೃತಿಗಿಂತ ಗಂಡಸಿನ ಮನಸ್ಸು ಮತ್ತು ನಿರ್ಧಾರವೇ ಪ್ರಧಾನವಾಗುವುದನ್ನು, 'ಅಷ್ಟೆಲ್ಲಾ ಕಾಯಲಿಕ್ಕಾಗುತ್ತದಾ? ಅವನೀಗ ಮನಸ್ಸು ಬದಲಾಯಿಸುವುದೇ ಒಂದು ಪವಾಡ. ಅವನು ಇನ್ನೊಮ್ಮೆ ಮನಸ್ಸು ಬದಲಾಯಿಸುವುದಿಲ್ಲ ಎಂಬ ನಂಬಿಕೆಯಾದರೂ ಎಲ್ಲಿದೆ? ನೀನು ಯಾರಾದರೂ ವೈದ್ಯರಲ್ಲಿಗೆ ಹೋಗಿ ಅವಳು ಮುಟ್ಟಾಗಲೂ ಏನಾದರೂ ಔಷಧಿ ತಂದು ಕೊಡು'[15] ಎಂಬ ಮಾತಿನಲ್ಲಿ ಗುರುತಿಸಬಹುದು. ಧರ್ಮದ ನಿಯಮಗಳನ್ನು ಪಾಲಿಸಲು ಪ್ರಕೃತಿ ನಿಯಮದ ವಿರುದ್ಧ ಹೋರಾಟ ಆರಂಭವಾಗಿ ಹೆಣ್ಣನ್ನು ಬಲಿತೆಗೆದುಕೊಳ್ಳುವುದನ್ನು ಕತೆಯಲ್ಲಿ ಕಾಣಬಹುದು. 'ಚಂದ್ರಗಿರಿ ತೀರದಲ್ಲಿ' ಕಾದಂಬರಿಯ ನಾದಿರಾ ಒಜ್ಜತ್‌ಗೆ ಒಪ್ಪಿ ಗಂಡನ್ನು ನೋಡಿದ ಮೇಲೆ ಪ್ರತಿಭಟನೆಯೇನೋ ಎಂಬಂತೆ ಅಲ್ಲಾಹನ ಸಾಮ್ರಾಜ್ಯದಲ್ಲಿ

ನ್ಯಾಯ ಕೇಳಲು ಹೊರಟವಳಂತೆ ತನ್ನ ಬದುಕನ್ನೇ ಕೊನೆಗಾಣಿಸಿಕೊಳ್ಳುವುದನ್ನೂ ಕಾಣುತ್ತೇವೆ.

ಧರ್ಮದ ಹೆಸರಿನಲ್ಲಿ ನಡೆಯುವ ಇಂಥ ಘೋರ ಕೃತ್ಯಗಳನ್ನು ಕಾರ್ಯರೂಪಕ್ಕೆ ತರುವಾಗ ಪುರುಷರ ಹಿತ ಮುಖ್ಯವಾಗುತ್ತದೆಯೇ ಹೊರತು ಹೆಣ್ಣಿನ ನೋವು ಅರ್ಥವಾಗುವುದಿಲ್ಲ. ಬೇಡವೆನಿಸಿದಾಗ ಬಿಡುವ, ಬೇಕೆನಿಸಿದಾಗ ಒಪ್ಪಿಕೊಳ್ಳುವ ಪುರುಷರ ಇಂಥ ಚಟಕ್ಕೆ ಸಿಕ್ಕಿ ಬಲಿಯಾಗುತ್ತಿರುವ ಮಹಿಳೆಯ ಬದುಕನ್ನು ಈ ಕಥಾನಕಗಳು ಬಿಚ್ಚಿಡುತ್ತವೆ. ಮಹಿಳೆಯ ಜೀವನ ಪುರುಷನ ಸೂತ್ರಧಾರಿತ್ವದಲ್ಲಿ ನಡೆಯಬೇಕಾಗಿರುವಂತಹ ಪರಿಸ್ಥಿತಿಯು ಧರ್ಮದ ಹೆಸರಿನಲ್ಲಿ ನಿರ್ಮಾಣವಾಗಿರುವುದನ್ನು ಲೇಖಕಿ ಸೂಕ್ಷ್ಮವಾಗಿ ಪ್ರಶ್ನಿಸುತ್ತಾರೆ. ಹೆಂಗಸರು ಮುಟ್ಟಾಗುವುದು, ಗರ್ಭಿಣಿಯಾಗುವುದು ಎಲ್ಲವೂ ಪ್ರಕೃತಿ ನಿಯಮ. ಈ ಪ್ರಕೃತಿ ನಿಯಮವನ್ನೇ ನಮ್ಮ ಅನುಕೂಲಕ್ಕೆ ತಕ್ಕಂತೆ ಬದಲಾಯಿಸಿಕೊಳ್ಳುವುದೇ ಎಂಬ ಆಮೀನಳ ಪ್ರಶ್ನೆ ಲೇಖಕಿಯ ಪ್ರಶ್ನೆಯೂ ಆಗಿದೆ. ವಿಷಾದ ಸ್ಥಾಯಿ ಆಗಿರುವ ಈ ಕೃತಿಯ ನಾಯಕಿಯರ ಬಗೆಗೆ ಓದುಗರಲ್ಲಿ ಸಹಾನುಭೂತಿ ಉಂಟಾಗುತ್ತದೆ. ಪ್ರತಿಭಟಿಸ ಲಾರದ ಅವರ ಅಸಹಾಯಕತೆಗೆ ಮನಸ್ಸು ಮಿಡಿಯುತ್ತದೆ. ಹೊರ ಜಗತ್ತಿನ ಆಗು-ಹೋಗುಗಳನ್ನು ಅರಿಯಲು ಸಾಧ್ಯವಾಗದಂತೆ ನಾಲ್ಕು ಗೋಡೆಗಳ ನಡುವೆ ಹೆಂಗಸನ್ನು ಸುಸಂಘಟಿಸಿ ಆರ್ಥಿಕ, ಶೈಕ್ಷಣಿಕ ಅವಕಾಶಗಳಿಂದ ವಂಚಿಸಿ ಧರ್ಮದ ಉರುಳಿಗೆ ಅವಳನ್ನು ಬಿಗಿದು ದನಿ ಎತ್ತದಂತೆ ಮಾಡಿರುವ ಪುರುಷ ಪ್ರಾಬಲ್ಯದ ಒಂದು ಮುಖವನ್ನು ಅನಾವರಣ ಮಾಡಿದೆ.

ಧಾರ್ಮಿಕ ನಿಯಮಗಳು ಮಹಿಳೆಯ ಸಂದರ್ಭದಲ್ಲಿ ಎಷ್ಟೊಂದು ಕಠಿಣವಾಗಿವೆ ಹಾಗೂ ಪುರುಷರ ಸಂದರ್ಭದಲ್ಲಿ ಅನುಕೂಲಕರವಾಗಿ ಏಕ ಮುಖವಾಗಿವೆ ಎಂಬುದನ್ನು 'ಗೋಡೆ' ಕತೆಯಲ್ಲಿ ಅಭಿವ್ಯಕ್ತಿಗೊಂಡಿದೆ. ಇದು ಕೂಡ 'ತಲಾಕ್' ಕೇಂದ್ರಿತ ಕತೆಯಾಗಿದ್ದರೂ ಒಡೆದು ಹೋದ ಕುಟುಂಬದ ವ್ಯಥೆಯನ್ನು ಕಟ್ಟಿಕೊಡುತ್ತದೆ.

ತನ್ನ ಅಮ್ಮನ ಮಾತಿಗೆ ಗೌರವ ಕೊಡುವ ಕಾರಣಕ್ಕಾಗಿ ಶಾಫಿ ತನ್ನ ಹೆಂಡತಿ ಫರಿದಾಳಿಗೆ 'ತಲಾಖ್' ಕೊಡುತ್ತಾನೆ. ಅವಳು ಹನ್ನೆರಡು ವರ್ಷ ಸಾಕಿದ ಮಗಳು ಜಮೀಲಾಳನ್ನು ಕಾನೂನಿನ ನೆರವಿನಿಂದ ತನ್ನ ವಶಕ್ಕೆ ತೆಗೆದುಕೊಳ್ಳುತ್ತಾನೆ. ಮುಸ್ಲಿಂ ಸಮುದಾಯದಲ್ಲಿ ಗಂಡ-ಹೆಂಡಿರ ಸಂಬಂಧವೆಂದರೆ ಮೂರು ತಲಾಖ್‌ಗಳ ಸಂಬಂಧ. 'ತಲಾಖ್' ಹೊಂದಿದ ಮೇಲೆ ಗಂಡನ ಮನೆಗೆ ಹೋಗುವ ಅವಕಾಶವಿರುವುದಿಲ್ಲ ಇದು ನಿಯಮ. ಈ ಕಾರಣಕ್ಕಾಗಿ ಮಗಳ ಮದುವೆಯಲ್ಲಿ ಪಾಲ್ಗೊಳ್ಳುವ ಅವಕಾಶವನ್ನು ಫರೀದಾ ಕಳೆದುಕೊಂಡಿರುತ್ತಾಳೆ. ಆದರೆ ತಾಯಿಯ ಹೃದಯ ಮಗಳಿಗಾಗಿ ಮಿಡಿಯುತ್ತಲೇ ಇದೆ. 'ಗಂಡ ಹೆಂಡತಿಯ ನಡುವೆ ಗೋಡೆಯಾಗಿದ್ದ ತಲಾಖ್ ತಾಯಿ-ಮಗಳ ಮಧ್ಯೆ ಮುಳ್ಳುಬೇಲಿಯೂ ಆಗಿತ್ತು. ಬೇಲಿದಾಟಲು ಆಗದ ತಾಯಿ-ಮಗಳು ಇದ್ದಲ್ಲಿಯೇ ಚಡಪಡಿಸುತ್ತಿದ್ದರು .ಕಣ್ಣಿಲ್ಲದ, ಮೆದುಳಿಲ್ಲದ ಸಮಾಜಕ್ಕೆ ಈ ಗೋಡೆ ಬೇಲಿಗಳೆಂದು ಅರ್ಥವೇ ಆಗುವುದಿಲ್ಲ ಎಂಬ ನಿರೂಪಕಿಯ ಮಾತುಗಳು ಗಂಡು ಸಮಾಜದ ಏಕಮುಖತೆಯನ್ನು ಧ್ವನಿಸಿವೆ.

ನಂತರ ಜಮೀಲಾ ತನ್ನ ಚೊಚ್ಚಲ ಹೆರಿಗೆಗಾಗಿ ತಂದೆ ಶಾಫಿಯ ಮನೆಗೆ ಬರುತ್ತಾಳೆ. ಹೆರಿಗೆಯ ಸಂದರ್ಭದಲ್ಲಿ ತಾಯಿ ಫರೀದಾಳನ್ನು ಬಯಸಿ, ತಂದೆಯ ಮೂಲಕವೇ ಕರೆಸಿಕೊಳ್ಳುತ್ತಾಳೆ. ಈ ಸಂದರ್ಭದಲ್ಲಿ ಮಗಳ ಬಗೆಗಿನ ಕರುಣೆಯಿಂದ ಫರೀದಾ ಬಾಣಂತನ ಮುಗಿಯುವವರೆಗೂ ತನ್ನ ಮನೆಯಲ್ಲಿರಲು ಅವಕಾಶ ನೀಡುವುದನ್ನು ಕಾಣುತ್ತೇವೆ. ಸಂಬಂಧದ ನೆಲೆಯಲ್ಲಿ ಗಂಡನ ಮನೆ ಪ್ರವೇಶಿಸುವುದನ್ನು ವಿರೋಧಿಸುವ

ನಿಯಮ, ಧರ್ಮ, ಸೇವೆಯ ನೆಲೆಯಲ್ಲಿ ದುಡಿಸಿಕೊಳ್ಳುವುದನ್ನು ಸಮರ್ಥಿಸಿದಂತಿದೆ. ಫರಿಧಾ ಮಗಳ ಬಾಣಂತನದ ನೆಪದಲ್ಲಿ ತಮ್ಮ ನಡುವಿನ ಗೋಡೆಯನ್ನು ಸಡಿಲಗೊಳಿಸಬಹುದೆಂಬ ಆಸೆಯಿಂದ ಮನೆಯನ್ನು ಸ್ವಚ್ಛಗೊಳಿಸುವುದು, ಗಂಡನಿಗೆ ರುಚಿರುಚಿಯಾದ ಅಡಿಗೆಯನ್ನು ತಯಾರಿಸುವುದು. ಅವನ ಬೇಕು ಬೇಡಗಳ ಕಡೆ ಹೆಚ್ಚು ಗಮನ ನೀಡುವುದರ ಮೂಲಕ ಗಂಡನ ಮನಸ್ಸನ್ನು ತನ್ನೆಡೆಗೆ ಸೆಳೆದುಕೊಳ್ಳುವ ಪ್ರಯತ್ನ ಮಾಡುತ್ತಾಳೆ. ಅಳಿಯ ಸತ್ತಾರ್‌ನ ಮೂಲಕ ಗೋಡೆಯ ಕಲ್ಲುಗಳನ್ನು ಸಡಿಲಗೊಳಿಸಲು ಯತ್ನಿಸುತ್ತಾಳೆ. ಆದರೆ ಶಾಫಿಯ ಕಲ್ಲು ಹೃದಯ ಯಾವುದಕ್ಕೂ ಕರಗುವುದಿಲ್ಲ. ಅವರಿಬ್ಬರ ನಡುವಿನ ಗೋಡೆ ಬೀಳುವುದಿರಲಿ ಬಿರುಕು ಮೂಡುವ ಲಕ್ಷಣಗಳೂ ಕಾಣದಿದ್ದಾಗ ಫರೀದಾ ನಿರಾಶಳಾಗುತ್ತಾಳೆ. ಅಗತ್ಯಗಳಿಗಾಗಿ ಹೆಂಡತಿಯನ್ನು ಬಳಸಿಕೊಂಡು ಧರ್ಮದ ಕಟ್ಟಳೆಯನ್ನು ಮುರಿಯುವುದಕ್ಕೆ ಅವಕಾಶ ಕೊಡದೆ ಕೊನೆಗೂ ಫರೀದಾಳನ್ನು ತಿರಸ್ಕರಿಸುವಂತಹ ಧೋರಣೆಯನ್ನು ಹೊಂದಿದ್ದ ಶಾಫಿ ಗಂಡನ ಅತಿ ಕ್ರೌರ್ಯದ ಪ್ರದರ್ಶನ ಮಾಡಿ ಹೆಣ್ಣನ್ನು ಶೋಷಣೆಗೆ ಗುರಿಪಡಿಸುತ್ತಾನೆ. ಇಲ್ಲಿ ಬಡತನ ಮತ್ತು ಸ್ತ್ರೀ ಶೋಷಣೆಯ ಹಲವು ಮಗ್ಗಲುಗಳನ್ನು ಪರಿಚಯಿಸುವುದರ ಮೂಲಕ ಅವು ಪಡೆದುಕೊಂಡ ಸ್ವರೂಪವನ್ನು ಕಟ್ಟಿಕೊಡುತ್ತವೆ.

'ಪಯಣ ಮತ್ತು ಇತರ ಕಥೆಗಳು' ಕಥಾ ಸಂಕಲನದ 'ಉರಿಬಿಸಿಲು' ಕತೆ ಈ ಹಿಂದೆ ಪ್ರಸ್ತಾಪಿಸಿದ ಕತೆಗಳಿಗಿಂತ ಭಿನ್ನ ಸ್ವರೂಪವನ್ನು ಹೊಂದಿದೆ. ಹಿಂದಿನ ಕತೆಗಳ ನಾಯಕಿಯರು ಗಂಡಂದಿರಿಂದ 'ತಲಾಖ್' ಸಂಬಂಧಿತವಾದ ನೆಲೆಯ ಶೋಷಣೆಯನ್ನು ಅನುಭವಿಸಿದರೆ 'ಉರಿಬಿಸಿಲು' ಕತೆಯ ನಾಯಕಿ ಆಮೀನಾ ಗಂಡನಿದ್ದೂ ಇಲ್ಲದಂತಹ ಪರಿಸ್ಥಿತಿಯನ್ನು ಅನುಭವಿಸುತ್ತಾಳೆ. ಸಹನಾ ಕಾದಂಬರಿಯಲ್ಲಿ 'ನಸೀಮಾ' ತನ್ನ ಅನಾರೋಗ್ಯದ ಕಾರಣದ ನೆಪವೊಡ್ಡಿ ಎರಡನೆಯ ಮದುವೆಯಾದ ಶಾಫಿ ತನ್ನೊಡನೆ ಮತ್ತೆ ಬದುಕನ್ನು ನಡೆಸಲು ತಿರಸ್ಕರಿಸಿದ ನಸೀಮಾಳಿಗೆ ತಾನು ಸಾಯುವ ತನಕ ತಲಾಖ್ ಕೊಡದೆ ಇನ್ನೊಬ್ಬಳನ್ನು ಮದುವೆ ಆಗುವ ಸೂಚನೆಯನ್ನು ನೀಡುತ್ತಾನೆ. ತಲಾಖ್ ಅನ್ನು ವೈಯಕ್ತಿಕ ಸ್ವಾರ್ಥಕ್ಕೆ ದುರುಪಯೋಗ ಪಡಿಸಿಕೊಂಡಂತೆಯೇ ಬಹು ಪತ್ನಿತ್ವವನ್ನು ಹೆಣ್ಣಿನ ಮೇಲಿನ ಸೇಡಿಗಾಗಿ ಬಳಸಿಕೊಳ್ಳುವ ಸ್ವಾರ್ಥದ ವ್ಯಕ್ತಿತ್ವವನ್ನು ಕಾಣಬಹುದು.

ಬಾಲ್ಯದಿಂದಲೂ ಓದುವುದರಲ್ಲಿ ಅಪಾರ ಆಸಕ್ತಿ ಹೊಂದಿದ್ದ ಆಮೀನ ವೈಚಾರಿಕವಾದ ಆಲೋಚನೆಗಳನ್ನು, ಚಿಂತನೆಗಳನ್ನು ಬೆಳಿಸಿಕೊಂಡವಳು. ತನ್ನ ಕುಟುಂಬದೊಳಗಿನ ಸಂಪ್ರದಾಯ ಮೌಢ್ಯಗಳನ್ನು ಕುರಿತು ಪ್ರತಿಭಟನೆಯ ದನಿ ಎತ್ತಿದವಳು. ತನ್ನ ಕೌಟುಂಬಿಕ ಬದುಕಿನ ಬಗ್ಗೆ ನಿರ್ಧಿಷ್ಟವಾದ ಗುರಿಗಳನ್ನು ಹೊಂದಿದವಳು. ಮದುವೆ ಆದ ನಂತರದಲ್ಲಿ ತನ್ನ ಆದರ್ಶಗಳನ್ನು ಸಂಸಾರದಲ್ಲಿ ಕಾಣಲು ಹಂಬಲಿಸಿದವಳು. ಸಾಕಷ್ಟು ಗಾಳಿ-ಬೆಳಕು ಬರುವಂತೆ ಮನೆಯ ವಿನ್ಯಾಸವಿರಬೇಕೆಂಬುದು ಅವಳ ಸಲಹೆ. ಎರಡೇ ಮಕ್ಕಳು ಸಾಕೆನ್ನುವ ಅವಳ ಆಶಯ, ಪೌಷ್ಠಿಕ ಆಹಾರ ಬೇಕೆನ್ನುವ ಅವಳ ಬಯಕೆ ಸುತ್ತ ಮುತ್ತಲಿನವರಿಗೆ ಹಠಮಾರಿ ತನದ್ದು ಎನಿಸಿದರೆ, ಗಂಡನಿಗೆ ಕೋಪ ಉಂಟು ಮಾಡುತ್ತದೆ.

ಇದಕ್ಕೆ ಅವಳು ಪಡೆವ ಶಿಕ್ಷಣವೇ ಕಾರಣ ಎನ್ನುವ ಅಭಿಪ್ರಾಯವೂ ವ್ಯಕ್ತವಾಗುತ್ತದೆ. "ಈ ನಾಲ್ಕಕ್ಷರ ಕಲಿತ ಹುಡುಗಿಯನ್ನು ಮದುವೆಯಾಗಿ ನನ್ನ ಮಗ ಹಾಳಾದ"[೨೦] ಎಂದು ಹೇಳುವ ಆಮೀನಳ ಅತ್ತೆಯ ಮಾತುಗಳು ಈ ನೆಲೆಯಿಂದ ಬಂದವುಗಳೇ ಆಗಿವೆ. ವಿದ್ಯಾವಂತ ಮಹಿಳೆಯರ ವಿರುದ್ಧದ ಈ ಧೋರಣೆ

ಬದಲಾವಣೆಯನ್ನು ತಿರಸ್ಕರಿಸುವುದರ ಮೂಲಕ ಹೆಣ್ಣನ್ನು ಮೌಢ್ಯದಲ್ಲೇ ಉಳಿಸಿ ಅವಳ ಆಂತರಿಕ ಹಂಬಲವನ್ನು ಆಯ್ಕೆಯ ಸ್ವಾತಂತ್ರ್ಯವನ್ನು ಹತ್ತಿಕ್ಕುವ ಒಂದು ಹುನ್ನಾರವಾಗಿದೆ. ಗಂಡಿನ ಸರ್ವಾಧಿಕಾರವನ್ನು ವಿರೋಧಿಸುತ್ತಿದ್ದ ಆಮೀನಳಿಗೆ ಅವಳ ಗಂಡನೇ ಇನ್ನೊಬ್ಬಳನ್ನು ಕಟ್ಟಿಕೊಂಡು ಈಕೆಯನ್ನು ನಿರಾಕರಿಸುವುದರಿಂದ ಇನ್ನಿಲ್ಲದ ಬೇಗೆಗೆ ತುತ್ತಾಗುತ್ತಾರೆ. ಆಕೆಯೇ ಹೇಳುವಂತೆ' ನನ್ನ ಮೇಲೆ ಕಲ್ಲೆಸೆಯುವವರೂ, ಈ ಅನ್ಯಾಯಕ್ಕೆ ಒಳಗಾಗುವವರೂ ಸ್ತ್ರೀಯರೇ ಎಂಬುದನ್ನು ಯೋಚಿಸಿದಾಗ ನಿನಗೆ ಇವರ ಕುರಿತು ಜಿಗುಪ್ಸೆಯಾಗುತ್ತದೆ" ಎಂಬ ಮಾತುಗಳು ಪುರುಷನ ಇಂತಹ ಶೋಷಣೆಯಲ್ಲಿ ಅರಿವಿಲ್ಲದಂತೆ ಕುರಿಗಳಂತೆ ಮತ್ತೆ ಹೆಣ್ಣುಗಳೇ ಬಲಿಪಶುಗಳಾಗುವುದನ್ನು ಸೂಚಿಸಿದೆ. ಹೆಣ್ಣಿಗೆ ಹೆಣ್ಣೇ ಶತ್ರು ಎಂಬಂತೆ ನಡೆದುಕೊಳ್ಳುವುದರ ಬಗ್ಗೆ ಕಠಿಣವಾದ ಪ್ರಶ್ನೆಯನ್ನೇ ಹಾಕಿದ್ದಾರೆ.

ನಿರೂಪಕಿಯೇ ಹೇಳುವಂತೆ 'ಓರ್ವಹೆಣ್ಣನ್ನು ಹತ್ತಿಕ್ಕಲು ಇನ್ನೋರ್ವ ಹೆಣ್ಣನ್ನು ಬಳಸಿದ ಆಮೀನಳ ಗಂಡನಿಗಿಂತಲೂ ಇನ್ನೋರ್ವ ಹೆಣ್ಣೇ ನನ್ನ ತಿರಸ್ಕಾರ ಮತ್ತು ದ್ವೇಷಕ್ಕೆ ಗುರಿಯಾದಳು. ಇದೂ ಕೂಡ ಗಂಡಿನ ಸಾಧನೆಯಲ್ಲವೇ?'[20] ಇದು ಒಡೆದು ಆಳುವ ನೀತಿಯಾಗಿದ್ದು ಗಂಡಿನ ಇಂಥ ಸಂಚನ್ನು ಈ ಕತೆ ಬಯಲು ಮಾಡುತ್ತದೆ. ಹೆಣ್ಣಿನ ಬಗ್ಗೆ ಕಾಳಜಿ ಉಳ್ಳವರನ್ನು ಈ ಕತೆ ಆಲೋಚನೆಗೆ ಎಡೆ ಮಾಡುವುದಲ್ಲದೆ ಅವರ ಗ್ರಹಿಕೆಯನ್ನು ಹೆಚ್ಚಿಸುವುದನ್ನು ಕಾಣುತ್ತೇವೆ.

ಹೀಗೆ ಮೇಲಿನ ಕತೆ ಕಾದಂಬರಿಗಳಲ್ಲಿ ಪುರುಷ ಕೇಂದ್ರಿತ ಸ್ತ್ರೀ ಶೋಷಣೆಯು ಹಲವು ಸ್ವರೂಪಗಳಲ್ಲಿ ತೆರೆದುಕೊಳ್ಳುವುದನ್ನು ಕಾಣಬಹುದು. ಇಸ್ಲಾಂ ಮೂಲಭೂತವಾದಿ ಧೋರಣೆ ಕಾರಣವಾಗಿ ಅಲ್ಲಿನ ಪುರುಷ ಪ್ರಧಾನ ವ್ಯವಸ್ಥೆ ಧರ್ಮದ ಹೆಸರಿನಲ್ಲಿ ತನ್ನದೇ ಆದ ಸ್ವಾರ್ಥವನ್ನು ಸ್ಥಾಪಿಸುವುದರ ಮೂಲಕ ಸಮಾಜದ ಹಲವು ಸಮಸ್ಯೆಗಳಿ ಗೆ ಮೂಲ ಕಾರಣವಾಗಿರುವುದನ್ನು ಸಾರಾ ಅವರ ಕೃತಿಗಳು ವಿವೇಚಿಸಿವೆ.

**ಪರ್ದಾ ಸಮಸ್ಯೆ:**

ಸಾರಾ ಅವರು ತಮ್ಮ ಕತೆ ಕಾದಂಬರಿಗಳಲ್ಲಿ ಬುರ್ಕಾ ಧರಿಸುವ ನೆಲೆಯಿಂದ ಮುಸ್ಲಿಂ ಹೆಣ್ಣು ಅನುಭವಿಸಬೇಕಾದ ತಳಮಳ ಕುರಿತು ಪ್ರಧಾನವಾಗಿ ಚರ್ಚಿಸಿಲ್ಲವಾದರೂ ಸಾಂದರ್ಭಿಕವಾಗಿ ಈ ಬಗೆಗೆ ಸಮಾಜಿಕ ಹಿಡಿತದ ಸ್ವರೂಪವನ್ನು ತೆರೆದಿರಿಸಿದ್ದಾರೆ.

ಪರ್ದಾನಿಯಮದ ಹಿನ್ನೆಲೆಯಲ್ಲಿ ಇಸ್ಲಾಂನ ಧೋರಣೆ ಗಮನಾರ್ಹ "ಸ್ತ್ರೀ ಪುರುಷರು ನಗ್ನತೆಯಿಂದ ದೂರವಿರಬೇಕೆಂದು ಆಶಿಸುವ ಇಸ್ಲಾಂ ಮಾನವ ಸಮಾಜದ ಗೌರವಕ್ಕೆ ಆದ್ಯತೆ ನೀಡಿದೆ ಎನ್ನಬಹುದು. ಪುರುಷ ತನ್ನ ಪತ್ನಿಯ ಹೊರತು ಇತರ ಸ್ತ್ರೀ, ಪುರುಷರ ನಡುವೆ ದೇಹ ಪ್ರದರ್ಶನ ಮಾಡಬಾರದೆಂದು ಹಾಗೆಯೇ ಸ್ತ್ರೀ ತನ್ನ ದೇಹವನ್ನು ಗಂಡನ ಹೊರತು ಇತರ ಯಾರಿಗೂ ಕಾಣಿಸದಂತೆ ಮುಚ್ಚ ಬೇಕೆಂದು ಅವಶ್ಯಕವಾದ ಕರ್ತವ್ಯವನ್ನಾಗಿಸಿದೆ. ಈ ನೆಲೆಯಲ್ಲಿ ಸ್ತ್ರೀಯರಿಗೆ ಪರ್ದಾನಿಯಮಗಳು ಎಲ್ಲಾ ದೇಶಗಳಲ್ಲಿಯೂ ಒಂದೇ ರೀತಿಯಲ್ಲಿ ಇಲ್ಲ. ಈಜಿಪ್ಟ್, ಅರೇಬಿಯಾ, ಇರಾನ್‌ಗಳಲ್ಲಿ ಇದು ನಾಮ ಮಾತ್ರವಾಗಿದ್ದು ಸ್ತ್ರಿಯರು ತಲೆಯ ಮೇಲೆ ಮುಸುಕು ಹಾಕಿಕೊಂಡು ಬೀದಿಯಲ್ಲಿ ಸರಾಗವಾಗಿ ಓಡಾಡುವುದನ್ನು ಕಾಣಬಹುದು. ಆದರೆ ಭಾರತದಲ್ಲಿ ಪರ್ದಾನಿಯಮ ಬಹುಕಟ್ಟುನಿಟ್ಟು . ಸಾಮಾನ್ಯವಾಗಿ ಭಾರತೀಯ ಮುಸ್ಲಿಂ ಸ್ತ್ರೀಯರು ಮನೆಯಿಂದ ಹೊರಗೆ ಬರುವುದೇ ತುಂಬಾ ಕಡಿಮೆ. ಮಾತ್ರವಲ್ಲದೆ ಮನೆಯಲ್ಲೂ ಪರಪುರುಷನಿಗೆ

ಮುಖ ತೋರಿಸುವುದಿಲ್ಲ. ಈ ಪದ್ಧತಿ ತೈಮೂರ್ ರಾಜನಿಂದ ಬಂತೆಂದು ಕೆಲವರು ಅಭಿಪ್ರಾಯ ಪಡುತ್ತಾರೆ. ಅವನು ಮುಸ್ಲಿಂ ಸ್ತ್ರೀಯರು ಹಿಂದೂಗಳಿಗೆ ತೋರಿಸುವಂತಿಲ್ಲ ಎಂದು ರಾಜಾಜ್ಞೆ ವಿಧಿಸಿದ್ದನಂತೆ. ತೈಮೂರನು ಭಾರತದಲ್ಲಿದ್ದದ್ದು ಕೆಲವೇ ಕಾಲ ಮಾತ್ರವಾದ್ದರಿಂದ ಆತನ ಆಜ್ಞೆ ಮಾತ್ರವೊಂದರಿಂದಲೇ ಇದು ಬಂತೆಂದು ಹೇಳಲಾಗುವುದಿಲ್ಲ. ಇದಕ್ಕೆ ಬೇರೆ ಕಾರಣಗಳಿರಬಹುದು. ಅಲ್ಲದೆ ಪರ್ದಾನಿಯಮ ಉತ್ತಮ ಮತ್ತು ಮಧ್ಯಮ ವರ್ಗದವರಲ್ಲಿಯೇ ವಿನಃ ಕೆಳದರ್ಜೆಯವರಲ್ಲಿ ಇಲ್ಲವೆಂಬುದನ್ನು ಇಲ್ಲಿ ಸ್ಪಷ್ಟ ಪಡಿಸಬಹುದು. ಅಷ್ಟೆ ಏಕೆ ಸಾಮಾನ್ಯವಾಗಿ ಯಾವ ಮುಸ್ಲಿಂ ದೇಶದಲ್ಲೇ ಆಗಲಿ ಗ್ರಾಮೀಣ ವಲಯದಲ್ಲಿ ಪರ್ದಾನಿಯಮ ಇಲ್ಲವೆಂದೇ ಭಾವಿಸಬಹುದು. ಈ ನೆಲೆಯಲ್ಲಿ ಮಹಮದ್ ಪೈಗಂಬರರ ಹೆಂಡತಿ ಆಯೇಷಾ ಬುರ್ಕಾವನ್ನು ತೊಡುತ್ತಿರಲಿಲ್ಲವೆಂಬುದು ಸ್ಪಷ್ಟ.[೨೨] ಕೆ.ವಿ.ಪುಟ್ಟಪ್ಪನವರು ಸಂಪಾದಿಸಿರುವ 'ಇಸ್ಲಾಂ ಸಂಸ್ಕೃತಿ'ಯಲ್ಲಿ ಇದನ್ನು ವ್ಯಕ್ತಪಡಿಸಿದ್ದಾರೆ.

ಮುಸ್ಲಿಂ ಮಹಿಳೆಯರು ಇಂತಹ ನಿಯಮಗಳ ಮೂಲಕ ತಮ್ಮ ಆಯ್ಕೆಯ ಹಕ್ಕನ್ನು ಸ್ವಾತಂತ್ರ್ಯವನ್ನು ಕಳೆದುಕೊಂಡಿದ್ದರೆ. ಇದನ್ನು 'ವಜ್ರಗಳು' ಕಾದಂಬರಿಯಲ್ಲಿ ಸೆಲ್ಮಾ ತನ್ನ ಚಿಕ್ಕಮ್ಮ ನಫೀಸಳೊಂದಿಗೆ ಬುರ್ಕಾ ತೊಡದೆ ತೋಟದಲ್ಲಿ ಸುತ್ತುತ್ತಿರುವುದನ್ನು ಕಂಡು ಅಣ್ಣ ಹುಸೈನ್ ಕೆಂಡಾಮಂಡಲವಾಗುತ್ತಾನೆ. ತಂಗಿಯನ್ನು ಎಳೆದೊಯ್ದು ಚನ್ನಾಗಿ ಥಳಿಸುತ್ತಾನೆ." ನಿನಗೆ ಹೇಳುವವರು ಕೇಳುವವರು ಯಾರೂ ಇಲ್ಲವೆಂದು ಕೊಂಡೆಯಾ? ತಲೆಯ ಮೇಲೆ ಸರಿಯಾಗಿ ಬಟ್ಟೆಯೂ ಇಲ್ಲದೆ ಅಲೆಯುತ್ತಿದ್ದಿಯಲ್ಲಾ? ನಾನು ಊರಿನಲ್ಲಿ ತಲೆ ಎತ್ತಿ ನಡೆಯಬೇಕೋ ಬೇಡವೋ[೨೩] ಎಂದು ಆರ್ಭಟಿಸುತ್ತಾನೆ. ಅದನ್ನು ತಡೆಯ ಹೋದ ನಫೀಸಳಿಗೂ ಅವಮಾನ ಮಾಡುತ್ತಾನೆ. ಈ ಸಂದರ್ಭದಲ್ಲಿ ಆಕೆ "ನಮ್ಮ ತಲೆಯಲ್ಲಿ ಬಟ್ಟೆ ಇಲ್ಲದಿದ್ದರೆ, ಪರಪುರುಷರ ಮುಂದೆ ನಿಂತರೆ ನಾವು ನರಕಕ್ಕೆ ಹೋಗುತ್ತೇವೆ. ಅಷ್ಟೇ ತಾನೇ? ಆದರೆ ನೀನು ಮತ್ತು ನಿನ್ನಂತಹವರೊಂದಿಗಿನ ಸ್ವರ್ಗಕ್ಕಿಂತ ನರಕವೇ ವಾಸಿ ನರಕವೇ ನಮಗಿರಲಿ!"[೨೪] ಎಂದು ಹೇಳುವ ಮಾತುಗಳು ಪರ್ದಾ ಬಗ್ಗೆ ಇರುವ ಹೆಣ್ಣಿನ ಧೋರಣೆಯನ್ನು ಬಿಂಬಿಸಿದೆ. ಇಲ್ಲಿ ಇಂತಹ ಪದ್ಧತಿಯ ಬಗೆಗೆ, ಪುರುಷರ ಕ್ರೌರ್ಯದ ಬಗೆಗೆ ಇರುವ ತಿರಸ್ಕಾರದ ಸ್ವರೂಪ ಪ್ರತಿಭಟನಾತ್ಮಕವಾಗಿದೆ.

ಹುಸೈನ್ ತನ್ನ ಹೆಂಡತಿ ಹಮೀದಳಿಗೆ ಗಂಡನಾಗಿ ಕೆಲವು ತಾಕೀತುಗಳನ್ನು ಹಾಕುತ್ತಾನೆ. "ಹಗಲು ಹೊತ್ತಿನಲ್ಲಿ ಮಾಳಿಗೆಯಿಂದ ಕೆಳಗಿಳಿಯಲೇ ಬಾರದು. ಮನೆಯ ಅಂಗಳದಲ್ಲಿ ಪರಪುರುಷರಾದ ಕೆಲಸದವರು ಓಡಾಡುತ್ತಿರುವ ಕಾರಣ ನನ್ನ ಹೆಂಡತಿ ಅವರ ಕಣ್ಣಿಗೆ ಬೀಳಬಾರದು"[೨೫] ಇದರಿಂದ ಅನುಕೂಲಸ್ಥರಾದ ಮನೆಯ ಹೆಣ್ಣುಗಳಿಗೆ ಉಡಲು-ಉಣ್ಣಲು ಕೊರತೆಯಿಲ್ಲದಿದ್ದರೂ, ಇಂತಹ ನಿಷಿದ್ಧಗಳಿಂದಾಗಿ ಚಿನ್ನದ ಪಂಜರದಲ್ಲಿ ಬಂಧಿಯಾದ ಸ್ಥಿತಿ ನಿರ್ಮಾಣ ವಾಗಿರುವುದನ್ನು ಗ್ರಹಿಸಬಹುದು.

ಇದೇ ಕಾರಣಕ್ಕಾಗಿ ಆಕೆಯನ್ನು ತವರಿಗೆ ಕಳುಹಿಸುವುದನ್ನು ನಿಲ್ಲಿಸುತ್ತಾನೆ. ತನ್ನ ಏಳು ವರ್ಷದ ಹೆಣ್ಣು ಮಗುವಿಗೆ ಘೋಷಾ ಧರಿಸುವುದನ್ನು ಕಲಿಸುತ್ತಾನೆ. ಕೂದಲು ಕಾಣದಂತೆ ತಲೆಗೆ ಬಟ್ಟೆ ಕಟ್ಟಿಕೊಳ್ಳುವುದನ್ನು ಕಡ್ಡಾಯ ಮಾಡುತ್ತಾನೆ. ಒಮ್ಮೆ ಪರ್ದಾ ಕಾರಣಕ್ಕಾಗಿಯೇ ಮಹಡಿಯಲ್ಲಿ ಬಂಧಿಯಾದ ಹಮೀದ ಮಹಡಿಯ ಪರದೆ ಸರಿಸಿ ಹೊರಗೆ ನೋಡುತ್ತಿದ್ದಾಗ, ಕೆಲಸ ಮಾಡುತ್ತಿರುವ ಪರಪುರುಷರನ್ನು ಇಣುಕಿ ನೋಡಿದಳೆಂಬ ಕಾರಣಕ್ಕೆ, ಎಲೆ ಅಡಿಕೆ ತಿಂದು ತುಟಿಗಳು ಕೆಂಪಾಗಿವೆ, ಸಮಯಕ್ಕೆ ಸರಿಯಾಗಿ ನಮಾಜ್

ಮಾಡಲಿಲ್ಲ ಎಂಬ ಕಾರಣಗಳನ್ನೊಡ್ಡಿ ಅವಕಾಶ ಸಿಕ್ಕಾಗಲೆಲ್ಲಾ ಚನ್ನಾಗಿ ಥಳಿಸುವುದನ್ನು ಕಾದಂಬರಿಯಲ್ಲಿ ಕಾಣುತ್ತೇವೆ.

ಹುಸೈನನ ಘೋಷಾಕಾಳಜಿ ಎಷ್ಟು ಕಠೋರವಾಗಿತ್ತೆಂದರೆ ಹೆರಿಗೆಯ ಬೇನೆಯಲ್ಲಿ ನರಳುತ್ತಿದ್ದ ಹೆಂಡತಿ ಹಮೀದಳನ್ನು ವೈದ್ಯರ ಬಳಿಗೆ ಕರೆದೊಯ್ಯಬೇಕೆಂಬ ಸಲಹೆ ಇತ್ತಾಗ ನಿಮಗೆಲ್ಲ ತಲೆ ಸರಿ ಇಲ್ಲವೆ? ನಮ್ಮ ಹೆಂಗಸರನ್ನು ಆ ಅನ್ಯ ಪುರುಷ ನೋಡುವುದೇ" ಎಂದು ತನ್ನ ಮೌಢ್ಯ ಪ್ರದರ್ಶಿಸುತ್ತಾನೆ. ಅವನ ಪರದೆಯ ವ್ಯಾಮೋಹ ಸಂಪ್ರದಾಯದ ಅಂಧಕಾರ ಗಂಡನೆಂಬ ಅಹಂಕಾರ ಹೆಂಡತಿಯನ್ನೇ ಬಲಿತೆಗೆದುಕೊಳ್ಳುತ್ತದೆ. ಇದೇ ಸಮಸ್ಯೆಯ ಭಿನ್ನ ರೂಪಗಳನ್ನು ಈ ಕತೆಗಳಲ್ಲಿ ಕಾಣಬಹುದು. ಬುರ್ಕಾತೊಡದೆ ಮುಸ್ಲಿಂ ಹೆಣ್ಣುಮಕ್ಕಳು ಬೀದಿಯಲ್ಲಿ ಓಡಾಡ ಬಾರದೆಂಬ ಕಾರಣಕ್ಕೆ 'ಚಪ್ಪಲಿಗಳು' ಕತೆಯ ಸಮೀರಳು ತನ್ನ ಓದಿಗೆ ತಿಲಾಂಜಲಿ ಹೇಳಬೇಕಾಗುತ್ತದೆ. 'ಬೆನ್ನಟ್ಟುವ ಭೂತಗಳು' ಕತೆಯಲ್ಲಿ ಆಯಿಷಾ ಶಿವನ ಸಮುದ್ರ ಜಲಪಾತ ನೋಡುವ ಆಸೆಯನ್ನು ಗಂಡ ಸೈಪುದ್ದೀನರಲ್ಲಿ ತಿಳಿಸಿದಾಗ ಅವರು "ನೀನು ಬುರುಕಾ ಕೂಡ ಧರಿಸದೆ ಬಸ್ಸಿನಲ್ಲಿ ಪ್ರಯಾಣ ಮಾಡುವಾಗ ನಮ್ಮ ಪರಿಚಯದವರು ಯಾರಾದರೂ ನೋಡಿದರೆ ನನಗೆ ಅವಮಾನವಾಗುತ್ತದೆ"[೨೧] ಎಂಬ ಮಾತುಗಳು ವಿದ್ಯಾವಂತ ಮುಸ್ಲಿಂಮರೂ ಕೂಡಾ ಇಂಥಾ ಪದ್ಧತಿಯನ್ನು ನಿರ್ಮೂಲಗೊಳಿಸುವ ಕಡೆ ಆಲೋಚಿಸದೆ ಅದರೊಳಗೇ ಆಸ್ಥೆಯಿಂದಿರುವುದನ್ನು ಬಿಂಬಿಸಿದೆ. 'ಚಪ್ಪಲಿಗಳು' ಕತೆಯ ಶಬೀರ, 'ಚಂದ್ರಗಿರಿ ತೀರದಲ್ಲಿ' ಕಾದಂಬರಿಯ ನಾದಿರಾಳ ಗಂಡ ರಶೀದ್ ಈ ನೆಲೆಯಲ್ಲಿ ಪ್ರಗತಿ ಪರವಾಗಿ ಆಲೋಚಿಸುವುದನ್ನು ಕಾಣಬಹುದು.

'ಸುಳಿ' ಕಾದಂಬರಿಯಲ್ಲಿ ಮುಮ್ಮೊಟಿ ಹಣಗಳಿಸಿ ಊರಿಗೆ ಹಿಂದಿರುಗಿ ಬಂದಾಗ ತನ್ನ ತಾಯಿ ಮತ್ತು ಹೆಂಡತಿಗೆ 'ಬುರ್ಖಾ' ಧರಿಸಿಕೊಳ್ಳಲು ಕಡ್ಡಾಯ ಮಾಡುತ್ತಾನೆ. ಬಡತನದ ನೆಲೆಯಲ್ಲಿದ್ದಾಗ ಕಾಡದ ಸಮಸ್ಯೆ ಶ್ರೀಮಂತ ನೆಲೆಗೆ ಬರುತ್ತಿದ್ದಂತೆ ಗಂಡಸರ ಧೋರಣೆ ಬದಲಾಗುವುದರ 'ಸುಳಿ' ಇಲ್ಲಿದೆ. ಬಡತನದ ಎಲ್ಲಾ ಕಹಿಯನ್ನು ಅನುಭವಿಸಿ ಬಂದ ಉಮ್ಮಾಲಿ ಮಗನಿಗೆ "ಎಲ್ಲವನ್ನೂ ಮರೆ ಮಾಡುವ ಶಕ್ತಿಯುಳ್ಳ ಒಂದು ವಸ್ತು! ಹರಿದ ಸೀರೆ ಉಡುವಾಗಲೆಲ್ಲಾ ಇಂತಹದೊಂದು ಕವಚ ಬೇಕೂಂತ ನನಗೂ ಅನ್ನಿಸುತ್ತಿತ್ತು. ನೀನು ಇದನ್ನು ತಂದದ್ದು ಒಳ್ಳೆಯದಾಯಿತು!"[೨೨] ಎಂಬಲ್ಲಿ ಅದರ ನಿರಾಕರಣೆಗಿಂತ ಬಡವರಿಗೆ ಅದರಿಂದಾಗ ಬಹುದಾದ ಅನುಕೂಲಗಳೆಡೆ ಗಮನ ಸೆಳೆದಂತೆ ಮೇಲು ನೋಟಕ್ಕೆ ಅನಿಸಿದರೂ ಬಡತನದ ಕರಾಳತೆಯನ್ನು ತೆರೆದಿಟ್ಟಿವೆ. ಸಾಮಾನ್ಯ ಜನ ತಮ್ಮ ಬದುಕಿನ ಮೇಲ್ಮಟ್ಟವನ್ನು ಉಳ್ಳವರ ನೆಲೆಯ ಅನುಕರಣೆಯಲ್ಲೇ ಒಂದಾಗಿಸಿಕೊಳ್ಳುವುದರಿಂದ ಸಂಪ್ರದಾಯದ ಹೊಂದಾಣಿಕೆಗೆ ಇಂಥಾ ಮನಸ್ಸುಗಳು ಹಾತೊರೆಯುತ್ತವೆಂಬ ಒಳಸುಳಿಯನ್ನು ನೀಡಿದ್ದಾರೆ. ಹಾಗೆಯೇ ಬುರ್ಕಾ ಬದುಕಿನ ಅಂತಸ್ತಿನ ಸಂಕೇತವಾಗಿರುವುದನ್ನು ಬಿಂಬಿಸಿದೆ.

ಈ ಹಿನ್ನೆಲೆಯಲ್ಲಿ ಗಮನಿಸಿದಾಗ ಇಸ್ಲಾಂ ಧಾರ್ಮಿಕ ನೆಲೆಯ ವಿಚಾರಗಳು ಪುರುಷರ ಸ್ವಾರ್ಥದ ನೆಲೆಯಲ್ಲಿ ಭಿನ್ನ ವ್ಯಾಖ್ಯಾನಗಳನ್ನು ಪಡೆದುಕೊಂಡಿರುವುದನ್ನು ಕಾಣಬಹುದು. ಇದು ಧರ್ಮಾಚರಣೆಯ ಸಂಕೇತಕ್ಕಿಂತ ಪುರುಷರು ಹೆಂಗಸರನ್ನು ತಮ್ಮ ಹಿಡಿತದಲ್ಲೇ ಅಡಗಿಸಿಕೊಳ್ಳಲು ಮಾಡಿಕೊಂಡಿರುವ ವ್ಯವಸ್ಥೆಯಾಗಿದೆ. ನಗ್ನತೆಯ ಹಿನ್ನೆಲೆಯಲ್ಲಿ ರೂಪುಗೊಂಡಿರುವ ನಿಯಮದ ಅರ್ಥವ್ಯಾಪ್ತಿಯನ್ನು ತಿರುಚಿ ಸಂಕುಚಿತಗೊಳಿಸಿ ಆ ಮೂಲಕ ಸ್ತ್ರೀ ಶೋಷಣೆ ಆವರಣಗಳನ್ನು ಭದ್ರಗೊಳಿಸಿಕೊಂಡಿದೆ. ಇಂಥ ಸಮಸ್ಯೆಗಳ

ಮೂಲಕ ಎಳೆಯನ್ನು ಬಿಡಿಸಿ, ಗಂಭೀರವಾದ ಪ್ರಶ್ನೆಗಳನ್ನೇ ಲೇಖಕಿ ಎತ್ತುವುದರ ಮೂಲಕ ಇಂಥ ಪದ್ಧತಿಗಳನ್ನು ವಿರೋಧಿಸುತ್ತಾರೆ. ಅವರ ಆತ್ಮಕಥೆಯಲ್ಲಿ "ಪರ್ದಾ ದೇಹದ ಮುಸುಕು ಮಾತ್ರವಲ್ಲ, ಮನಸ್ಸಿನ ಮುಸುಕು ಆಗಿದೆ" ಎಂಬಲ್ಲಿ ಅವರ ಧೋರಣೆ ಸ್ಪಷ್ಟವಾಗಿ ಗೋಚರಿಸಿದೆ. ಇಸ್ಲಾಂನ ಸಂಪ್ರದಾಯದ ಹಿಡಿತ ಹೆಣ್ಣು ಮತ್ತು ಗಂಡಿನ ಮೇಲೆ ಎಷ್ಟು ಪ್ರಬಲವಾಗಿದೆ ಎಂಬುದನ್ನು ಈ ಕೆಳಗಿನ ಘಟನೆಗಳ ಹಿನ್ನೆಲೆಯಲ್ಲಿ ಸೂಕ್ಷ್ಮವಾಗಿ ಕಾಣಬಹುದು.

ಇಸ್ಲಾಂ ಧರ್ಮದಲ್ಲಿನ ಸಂಪ್ರದಾಯದಂತೆ ಮದುವೆಗೆ ಪೂರ್ವದಲ್ಲಿ ಗಂಡು ಹೆಣ್ಣು ಪರಸ್ಪರ ನೋಡುವಂತಿಲ್ಲ ಎಂಬುದನ್ನು 'ವಜ್ರಗಳು' ಕಾದಂಬರಿಯಲ್ಲಿ ಪ್ರಸ್ತಾಪಿಸಿರುವುದನ್ನು ಗಮನಿಸಬಹುದು. ಕಾದಂಬರಿಯ ನಾಯಕಿ ನಫೀಸಾ ಹಾಗೂ ಬದ್ರುದ್ದೀನರ ವೈವಾಹಿಕ ಸಂಬಂಧವೇ ಇದಕ್ಕೆ ಸಾಕ್ಷಿ. ಇಲ್ಲಿ ವಿವಾಹಕ್ಕೆ ಪೂರ್ವದಲ್ಲಿ ಗಂಡು ಹೆಣ್ಣನ್ನು ಪರಸ್ಪರ ನೋಡಬಾರದು ಎಂಬ ಸಂಪ್ರದಾಯಕ್ಕೆ ಕಟ್ಟು ಬಿದ್ದು ಬದ್ರುದ್ದೀನನ ಪೋಷಕರೇ ನಫೀಸಾಳನ್ನು ಹುಡುಕಿ ನಿಖಾ ಮಾಡುತ್ತಾರೆ. ಇಲ್ಲಿ ಈ ಸಂಬಂಧ ಮುರಿದು ಬೀಳಲು ಸಂಪ್ರದಾಯವೇ ಮೂಲ ಕಾರಣವಾಯಿತೆನ್ನಬಹುದು. ಹೇಗೆಂದರೆ ಮುಂಬೈನಂಥ ನಗರದಲ್ಲಿ ಬೆಳೆದು ತನ್ನದೇ ಆದ ಕಲ್ಪನೆಯ ಲೋಕಗಳನ್ನು ಸೃಷ್ಟಿಸಿಕೊಂಡು ಕನಸು ಕಾಣುತ್ತಿದ್ದ ಬದ್ರುದ್ದೀನ್‌ನಿಗೆ ಗ್ರಾಮೀಣ ಪರಿಸರದಲ್ಲಿ ಬೆಳೆದು ಆಧುನಿಕ ವಿದ್ಯಮಾನಗಳಿಂದ ದೂರವಿರುವ ಕಪ್ಪಾದ ನಫೀಸಾಳನ್ನು ನೋಡಿದಾಗ ಸಹಜವಾಗಿ ಅತ್ಯಂತ ನಿರಾಸೆಯಾಗುತ್ತದೆ. ಹೆಣ್ಣಿಗಾಗಲಿ, ಅಥವಾ ಗಂಡಿಗಾಗಲಿ ತಾನು ಮದುವೆಯಾಗುವ ಹುಡುಗ ಅಥವಾ ಹುಡುಗಿಯ ಬಗ್ಗೆ ತಮ್ಮದೇ ಆದ ಕನಸುಗಳಿರುತ್ತವೆ. ಈ ಹಿನ್ನೆಲೆಯಲ್ಲಿ ಅವರು ಕನಸು ಇಷ್ಟಗಳ ಕಡೆ ಒತ್ತಾಸೆ ನೀಡದ ಸಂಪ್ರದಾಯದ ಬಿಗಿ ಹಿಡಿತ ಎಷ್ಟೋ ಜನರ ವೈವಾಹಿಕ ಬದುಕನ್ನೇ ನಿಸ್ಸಾರಗೊಳಿಸಲು ಕಾರಣವಾಗುತ್ತವೆ.



ಮುಸ್ಲಿಂ ಸಮುದಾಯಗಳಲ್ಲಿ ಮೂರು 'ತಲಾಖ್'ನ ಮೂಲಕ ಸುಲಭವಾಗಿ ಕಾರಣಗಳೇ ಇಲ್ಲದೆ ಗಂಡ ಹೆಂಡತಿ ಸಂಬಂಧಗಳಿಂದ ಹೊರ ಬರಬಹುದು. ಹಾಗಾಗಿಯೇ ಬದ್ರುದ್ದೀನ್ ನಫೀಸಾಳಿಗೆ ತಲಾಖ್ ಕೊಟ್ಟು ದೂರ ಇರಿಸುವುದನ್ನು ಕಾಣುತ್ತೇವೆ. ತನ್ನ ಬೇಡಗಳನ್ನು ಬಹಳ ಸುಲಭವಾಗಿ ಮುಸ್ಲಿಂ ಪುರುಷ ನಿರಾಕರಿಸಿದರೂ ಈ ಸಂಪ್ರದಾಯದ ಘೋರವಾದ ಪರಿಣಾಮವನ್ನು ಎದುರಿಸುವವಳು ಹೆಣ್ಣು ಎಂಬುದನ್ನು ಮನಗಾಣಬೇಕು. ಈ ಕಾರಣವಾಗಿ ತನ್ನ ಯಾವುದೇ ತಪ್ಪಿಲ್ಲದೆ ಕಠೋರವಾದ ಶಿಕ್ಷೆ ಅನುಭವಿಸಿದವಳೂ ನಫೀಸಾ. ಇದು ಅವಳ ಬದುಕನ್ನೇ ದುರಂತವಾಗಿಸುವುದನ್ನು ಕಾದಂಬರಿಯಲ್ಲಿ ಕಾಣುತ್ತೇವೆ.

ಇಸ್ಲಾಂನ ಸಂಪ್ರದಾಯದ ಒತ್ತಡಗಳು ಹೆಣ್ಣಿನ ಬದುಕು ಮತ್ತು ಮನಸ್ಸಿನ ಮೇಲೆ ಆಗಾಧ ಪರಿಣಾಮ ಬೀರುತ್ತವೆ. ಇಲ್ಲಿನ ಕೆಲವು ಮಾತುಗಳು ಅದರ ಒಳನೋಟವನ್ನು ತೆರೆದಿಟ್ಟಿವೆ.

"ವಜ್ರಗಳು" ಕಾದಂಬರಿಯಲ್ಲಿ ಬರುವ ಉಸ್ಮಾನ್ ಹಾಜಿ ಸತ್ತಾಗ ನಫೀಸಾಳ ತಾಯಿ ಹಲೀಮ ಹೇಳುವ "ನಫೀಸಾ ನಾಲ್ಕು ತಿಂಗಳು 'ಇದ್ದತ್' ಇರುವುದು ತಪ್ಪಿತು. ನಾಲ್ಕು ತಿಂಗಳು ಬಿಳಿ ಬಟ್ಟೆಯುಟ್ಟು ಕತ್ತಲೆ ಕೋಣೆಯ ಮೂಲೆಯಲ್ಲಿ ಕೂರುವುದು ಸುಲಭವೇನಲ್ಲ!" ಎಂಬ ಮಾತುಗಳಲ್ಲಿ ಸಂಪ್ರದಾಯದ ಒತ್ತಡ, ಅದನ್ನು ಅನುಭವಿಸುವ ಹೆಣ್ಣಿನ ಸ್ಥಿತಿಯ ಅನಾವರಣವಿದೆ.

ಹಾಗೆಯೇ ತಾನು ಹೊತ್ತು-ಹೆತ್ತು ಸಾಕಿದ ಮಗನ ಮದುವೆಯನ್ನು ನೋಡಲು ಹಾತೊರೆಯುವ

ಹೆಣ್ಣು ಜೀವವನ್ನು ಸಂಪ್ರದಾಯ ಹೇಗೆ ಕಟ್ಟಿಹಾಕಿದೆ, ತನ್ನ ಮಗನ ಮದುವೆಗೆ ಸಂಬಂಧಪಡುವ ಮತ್ತು ಸಂಬಂಧಪಡದ ಎಲ್ಲರೂ ಭಾಗವಹಿಸುವ ಅವಕಾಶವಿದ್ದು ತಲಾಖ್‌ನ ಕಾರಣದಿಂದಾಗಿ 'ಹೆತ್ತ ತಾಯಿ' ಆ ಸಮಾರಂಭದಿಂದ ದೂರ ಉಳಿಯಬೇಕಾಗಿ ಬಂದದ್ದು ಸಹಿಸಲಾಗದ ನೋವಾಗಿದೆ. ಇಂಥದ್ದೇ ಸಂದರ್ಭವನ್ನು ನಾವು ಸಾರಾ ಅವರ 'ಗೋಡೆ' ಕಥೆಯಲ್ಲಿಯೂ ಕಾಣಬಹುದಾಗಿದೆ. ಇಲ್ಲಿ ತಲಾಖ್ ಮೂಲಕ ಕೊಡುವ ಬಿಡುಗಡೆ ಗಂಡು ಹೆಣ್ಣಿನ ದಾಂಪತ್ಯ ಸಂಬಂಧಕ್ಕೆ ಮಾತ್ರ ಸೀಮಿತವಾಗಿರದೆ ದಾಂಪತ್ಯ ನೆಲೆಯ ಒಟ್ಟು ಸಂಬಂಧವನ್ನು ಕಿತ್ತುಕೊಳ್ಳುವಂಥದ್ದಾಗಿದೆ. ವ್ಯವಸ್ಥೆಯಲ್ಲಿ ಹುದುಗಿಹೋಗಿರುವ ಹೆಣ್ಣು-ಗಂಡಿನ ತಾರತಮ್ಯ ಅಥವಾ ಲಿಂಗ ಅಸಮಾನತೆಯ ಸ್ವರೂಪವನ್ನು ವಿಶ್ಲೇಷಿಸಿದೆ. ಅಸಹಾಯಕತೆ, ನೋವು, ರೋಷ ಇಂಥ ಒತ್ತಡಗಳು ಗಂಡಿನ ಬಗೆಗೆ ದ್ವೇಷವನ್ನು ಹುಟ್ಟುಹಾಕಿದರೆ ಆಶ್ಚರ್ಯವೇನಿಲ್ಲ. ಕಾರಣ ಗಂಡಿನ ಬಿಡುಗಡೆಯು ಹೆಣ್ಣಿಗೆ ಬಂಧನದ ಬಲೆಯಾಗಿ ರೂಪುಗೊಂಡಿರುವುದು. ಇದಕ್ಕೆ ನಿದರ್ಶನವಾಗಿ ಇಲ್ಲಿನ ತಾಯಿ ಹೃದಯಗಳು ಧ್ವನಿಗೈಯ್ದಿವೆ.

'ಧ್ವನಿಯಿಲ್ಲದ ನೋವುಗಳು' ಕತೆಯಲ್ಲಿ ಉಸ್ತಾಫರಿಂದ ತಲಾಖ್ ಪತ್ರ ಬಂದ ಸಂದರ್ಭದಲ್ಲಿ ಜರೀನಾಳ ತಾಯಿ ಮದರಂಗಿ ಕೊರಪಾಳಿಗೆ ಹೇಳುವ ಮಾತನ್ನು ಇಲ್ಲಿ ಸ್ಮರಿಸಬಹುದು. : "ನನ್ನಳಿಯ ಸತ್ತುಹೋದ, ಕೊರಪಾಳು ಜರೀನಾಗೆ ಮದರಂಗಿ ಬೇಡ." ನಫೀಸಾಳ ಮಗ ಮದುವೆಗೆ ಕರೆಯಲು ಬಂದು ಅಜ್ಜಿಯ ಆಶೀರ್ವಾದ ಪಡೆಯುವಾಗ ಆಕೆ : "ನಿನ್ನ ತಂದೆಯಂತೆ ಮಾಡಬೇಡ, ಒಮ್ಮೆ ಕಟ್ಟಿಕೊಂಡವಳನ್ನು ಕೊನೆಯವರೆಗೂ ಬಾಳಿಸು" ಎಂಬ ಮಾತಿನಲ್ಲಿ ದಾಂಪತ್ಯ ಸಂಬಂಧದ ತುಡಿತ ಹೆಣ್ಣಿನ ಮನದಾಳದ ನೋವುಗಳು ಅಭಿವ್ಯಕ್ತಗೊಂಡಿದೆ.

ಇಲ್ಲಿ ಕಂಡು ಬರುವ ಮಹಮದ್ ಹಾಜಿ, ಅಬ್ದುಲ್ಲ ಸಾಹೇಬ, ಹಸ್ಮಾನ ಹಾಜಿ ಮೊದಲಾದ ಸಂಸ್ಕಾರ ಹೊಂದಿದ್ದ ಪುರುಷ ಪಾತ್ರಗಳು ಕೂಡ ವ್ಯವಸ್ಥೆಯ ಹಿಡಿತದಿಂದ ಹೊರಬರಲಾರದೆ ಮೌನ ವಹಿಸುವ ಮೂಲಕ ತಮ್ಮ ಅಸಹಾಯಕತೆಯನ್ನು ಬಿಂಬಿಸಿವೆ. ಅಂದರೆ ಸತ್ಯವನ್ನು ಹೇಳಲೂ ಹಿಂಜರಿಯುವಷ್ಟರ ಮಟ್ಟಿಗೆ ಧಾರ್ಮಿಕ ಕಟ್ಟುಪಾಡುಗಳು ಇರುವುದಾದರೆ ಇಂಥಲ್ಲಿ ಧರ್ಮ ಪ್ರಶ್ನಾರ್ಹವಾಗುತ್ತದೆ. ಅಂತಹ ಅನೇಕ ಧಾರ್ಮಿಕ ತೊಡಕುಗಳು ಇಲ್ಲಿ ಎತ್ತಿಹಿಡಿಯಲ್ಪಟ್ಟಿರುವುದನ್ನು ನಾವು ಗಮನಿಸಬಹುದು.

ದಾಂಪತ್ಯ ಸಂಬಂಧಗಳ ಉಳಿವಿಗಾಗಿ ಹೆಣ್ಣಿನ ಮನೋಧರ್ಮ ಜೀವನಮುಖಿಯಾಗಿದ್ದು ತಾಳ್ಮೆ, ಸಹನೆ ವಾತ್ಸಲ್ಯದಿಂದ ಜೀವನವನ್ನು ಎದುರುಗೊಳ್ಳುತ್ತಾಳೆ. ಸ್ತ್ರೀಯ ಅಸಹಾಯಕತೆ, ನೋವು, ಸಮಾಜ ಅವಳನ್ನು ಕಾಣುವ ದೃಷ್ಟಿ ಇವೆಲ್ಲವುಗಳನ್ನೂ ಮೀರಿ ಮಾನವೀಯತೆಯನ್ನು ಮೆರೆಯಲು ಹೆಣ್ಣಿಗೆ ಸಾಧ್ಯವಾಗುವುದಾದರೆ, ಪುರುಷನಿಗೇಕೆ ಅದು ಸಾಧ್ಯವಾಗುವುದಿಲ್ಲ? ಸಂಯಮದ ಜೀವನಕ್ಕೆ ಕುಟುಂಬದ ಎರಡು ಊರೆಗೋಲುಗಳಂತಿರುವ ಗಂಡು ಹೆಣ್ಣುಗಳ ಹೊಂದಾಣಿಕೆಯ ಅಗತ್ಯವಿರುತ್ತದೆ. ಅದನ್ನು ಹೆಣ್ಣು ಗಂಡಿನಲ್ಲಿ ನಿರೀಕ್ಷಿಸುವುದು ಸಹಜವೇ ಆಗಿದೆ.

ಮುಸ್ಲಿಂ ಪುರುಷ - ಬಡತನ, ಸಂಪ್ರದಾಯ, ಆಚರಣೆ, ನಿರುದ್ಯೋಗ, ವರ್ಗ ಅಸಮಾನತೆಯಲ್ಲಿ ನರಳಿದರೆ; ಮುಸ್ಲಿಮ್ ಮಹಿಳೆ ಇವೆಲ್ಲವನ್ನೂ ಒಳಗೊಂಡಂತೆ ಗಂಡಿನ ಶೋಷಣೆ, ಅಹಂಕಾರ, ಲಿಂಗ ಅಸಮಾನತೆ, ಧಾರ್ಮಿಕ ಮತ್ತು ಸಾಮಾಜಿಕ ನಿಯಮಗಳ ಮೇಲಾಟದಲ್ಲಿ ಸಿಕ್ಕು ನರಳುತ್ತಾಳೆ.

ಮುಸ್ಲಿಂ ಸಂಪ್ರದಾಯದಲ್ಲಿ ಮದುವೆ ಸಂಬಂಧದಲ್ಲಿ ಹೆಣ್ಣಿಗೆ ಕೊಡುವ ಕಿವಿಯ 'ಆಲಿಕತ್'ಗಳು ಸಾಂಪ್ರದಾಯಿಕವಾಗಿ ಪ್ರಮುಖವಾದ ಸ್ಥಾನವನ್ನು ಪಡೆದಿವೆ. ಇದನ್ನು ಗಂಭೀರವಾಗಿ ಗಮನಿಸಿದರೆ ಇತರ ಸಮುದಾಯಗಳಲ್ಲಿ ಗಂಡಿನ ಮನೆಯವರು ತರುವ ಮಾಂಗಲ್ಯ ಮತ್ತು ಉಂಗುರ ಪಡೆದಿರುವ ಸ್ಥಾನವನ್ನು ಮುಸ್ಲಿಂ ಸಮುದಾಯದಲ್ಲಿ ಕಿವಿಯ ಆಭರಣಗಳು ಹೊಂದಿವೆ. ಇವುಗಳನ್ನು ಕೊಡಿಸಲಿಕ್ಕಾಗಿಯೇ ತಾಯಂದಿರು ಪಡುವ ಕಷ್ಟದ ನೆಲೆಗಳನ್ನು ಸಾರಾ ಅವರು ತಮ್ಮ ಕೃತಿಗಳಲ್ಲಿ ಮನಮಿಡಿಯುವಂತೆ ಚಿತ್ರಿಸಿದ್ದಾರೆ. ಅವುಗಳನ್ನು ಉಳಿಸಿಕೊಳ್ಳಲು ಹೆಣ್ಣು ಮಕ್ಕಳು ಪಡುವ ಪರಿಶ್ರಮ, ಯಾತನೆ ಅಸಹನೀಯವೆನಿಸುತ್ತದೆ. ಈ ಹಿನ್ನೆಲೆಯಲ್ಲಿ 'ಸಹನಾ' ಕಾದಂಬರಿಯ ಸರೀನ, 'ನಿಯಮ-ನಿಯಮಗಳ ನಡುವೆ', ಕಥೆಯ 'ಜೊಹರಾ' ಪಾತ್ರಗಳಿಂದ ಪ್ರಾತಿನಿಧಿಕವಾಗಿ ವಿಶ್ಲೇಷಿಸಲಾಗಿದೆ.

ಈ ಹಿನ್ನೆಲೆಯಲ್ಲಿ ಮಗಳ ಬದುಕನ್ನು ಹಸನುಗೊಳಿಸಲು 'ಸಹನಾ' ಕಾದಂಬರಿಯ ನಸೀಮಳ ತಾಯಿ ಸಕೀನ ಮಾಡಿದ ಪ್ರಯತ್ನ ಒಂದು ರೀತಿಯದಾದರೆ, ನಿಯಮ ನಿಯಮಗಳ ನಡುವೆ ಕಥೆಯ ಜೊಹರಾಳ ನೋವು ಮತ್ತೊಂದು ನೆಲೆಯದು. ಸಕೀನ ಹಗಲು-ರಾತ್ರಿಯೆನ್ನದೆ ಮದುವೆ ಬಾಣಂತನದ ಮನೆಗಳಲ್ಲಿ ದುಡಿದು ಮಗಳ ಮದುವೆಗಾಗಿ ಕಿವಿಗೆ ಆಭರಣ ಮಾಡಿಸಲು ಹೊಟ್ಟೆ ಬಟ್ಟೆ ಕಟ್ಟಿ ಮೂರು ಕಾಸು ಉಳಿಸಿ ಮೈದೂವಿನಲ್ಲಿ ಚೀಟಿ ಹಾಕಿದರೆ ಅದನ್ನೆಲ್ಲಾ ತೆಗೆದುಕೊಂಡು ಪರಾರಿಯಾಗುತ್ತಾನೆ. ಇವುಗಳನ್ನು ಕೂಡಿಸುವ ಪ್ರಯತ್ನ ಮತ್ತೆ ನಡೆಯುತ್ತದೆ. 'ನಿಯಮ ನಿಯಮಗಳ ನಡುವೆ' ಕತೆಯ ಜೊಹರಾ ಶಾಲೆಯ ಮುಖ ಕಾಣದೆ ಚಿಕ್ಕಂದಿನಿಂದ ಧಣಿಯರ ಮನೆಯಲ್ಲಿ ಚಾಕರಿ ಮಾಡಿ ಅವರ ಮಕ್ಕಳ ಕಕ್ಕಸ್ಸು ತೊಳೆದು ಒಡತಿಯಿಂದ ಆಗಾಗ ಬೈಗುಳ, ಏಟು ತಿಂದು ಸಂಪಾದಿಸಿದ ಕಿವಿಯ ಆಭರಣಗಳನ್ನು ಗಂಡ ಶಾಫಿ ಕೇಳಿದಾಗ ಕೊಡಲಿಲ್ಲ ಎಂಬ ಕಾರಣಕ್ಕೆ ತಲಾಖ್ ಪಡೆದು ಮುಂದೆ ಆಗುವ ಬೆಳವಣಿಗೆಯಿಂದ ಸಾವಿಗೆ ಶರಣಾಗುತ್ತಾಳೆ.

ಇಲ್ಲಿ ಕಾರಣಗಳನ್ನು ಗಮನಿಸಿದಾಗ, ಹೆಂಗಸರು ಮದುವೆ ಆಗಲು ಸಂಪ್ರದಾಯವಾಗಿ ಬೇಕಾಗುವ ಕಿವಿಗೆ ಧರಿಸುವ ಆಭರಣಗಳ ಮಹತ್ವ ಹಾಗೂ ಪರಿಣಾಮಗಳನ್ನು ಯೋಚಿಸಿದರೆ ಧರ್ಮ, ಸಂಪ್ರದಾಯ ಮತ್ತು ಪುರುಷರ ಹಿಡಿತ ಸ್ಪಷ್ಟವಾಗಿ ಗೋಚರಿಸುತ್ತದೆ. ಇಂಥ ಸಮಸ್ಯೆಗಳು ಭಿನ್ನ ಭಿನ್ನ ನೆಲೆಯಲ್ಲಿ ಮುಸ್ಲಿಂ ಸಮುದಾಯದ ಹೆಣ್ಣು ಮಕ್ಕಳ ಮೇಲೆ ನಡೆಯುತ್ತವೆಯಾದರೂ ಆಗುವ ಪರಿಣಾಮದ ತೀವ್ರತೆ ಮಾತ್ರ ಅಧಿಕವಾದುದು ಎನಿಸುತ್ತದೆ.

ಈ ನೆಲೆಯ ಹೊಸ ಚಿಂತನೆಯನ್ನು ಸಾರಾ ಅವರ 'ಪಯಣ ಮತ್ತು ಇತರ ಕತೆಗಳು' ಕಥಾ ಸಂಕಲನದ 'ಹಳೆ ಬೇರು ಹೊಸ ಚಿಗುರು' ಕತೆಯಲ್ಲಿ ಗಮನಿಸಬಹುದು. ಇಸ್ಲಾಂ ಸಂದರ್ಭದಲ್ಲಿ ಸಂಪ್ರದಾಯವನ್ನು ಮೀರುವುದು ಎಂದರೆ ಒಂದು ಸಾಧನೆಯೇ ಸರಿ. ಕತೆಯಲ್ಲಿ ಬೊಂಬಾಯಿಯಲ್ಲಿ ವಾಸ್ತವ್ಯ ಹೂಡಿರುವ ಹುಸೈನ್ ಮತ್ತು ಅವರ ಕುಟುಂಬ ಹೊಸ ಚಿಗುರಿನ ಸಂಕೇತವಾದರೆ ಹುಸೈನ್ ತಂದೆ ಯುಸೂಫ್ ಸಾಬರು ಹಾಗೂ ಬೀಗರಾದ ಮೈದೀನ್ ಹಾಜಿಯವರು ಹಳೆ ಬೇರಿನ ಸಂಕೇತ. ಹುಸೈನ್ ಮಗಳು ನೂರುನ್ನಿಸಾ ದೂರದರ್ಶನದಲ್ಲಿ ಅಭಿನಯಿಸುತ್ತಿರುವ ಸುದ್ದಿ ತಿಳಿದು ಬೀಗರು ಪರಸ್ಪರ ಒಬ್ಬರ ಮೇಲೆ ಒಬ್ಬರು ಗೂಬೆ ಕೂರಿಸಿಕೊಂಡು ಹರಿಹಾಯುವುದು ಅವರಿಬ್ಬರಿಗೆ ಆಗಿರುವ ಆಘಾತವನ್ನು ಚಿತ್ರಿಸಿದೆ. ಇಸ್ಲಾಂ ಸಂಪ್ರದಾಯದ ಪ್ರಕಾರ ಹೆಣ್ಣು ಮಕ್ಕಳು ಪರ್ದಾ ಧರಿಸದೆ ಹೊರಗೆ ಕಾಲಿಡುವಂತಿಲ್ಲ. ಜೊತೆಗೆ ಪರಪುರುಷನಿಗೆ ತಮ್ಮ

ಮುಖದರ್ಶನ ಮಾಡುವಂತಿಲ್ಲ. ಹೀಗಿರುವಾಗ ಮೊಮ್ಮಗಳು ನೂರಿ ದೂರದರ್ಶನದಲ್ಲಿ ಕಾಣಿಸಿಕೊಳ್ಳುವುದು ದೊಡ್ಡ ಆಘಾತವೆಂದೇ ಭಾವಿಸುತ್ತಾರೆ. ಸಂಪ್ರದಾಯವನ್ನೇ ಮುಸ್ಲಿಮರ ಸಾರ್ವತ್ರಿಕ ಜೀವನ ಮೌಲ್ಯವೆಂದು ಪ್ರತಿಪಾದಿಸುವ ಯೂಸೂಫರಂತವರಿಗೆ ಮೊಮ್ಮಗಳು ಟಿ.ವಿ. ಧಾರಾವಾಹಿಯಲ್ಲಿ ಕಾಣಿಸಿಕೊಳ್ಳುತ್ತಿದ್ದಾಳೆ ಎಂಬುದೇ ಕೋಪಕ್ಕೆ ದಾರಿಯಾಗುತ್ತದೆ. ಈ ನೆಲೆಯಲ್ಲಿ ಮೊಮ್ಮಗಳು ನೂರುನ್ನಿಸಾಳಿಗೆ ವರವನ್ನು ಹುಡುಕಿ ನಿಖಾ ಮಾಡಿಸುವ ಸಲುವಾಗಿ ಮಗ ಹುಸೈನನ್ನು ಕಂಡು ಬರಲು ಬೊಂಬಾಯಿಗೆ ಹೋಗುವುದನ್ನು ಕತೆಯಲ್ಲಿ ಕಾಣಬಹುದು. ಬೊಂಬಾಯಿ ನಗರಕ್ಕೆ ಕಾಲಿರಿಸಿದಾಗ ಮುಸ್ಲಿಂ ಸಂಪ್ರದಾಯಕ್ಕೆ ಅಂಟಿಕೊಂಡಿದ್ದ ಯೂಸೂಫ್ ಸಾಬರಿಗೆ ನಗರ ನಾಗರಿಕತೆಯ ಬಗ್ಗೆ ತಿರಸ್ಕಾರ ಭಾವ ಮೂಡುತ್ತದೆ. ಅಲ್ಲಿ ಆಧುನಿಕ ವಿದ್ಯಮಾನಗಳಿಗೆ ತಕ್ಕಂತೆ ಬದಲಾಗಿರುವ ಮಗನ ಹಾಗೂ ಸಂಸಾರದ ರೀತಿಯನ್ನು ನೋಡಿ ಯೂಸೂಫರಿಗೆ ದಿಕ್ಕು ಕಾಣದಂತಾಯಿತು. ಊರಿನಲ್ಲಿ ಬುರ್ಕಾ ಹಾಕಿಕೊಂಡು ಓಡಾಡುತ್ತಿದ್ದ ಸೊಸೆ ಈಗ ತೋಳು ರಹಿತ ರವಿಕೆ ತೊಟ್ಟು ತೆಳ್ಳನೆಯ ಸೀರೆಯುಟ್ಟು ಅಲಂಕಾರ ಮಾಡಿಕೊಂಡು ಒಳ-ಹೊರಗೆ ಓಡಾಡುತ್ತಿದ್ದಾಳೆ ಹಾಗೂ ಆಕೆ ಹೆಣ್ಣು ಮಕ್ಕಳನ್ನು ಶೃಂಗರಿಸುವ ಅಂಗಡಿಯನ್ನು ತೆರೆದಿರುವುದು ಅವರಿಗೆ ಇನ್ನೊಂದು ಆಘಾತ.

ಅಲ್ಲದೆ ಮೊಮ್ಮಗಳು ತನಗೆ ಬೇಕಾದ ವರವನ್ನು ತಾನೇ ಆಯ್ಕೆ ಮಾಡಿಕೊಂಡಿದ್ದಾಳೆ ಎಂಬುದು ಯೂಸೂಫರಿಗೆ ಆಶ್ಚರ್ಯ ಮತ್ತು ಆಘಾತಗಳಾದರೂ ಬಂದ ದಾರಿಗೆ ಸುಂಕವಿಲ್ಲವೆಂಬಂತೆ ಮಗ ಹುಸೈನನ ಬಳಿ ಮೊಮ್ಮಗಳು ನೂರುನ್ನಿಸಾಗೆ ವರಗಳನ್ನು ನೋಡಿರುವ ವಿಚಾರವನ್ನು ಮುಂದಿಡುತ್ತಾನೆ. ಆಗ ಹುಸೈನನು 'ಅದು ಹೇಗೆ ಅಬ್ಬಾ? ಅವಳು ತನ್ನ ಪದವಿ ಮುಗಿಸದೆ ಮದುವೆ ಮಾಡಲು ಒಪ್ಪುತ್ತಾಳೆಯೇ? ಅದೂ ಅಲ್ಲದೆ, ಮೊದಲು ಹುಡುಗ ಹುಡುಗಿ ಪರಸ್ಪರ ನೋಡಿ ಒಪ್ಪಬೇಕು' ಎನ್ನುತ್ತಾನೆ. ಈ ನೆಲೆಯಲ್ಲಿ ಹುಸೈನ್‌ರ ಅಭಿಪ್ರಾಯ ಪ್ರಗತಿದಾಯಕವಾಗಿದ್ದು ಸಂಪ್ರದಾಯದ ವಿರುದ್ಧ ನೆಲೆಯಲ್ಲಿ ಪ್ರತಿಕ್ರಿಯಿಸದಂತಿದೆ.

ಹುಸೈನ್ ನೀಡುವ ವಿವೇಚನೆಯುಕ್ತ ಉತ್ತರಗಳು ಇಸ್ಲಾಂ ಸಂಪ್ರದಾಯ ಮತ್ತು ಧಾರ್ಮಿಕ ಅಂಧಶ್ರದ್ಧೆಯ ಮೇಲೆ ಬೆಳಕು ಚೆಲ್ಲಿ ಎಲ್ಲರನ್ನೂ ಧಾರ್ಮಿಕ ಸಂಪ್ರದಾಯದ ಆವರಣದೊಳಗೆ ಸೆಳೆದುಕೊಳ್ಳಲು ಮಾಡುವ ಯೂಸೂಫರ ಪ್ರಯತ್ನಕ್ಕೆ ಹುಸೈನ್ ಕಡಿವಾಣ ಹಾಕುತ್ತಾನೆ. "ಬೇರುಗಳಿನ್ನೂ ಹಳೆಯದಾಗಿ ಮಣ್ಣಿನಡಿಯಲ್ಲೇ ಇದ್ದರೂ ಚಿಗುರುಗಳು ಹೊಸದಾಗಿ ಚಿಗುರುತ್ತಾ ತನಗೆ ಇಷ್ಟ ಬಂದಂತೆ ಬೆಳೆಯುವುದು ಪ್ರಕೃತಿಯ ನಿಯಮ. ಆಹಾರದ ಸರಬರಾಜು ಮಾತ್ರ ಬೇರುಗಳ ಕೆಲಸ. ಚಿಗುರುಗಳಿಗೆ ಮಾರ್ಗದರ್ಶನ ಮಾಡುವ ಪ್ರಯತ್ನವನ್ನು ಮಾಡಬಹುದು. ಆದರೆ ಚಿಗುರುಗಳ ಮೇಲೆ ಒತ್ತಡ ಹೇರಿದರೆ ಅವು ಕೆಲವೊಮ್ಮೆ ಮುರುಟಿಕೊಳ್ಳುತ್ತವೆ."[೨೮] ಮೊಮ್ಮಗಳು ತಮ್ಮ ಸಂಪ್ರದಾಯದ ಎಲ್ಲಾ ಬಂಧನಗಳನ್ನು ಕಳಚಿಕೊಂಡು ಹೋಗುತ್ತಿರುವುದಕ್ಕೆ ತಂದೆತಾಯಿ ಉತ್ತೇಜನವಿರುವುದನ್ನು ತಿಳಿದು ಕಂಗಾಲಾಗುತ್ತಾರೆ. ಮಗನ ಜಾತ್ಯಾತೀತ ಧೋರಣೆ, ಬದುಕಿಗೆ ಅನಿವಾರ್ಯವಾದ ಭಾವನೆಗಳಿಗೆ ಪ್ರಾಮುಖ್ಯತೆ ನೀಡಿ ವಿದ್ಯೆಯಿಂದ ಕೂಡಿದ ವಿನಯ, ಸಂಪತ್ತು, ಪದವಿಗೆ ಕೊಡುವ ಗೌರವ ಮತ್ತು ಹೆಣ್ಣು ಗಂಡು ಪರಸ್ಪರ ಮೆಚ್ಚಿ ವಿವಾಹವಾಗುವುದರ ಬಗೆಗೆ ಮುಕ್ತ ಒಲವು ತೋರುವುದು ಕಥೆಯ ಪ್ರಗತಿದಾಯಕ ಬೆಳವಣಿಗೆಯನ್ನು ಕಾಣಬಹುದು.

ಈ ಸಂಪ್ರದಾಯದ ಕಾರಣದಿಂದಲೇ ವಜ್ರಗಳು ಕಾದಂಬರಿಯ ನಫೀಸ ಬಲಿಪಶುವಾಗುವುದನ್ನು ಇಲ್ಲಿ ಸ್ಮರಿಸಬಹುದು. ಕತೆಯಲ್ಲಿನ ಹುಸೈನನ ಪಾತ್ರದ ಹಿಂದೆ ಲೇಖಕಿ ಸಾರಾ ಅವರ ಸಾಂಪ್ರದಾಯಿಕ

ವಿರೋಧಿ ಧೋರಣೆಯನ್ನು ಗ್ರಹಿಸಬಹುದು. ಈ ಕತೆ ಆಧುನಿಕತೆಗೆ ತೆರೆದುಕೊಂಡ ಮನಸ್ಸೊಂದು ಮೂಢನಂಬಿಕೆಗಳಿಗೆ ಹೇಗೆ ಪೆಟ್ಟು ಕೊಡುತ್ತದೆ ಎಂಬುದನ್ನು ಸಮರ್ಥವಾಗಿ ಅಭಿವ್ಯಕ್ತಿಸಿದೆ.

ಧರ್ಮ-ಧರ್ಮಗಳ ನಡುವಿನ ಭಿನ್ನತೆಗೆ ಒಂದು ತಾರ್ಕಿಕ ಸಂಬಂಧವಿದೆ. ಆಯಾಯ ಧರ್ಮದ ಪ್ರತಿಪಾದಕರ ಜೀವನ ದೃಷ್ಟಿ, ಬದುಕಿನ ಸಿದ್ಧಾಂತಗಳ ಹಿನ್ನೆಲೆ, ಅವರವರ ಅನುಯಾಯಿಗಳ ಗ್ರಹಿಕೆ ಇದರ ಹಿಂದೆ ಕೆಲಸ ಮಾಡುತ್ತಿರುತ್ತದೆ. ಧರ್ಮದ ವಿಶಾಲವಾದ ಅರ್ಥಗಳು ಮತಧರ್ಮದ ಚೌಕಟ್ಟಿನ ಒಳಗೆ ಸಿಲುಕಿ ಸಂಕುಚಿತವಾಗ ಹೊರಟಾಗ ಮನುಷ್ಯಧರ್ಮ ಅಥವಾ ಮಾನವೀಯತೆ ಸರ್ವನಾಶವಾಗುತ್ತದೆ. ಮನುಷ್ಯ-ಮನುಷ್ಯರ ನಡುವೆ ಮತಧರ್ಮದ ಗೋಡೆಗಳು ಭದ್ರವಾಗಿ ನಿಲ್ಲುತ್ತಾ ಹೋದಂತೆ ಮನುಷ್ಯ ತನ್ನೊಳಗೇ ತನಗರಿವಿಲ್ಲದಂತೆ ರಾಕ್ಷಸ ಪ್ರವೃತ್ತಿಗಳನ್ನು ಬೆಳೆಸಿಕೊಳ್ಳುತ್ತಾ ನಾಗರಿಕತೆಗೆ ಒಂದು ಶಾಪವಾಗಿ ಪರಿಣಮಿಸುತ್ತಾನೆ. ಯಾವುದೇ ಧರ್ಮದ ಮತವಾದರೂ ಪರಸ್ಪರ ಗೌರವಯುತವಾಗಿ ಸಹಬಾಳ್ವೆಯನ್ನು ಒಪ್ಪಿಕೊಂಡು ಒಂದಾಗಿ ಬದುಕಬೇಕಾದುದನ್ನು ಹೇಳುತ್ತದೆ. ಇದೇ ನಿಜವಾದ ಧರ್ಮದ ಆಶಯ ಅಥವಾ ಉದ್ದೇಶವಾಗಿರುತ್ತದೆ. ಆದರೆ ಚಾರಿತ್ರಿಕ, ಸಾಂಸ್ಕೃತಿಕ ಕಾರಣಗಳಿಂದಾಗಿ ಇಂದು ವಿಶ್ವದಾದ್ಯಂತ ಧರ್ಮ-ಧರ್ಮದ ನಡುವೆ ವಿಶ್ವಾಸ-ಅಪನಂಬಿಕೆಗಳು ಮನುಷ್ಯತ್ವವನ್ನು ಮೀರಿ ಅಟ್ಟಹಾಸಗೈಯುತ್ತಿದೆ. ಜಾಗತಿಕ ಮಟ್ಟದಲ್ಲಿ ಎಲ್ಲಾ ದೇಶಗಳು ಸಂಕೀರ್ಣಗೊಳ್ಳುತ್ತಾ ಚಿಕ್ಕ ಘಟಕಗಳಂತೆ ಕಾಣತೊಡಗಿವೆ. ಜೊತೆಗೆ ವೈಜ್ಞಾನಿಕ ಬೆಳವಣಿಗೆಯ ಕಾರಣದಿಂದ ಇಡೀ ಭೂಮಂಡಲವೇ ಒಂದು ಚಿಕ್ಕ ಗೋಳವಾಗಿ ಕಾಣಿಸುತ್ತಿರುವ ಸಂದರ್ಭದಲ್ಲಿ ಜಾತಿ, ವರ್ಗ, ವರ್ಣ, ಧರ್ಮಗಳು ಮನುಷ್ಯನನ್ನು ಇನ್ನಷ್ಟು ಸಂಕುಚಿತ ಪ್ರವೃತ್ತಿಗೆ ದೂಡುತ್ತಿವೆ. ಮನುಷ್ಯ ಭೌದ್ಧಿಕವಾಗಿ ಬೆಳೆದಷ್ಟು ಮಾನವೀಯವಾಗಿ ಸಂಕುಚಿತನಾಗಿದ್ದಾನೆ, ಜಾತಿ-ಧರ್ಮದ ಹೆಸರಿನಲ್ಲಿ ತನ್ನ ಸುತ್ತ ಭದ್ರ ಕೋಟೆಗಳನ್ನು ನಿರ್ಮಿಸಿಕೊಳ್ಳತೊಡಗಿದ್ದಾನೆ ಎನಿಸುತ್ತದೆ.

ಮನುಷ್ಯನನ್ನು ಮಾನವೀಯನನ್ನಾಗಿಸಲು, ಶಾಂತಿಯುತ ಸಹಬಾಳ್ವೆಯ ಅಗತ್ಯವನ್ನು ಶತಮಾನಗಳಿಂದ ಸಮಾಜ ಸುಧಾರಕರು, ಸಮಾಜ ವಿಜ್ಞಾನಿಗಳು, ಚಿಂತಕರು, ಮನುಷ್ಯನ ಬದುಕಿನಲ್ಲಿ ಆಸ್ಥೆ ಉಳ್ಳವರೆಲ್ಲಾ ಒತ್ತಿ ಹೇಳುತ್ತಲೇ ಬಂದಿದ್ದಾರೆ. ಮನುಷ್ಯ ಪ್ರೀತಿಗೆ ಪ್ರಾಧಾನ್ಯತೆ ನೀಡಿ ಗೌರವಯುತವಾದ ಬದುಕಿಗಾಗಿ ಒತ್ತಾಸೆ ನೀಡುತ್ತಲೇ ಬಂದಿದ್ದಾರೆ. ಆದರೆ ಬೆಳೆ ಇರುವಲ್ಲೇ ಕಳೆ ಎಂಬಂತೆ ಇಂಥ ಶಕ್ತಿಗಳಿಗೆ ಜನರ ಹಿತರಕ್ಷಣೆಗಿಂತ ತಮ್ಮ ಸ್ವ-ಹಿತಾಸಕ್ತಿಗಳ ರಕ್ಷಣೆಯೇ ಪ್ರಧಾನವಾಗಿದ್ದು ಮನುಷ್ಯ ಪ್ರೀತಿಯನ್ನೇ ಇವು ಧ್ವಂಸಗೊಳಿಸುತ್ತವೆ. ಇಂತಹ ಶಕ್ತಿಗಳಿಗೆ ಮನುಷ್ಯರ ನಡುವಿನ ಸ್ನೇಹ ಸಂಬಂಧಗಳ ಗಟ್ಟಿತನಕ್ಕಿಂತ ಮತಧರ್ಮದ ರಕ್ಷಣೆಯೇ ಮುಖ್ಯವೆನಿಸಿ ಅದಕ್ಕಾಗಿ ಯಾವ ರೀತಿಯ ಘೋರ ಕೃತ್ಯವೆಸಗಲೂ ಹಿಂಜರಿಯುವುದಿಲ್ಲ. ಮತೀಯ ಉನ್ಮಾದದಲ್ಲಿ ಮನುಷ್ಯನ ಪ್ರೀತಿಸುವ ಶಕ್ತಿಯೇ ಮಾಯವಾಗಿದೆ. ಗಂಡು ಹೆಣ್ಣಿನ ಸಂಬಂಧವನ್ನು 'ಕಾಮಾಲೆ ಕಣ್ಣಿಗೆ ಕಾಣುವುದೆಲ್ಲಾ ಹಳದಿ' ಎಂಬಂತೆ ದೈಹಿಕ ಸಂಬಂಧದ ನೆಲೆಯಲ್ಲೇ ಸಂಕುಚಿತವಾಗಿ ನೋಡುವ ಅಪಾಯಗಳು ಇರುವುದರಿಂದ ಆತಂಕಕಾರಿ ಪರಿಣಾಮಗಳನ್ನು ಎದುರಿಸಬೇಕಾಗುತ್ತದೆ. ಕೋಮುವಾದಿ ಧೋರಣೆಯು ಎರಡು ಮತೀಯ ಗುಂಪುಗಳಿಗೆ ಸುಖ ನೆಮ್ಮದಿ ಕೊಡಲಾರದು ಎಂಬುದನ್ನು ಸಾರಾ ಅವರು 'ವಿಷ ಉಣಿಸುವವರು' ಕತೆಯಲ್ಲಿ ತಮ್ಮ ಸಹಜ ನಿರ್ಲಿಪ್ತ ಶೈಲಿಯಲ್ಲಿ ಗುರುತಿಸಿದ್ದಾರೆ.

ಮಾಧವ ಮತ್ತು ಜಾಫರ್ ನಡುವಿನ ಪರಿಚಯ ಸ್ನೇಹವಾಗಿ ಮಾರ್ಪಟ್ಟು ಕುಟುಂಬದ ನೆಲೆಗೂ

ವಿಸ್ತರಿಸುತ್ತದೆ. ಎರಡು ಕುಟುಂಬಗಳು ವಿಭಿನ್ನ ಧರ್ಮದ ಹಿನ್ನೆಲೆಯಿಂದ ಬಂದರೂ ಅದ್ಯಾವುದೂ ಮುಖ್ಯವಾಗಿಲ್ಲ. ಪರಸ್ಪರ ಸ್ನೇಹ-ಸೌಹಾರ್ದತೆಯಲ್ಲಿ ಒಂದಾಗಿ ಬದುಕುವುದನ್ನು ಕತೆಯಲ್ಲಿ ಕಾಣಬಹುದು. ತಂದೆ ಇಲ್ಲದ ಎರಡು ಕುಟುಂಬಗಳು ತಾಯಿ ಕೇಂದ್ರಿತವಾಗಿ ಮಕ್ಕಳಲ್ಲಿಯು ಪ್ರೀತಿ-ಕರುಣೆ ವಾತ್ಸಲ್ಯಗಳು ನೆಲೆಯೂರುವಂತೆ ಮಾಡಿವೆ. ಮಾಧವನ ತಂಗಿ ನಳಿನಿ ಜಾಫರ್‌ನ ತಂಗಿಯಾಗುತ್ತಾಳೆ. ಈ ಕುಟುಂಬಗಳು ತಮ್ಮ ಬಡತನದ ಮಿತಿಯೊಳಗೆ ನೆಮ್ಮದಿಯ ಬದುಕನ್ನು ಕಂಡುಕೊಂಡಿರುತ್ತವೆ. ಹೀಗಿರುವಾಗ ಒಮ್ಮೆ ಮಾಧವ ನಳಿನಿ, ಜಾಫರ್, ಮೂವರು ಸಿನಿಮಾ ನೋಡಲು ಹೋಗಿದ್ದು ಗಂಭೀರ ಸುದ್ದಿಯಾಗಿ ಪ್ರಚಾರಗೊಂಡು ಮಸೀದಿಯ ಮೌಲ್ವಿಗಳು ಜಾಫರ್‌ನ ಕುಟುಂಬಕ್ಕೆ ಮುನ್ನೆಚ್ಚರಿಕೆ ನೀಡುತ್ತಾರೆ. ಮಾಧವನಿಗೂ ಜಾತಿ ಮುಖಂಡರಿಂದ ಎಚ್ಚರಿಕೆ ಬರುತ್ತದೆ. ಜಾತಿಯಿಂದಲೇ ಹೊರಹಾಕುವ ಬೆದರಿಕೆಯೂ ಇರುತ್ತದೆ.

ಬೂದಿ ಮುಚ್ಚಿದ ಕೆಂಡದಂತೆ ಇದ್ದ ಸುದ್ದಿಗೆ ಕಾವೇರಿಸುವ ಘಟನೆ ನಡೆಯುತ್ತದೆ. ಹಣ ಸಂಪಾದನೆಯ ಉದ್ದೇಶದಿಂದ ಬೊಂಬಾಯಿಗೆ ಹೊರಟ ಜಾಫರ್ ನಳಿನಿಯೊಂದಿಗೆ ಮಾತನಾಡುತ್ತಿದ್ದ ಸಂದರ್ಭವನ್ನು ಮತ್ತೆ ತಪ್ಪಾಗಿ ಗ್ರಹಿಸಿ. ಅವಳನ್ನು ಹಾರಿಸಿಕೊಂಡು ಹೋಗುತ್ತಿದ್ದಾನೆಂಬ ಸುದ್ದಿಹರಡಿ ಜಾಫರ್‌ಗೆ ಕೋಮುವಾದಿಗಳು ಥಳಿಸುತ್ತಾರೆ. ಧರ್ಮಾಂಧರಿಂದ ನಿಷ್ಕಲ್ಮಶವಾದ ಎರಡು ಕುಟುಂಬಗಳ ಬಗ್ಗೆ ಕೋಮು ಮನೋಧರ್ಮವನ್ನು ತೂರಿ ವಿಘಟನೆಗೆ ನಾಂದಿ ಹಾಡಿ, ಇಡೀ ಊರೇ ಸಂಘರ್ಷಕ್ಕೆ ಒಳಗಾಗುವಂತೆ ಮಾಡುತ್ತಾರೆ. ಈ ಹೋರಾಟದಲ್ಲಿ ಮಾಧವ ಬಲಿಯಾಗುತ್ತಾನೆ. ಮತೀಯ ಮನಸ್ಸುಗಳು ಆ ಕುಟುಂಬವನ್ನು ಇನ್ನೂ ಅನಾಥವಾಗಿರಿಸುವುದನ್ನು, ತೀರಲಾಗದ ನೋವಿನ ಕೂಪಕ್ಕೆ ತಳ್ಳುವುದನ್ನು ಕತೆ ಕಟ್ಟಿಕೊಡುತ್ತದೆ. ಸ್ವಾರ್ಥದ ನೆಲೆಯಲ್ಲಿ ಯೋಚಿಸುವ ಮನಸ್ಸುಗಳಿಗೆ ಮಾನವೀಯತೆ ಸತ್ತು ಹೋಗಿರುತ್ತದೆ ಎಂಬುದನ್ನು ಜಾಫರ್‌ನ ಮಾವನ ಮಾತುಗಳು ಬಿಂಬಿಸಿವೆ. ಇಂಥ ಘಟನೆಗಳು ಸಾಮಾಜಿಕ, ಧಾರ್ಮಿಕ ನೆಲೆಯಲ್ಲಿ ಪಡೆದುಕೊಳ್ಳುವ ಸ್ವರೂಪವನ್ನು ಕಾಣಬಹುದು. ಕೊನೆಯಲ್ಲಿ ಜಾಫರ್ ಮತ್ತು ನಳಿನಿ ಆಡುವ ಮಾತುಗಳು ಮತೀಯ ಸಮಾಜಕ್ಕೆ ಅಮಾನವೀಯತೆಗೆ ಕೊಟ್ಟ ತಿರುಗೇಟಿನಂತಿದೆ. ಈ ಜಾತೀಯತೆಯ ವಿಷವನ್ನು ಉಣಿಸುವವರ ಮಧ್ಯದಲ್ಲಿ ನಾವು ವಿಷಕಂಠರಾಗಿ ಸಹೋದರತ್ವದಿಂದ ಬದುಕುವ ಆಶಯದೊಂದಿಗೆ, ಮತೀಯ ಶಕ್ತಿಗಳಿಗೆ ಬಲಿಯಾಗದಿರುವ ಎಚ್ಚರಿಕೆ ಇರಬೇಕೆಂಬ ಆಶಯ ಲೇಖಕಿಯದಾಗಿದೆ.

ಮತೀಯ ಆವರಣದ ಹಿನ್ನೆಲೆಯಲ್ಲಿ ಸಾಮಾಜಿಕ ಸ್ವಾಸ್ಥ್ಯಕೆಡಿಸುವ ಸಮಾಜ ಘಾತುಕ ಶಕ್ತಿಗಳ ಗೋಮುಖ ವ್ಯಾಘ್ರತೆಯನ್ನು 'ಸಾರಾಂಶ' 'ಮಸೀದಿ ಕಟ್ಟುವವರು' 'ನಾವು ನಮ್ಮವರು' ಕತೆಗಳು ಬಿಂಬಿಸಿವೆ. ಬಡವರ ಮುಗ್ಧತೆಯನ್ನು ಬಂಡವಾಳ ಮಾಡಿಕೊಂಡು ಹಣ ಕಬಳಿಸಿ ಮಸೀದಿ ಕಟ್ಟಿ ಪುನೀತನಾಗುವ ಶೇಕಾಲಿಯಂತವರೇ ನಿಜವಾದ ಸಮಾಜ ಘಾತುಕರು ಎಂಬುದನ್ನು ಕತೆ ವ್ಯಂಗ್ಯವಾಗಿ ನಿರೂಪಿಸಿದೆ.

'ನಾವು ನಮ್ಮವರು' ಕತೆಯಲ್ಲಿ ಟೆಂಡರ್ ಪಡೆಯುವ ಉದ್ದೇಶ ಹೊಂದಿದ ಕಂಟ್ರಾಕ್ಟರ್ ಮಹಮ್ಮದ್‌ನು ಕಾನೂನು ಬಾಹಿರವಾಗಿ ಅಧಿಕಾರವನ್ನು ದುರುಪಯೋಗ ಪಡಿಸಿಕೊಳ್ಳುವ ಪ್ರಯತ್ನಕ್ಕೆ ಪ್ರಾಮಾಣಿಕ ಅಧಿಕಾರಿಯಾದ ಜಫರುಲ್ಲಾ ನಿರಾಕರಿಸುತ್ತಾನೆ. ಆಗ ಅನ್ಯ ಧರ್ಮೀಯನಾದ ಮೇಲಧಿಕಾರಿ ಯಾವುದೇ ರೀತಿಯಲ್ಲಿ ಕಿರುಕುಳವನ್ನು ಕೊಡದೆ ನಿರ್ಲಿಪ್ತತೆಯಿಂದ ಇರುವುದನ್ನು ಕತೆಯಲ್ಲಿ ಕಾಣುತ್ತೇವೆ. ಮುಂದೆ ಅದೇ ಹುದ್ದೆಗೆ ಹೊಸ ನಿರ್ದೇಶಕನಾಗಿ ತಮ್ಮ ಕೋಮಿನವನೇ ಬಂದಾಗ ಅವನಿಗೆ ನಿರಂತರ ಕಿರುಕುಳ

ಆರಂಭವಾಗಿ ಅವನ ಧರ್ಮೀಯ ಆಚರಣೆಗಳಿಗೆ ತೊಂದರೆಯನ್ನುಂಟು ಮಾಡುತ್ತಾನೆ. "ಅಧಿಕಾರದ ಅಮಲು ತಲೆಗೇರಿದ ಮನುಷ್ಯ ಎಷ್ಟು ಕ್ರೂರಿಯಾಗಬಲ್ಲ ಎಂಬುದಕ್ಕೆ ಇದೊಂದು ನಿದರ್ಶನ. ಕೋಮುವಾದಿಗಳೆಂದು ಯಾರನ್ನು ಕರೆಯಬೇಕೆಂದು ನನಗೆ ಗೊತ್ತಾಗುತ್ತಿಲ್ಲ. ನಾವು ನಮ್ಮವರೆಂದು ಈ ಜನರು ಕೊಚ್ಚಿಕೊಳ್ಳುತ್ತಿದ್ದಾರಲ್ಲ ಇವೆಲ್ಲ ಈ ಜನರ ರಾಜಕೀಯ ರಮ್ಮಿ ಆಟದ ಟ್ರಂಪ್ ಕಾರ್ಡುಗಳು"[೪೯]ಎಂಬ ವಿಷಾದದ ನುಡಿಗಳು ಲೇಖಕಿಯ ಮಾನವೀಯ ನಿಷ್ಪಕ್ಷಪಾತ ಧೋರಣೆಗೆ ಸಾಕ್ಷಿಯಂತಿವೆ.

ಸಾರಾ ಅವರ 'ಸಾರಾಂಶ' ಕತೆ ನಾಗರಿಕ ಸಮಾಜದ ಮತೀಯ ಆವರಣದೊಳಗಿನ ಕ್ರೌರ್ಯದ ಇನ್ನೊಂದು ಮುಖವನ್ನು ಚಿತ್ರಿಸಿದೆ. 'ವಿಷ ಉಣಿಸುವವರು' ಕಥೆಯಲ್ಲಿ ಮತೀಯ ಶಕ್ತಿಯು ಸಾಮಾಜಿಕ ನೆಲೆಯಲ್ಲಿ ಪ್ರವಹಿಸಿದರೆ. 'ಸಾರಾಂಶ' ಕತೆಯಲ್ಲಿ ವ್ಯಕ್ತಿ ನೆಲೆಯಲ್ಲಿ ಸ್ತ್ರೀ ಶೋಷಣೆಯ ಕೇಂದ್ರವಾಗಿ ದುರುಪಯೋಗವಾಗಿರುವುದನ್ನು ಕಟ್ಟಿಕೊಡುತ್ತದೆ.

ತಂದೆಯಿಲ್ಲದ ಯಮುನಾ ಅಣ್ಣಂದಿರ ಆಶ್ರಯದಲ್ಲಿ ಅವರಿಗೆ ಹೊರೆಯಾಗಿ ಬೆಳೆದ ಹುಡುಗಿ. ಎಂತಹ ಕ್ಷುಲ್ಲಕ ಕಾರಣಕ್ಕಾದರೂ ಗಂಡು ಹೆಣ್ಣಿನ ಮೇಲೆ ದ್ವೇಷ ಸಾಧಿಸಿ, ಸೇಡು ತೀರಿಸಿಕೊಳ್ಳುವ ಚಪಲ ಹೊಂದಿರುತ್ತಾನೆ. ಅದಕ್ಕಾಗಿ ಯಾವ ರೀತಿಯ ನಟನೆಯನ್ನಾದರೂ ಮಾಡಲು ಹಿಂದೆ-ಮುಂದೆ ಯೋಚಿಸುವುದಿಲ್ಲ. ಅನ್ಯಾಯದ ಬಗ್ಗೆ ಹೆದರುವುದಿಲ್ಲ.

ಯಮುನಾಳನ್ನು ಮದುವೆ ಆಗಲು ಬಯಸಿದ ಹುಡುಗನು ಈಗಾಗಲೇ ಮದುವೆ ಆಗಿರುವ ಸತ್ಯ ಸಂಗತಿ ತಿಳಿದರೂ, ಅವನ ಸುಳ್ಳುಮಾತುಗಳನ್ನೇ ನಂಬಿ ಹೆಚ್ಚು ಖರ್ಚಿಲ್ಲವೆಂಬ ಕಾರಣಕ್ಕೆ ಆತನೊಡನೆ ವಿವಾಹಮಾಡಿ ಕೈತೊಳೆದುಕೊಳ್ಳುತ್ತಾರೆ. ಅವಳ ಭವಿಷ್ಯದ ಬದುಕಿಗಿಂತ ಹೆತ್ತವರಿಗೆ ಕರ್ತವ್ಯ ಮುಖ್ಯವಾಗುತ್ತದೆ. ಇತ್ತ ಆರೋಗ್ಯವಂತ ಹೆಂಡತಿ-ಮಕ್ಕಳನ್ನು ಹೊಂದಿದ್ದು, ತನ್ನನ್ನು ವಂಚಿಸಿದ್ದಕ್ಕೆ ಅವನು ಕೊಡುವ ಕಾರಣ "ಮೊತ್ತಮೊದಲ ದಿನ ನಿನ್ನ ಭೇಟಿಯಾದಾಗ ನೀನು ದರ್ಪದಿಂದ ತಿರುಗಿಯೂ ನೋಡದೆ ಒಳನಡೆದೆಯಲ್ಲ? ಆ ನಿನ್ನ ಅಹಂಕಾರ ಮುರಿಯಲಿಕ್ಕೆ!"[೫೦] ಎಂಬ ಮಾತುಗಳು ಅವನ ಕೊಳೆತ ಹೃದಯವನ್ನು ಗಂಡಿನ ಅಹಂಕಾರದ ಮುಖದರ್ಶನವನ್ನು ಮಾಡಿಸಿದೆ.

'ಯಮುನಾ' ತನ್ನ ಅಸಹಾಯಕತೆಗೆ ಕಟ್ಟುಬಿದ್ದು ಹಗಲಲ್ಲಿ ಜೀತಧಾಳಿನಂತೆ ಇರುಳಲ್ಲಿ ಗಂಡನ ಕಾಮತೃಷೆಗೆ ಬಲಿಪಶುವಾಗುತ್ತಾಳೆ. ಅವಳ ಗರ್ಭದಲ್ಲಿದ್ದ ತನ್ನ ಕುಡಿಯನ್ನು ವೈದ್ಯರ ಬಳಿ ಕರೆದೊಯ್ದು ನಾಶಪಡಿಸಿ ಅವಳ ದೇಹದ ಜೊತೆಗೆ ಮನಸ್ಸನ್ನೂ ಖಾಲಿ ಮಾಡಿದ್ದಲ್ಲದೆ ಆಕೆಯ ಆಭರಣಗಳನ್ನು ಮಾಯವಾಗಿಸಿ ನಿರ್ಗತಿಕಳನ್ನಾಗಿಸುತ್ತಾನೆ.

ತನ್ನ ಹೊಲಸು ವ್ಯಕ್ತಿತ್ವಕ್ಕೆ ಹೆಣ್ಣನ್ನು ಬಲಿಪಶುವನ್ನಾಗಿಸಿ ಹೆಣ್ಣಿಗೆ ಹೆಣ್ಣೇ ಶತ್ರು ಎಂಬ ಪರಿಸ್ಥಿತಿ ನಿರ್ಮಾಣ ಮಾಡಿ ಆಕೆಯನ್ನು ಮನೆಯಿಂದ- ಮನೆಗೆ ಹೊರಹಾಕುವ ಕುತಂತ್ರವನ್ನು ಬಳಸಿಕೊಳ್ಳುತ್ತಾನೆ. ಇಂಥ ಮೋಸಕ್ಕೆ ಬಲಿಯಾದ ಯಮುನಾ ಶಬಾನಳ ಆಶ್ರಯ ಪಡೆದಾಗ ಅಬಲೆಯಾದ ಹೆಣ್ಣಿನ ಮೇಲೆ ಸೇಡು ತೀರಿಸಿಕೊಳ್ಳುವ ಉಪಾಯವನ್ನು ಧಾರ್ಮಿಕತೆಯ ಸುಳಿವನ್ನು ಹಿಡಿದು ಪ್ರಯೋಗಿಸುವಂತೆ ಮಾಡುತ್ತಾರೆ. ಮಾನವೀಯ ನೆಲೆಯಲ್ಲಿ ಯೋಚಿಸಿದ ಶಬಾನ ಮತ್ತು ಸಮಿವುಲ್ಲಾರ ಮೇಲೆ ಮತೀಯ ನೆಲೆಯ ಒತ್ತಡಗಳು ಅಸಹಾಯಕರನ್ನಾಗಿ ಮಾಡುತ್ತವೆ. "ವಿದ್ಯಾವಂತ ನಾಗರಿಕ ಜಗತ್ತಿನ ನಡವಳಿಕೆ ಕಂಡ ಶಬಾನ ಬೆಚ್ಚಿದಳು.

ನಿನ್ನೆ ಮುಸ್ಲಿಂ, ಇಂದು ಹಿಂದುಗಳು ಓರ್ವ ಅನಾಥ ಹೆಣ್ಣನ್ನು ಬೆತ್ತಲೆ ಮಾಡಿ ಬೀದಿಗಟ್ಟುವುದರಲ್ಲಿ ಯಾರೂ ಹಿಂದೆ ಬೀಳಲಿಲ್ಲ."[೩೧] ಅಸಹಾಯಕಳಾದ, ನಿರ್ಗತಿಕಳಾದ ಒಂದು ಹೆಣ್ಣನ್ನು ಮತ್ತೆ ಮತ್ತೆ ಸಂಕಷ್ಟಕ್ಕೆ ಒಳಗು ಮಾಡಿ ತನ್ನ ಹಿತವನ್ನು ರಕ್ಷಿಸಿಕೊಳ್ಳುವುದು ಪುರುಷ, ಕೋಮು ಗಲಭೆ ತಂತ್ರವನ್ನು ಬಳಸಿ. 'ಯಮುನಾ' ಇಂಥ ಕುಯುಕ್ತಿಗೆ ಬಲಿಯಾಗಿ ಹೋಗುವುದು ವ್ಯವಸ್ಥೆಗಿಡಿದ ಕನ್ನಡಿ ಎಂಬುದನ್ನು ಬಿಂಬಿಸಿದೆ. ಸಾರಾ ಕತೆಯನ್ನು ಸಮರ್ಥವಾಗಿ ಗ್ರಹಿಸಿದ್ದಾರೆ ಎಂಬುದಕ್ಕೆ ಈ ಕತೆ ನಿದರ್ಶನ.

ಭಾರತದಲ್ಲಿರುವ ಹಲವಾರು ಸಾಮಾಜಿಕ ಪಿಡುಗುಗಳಲ್ಲಿ ಅಸ್ಪೃಶ್ಯತೆಯು ಒಂದು. ಇದೊಂದು ಭಾರತೀಯ ಸಮಾಜಕ್ಕಂಟಿದ ಕಳಂಕ. ಭಾರತದ ಸುಧಾರಣಾವಾದಿ ಚಳವಳಿಗಳು ಅನೇಕ ಸಾಮಾಜಿಕ ಪಿಡುಗುಗಳ ನಿವಾರಣೆಗೆ ಶ್ರಮಿಸಿದವಾದರೂ ಅಸ್ಪೃಶ್ಯತೆಯ ಬಗೆಗೆ ಹೆಚ್ಚಿನ ಗಮನಹರಿಸಲಿಲ್ಲ. ಗಾಂಧೀಜಿಯವರು ಅಸ್ಪೃಶ್ಯಯ ನಿವಾರಣೆಗಾಗಿ ಅನೇಕ ರೀತಿಯ ನಿಯಮಗಳನ್ನು ಚಾಲ್ತಿಗೆ ತಂದರು. ಅಂಬೇಡ್ಕರ್‌ರವರು ಅದರ ಕಠೋರ ಸತ್ಯಗಳನ್ನು ತೆರೆದಿಟ್ಟರು. ಪರಿಣಾಮವಾಗಿ ಅಸ್ಪೃಶ್ಯತೆಯ ಆಚರಣೆಯನ್ನು ಅಮಾನವೀಯ ಎನ್ನುವುದು ಪ್ರಗತಿಪರ ಧೋರಣೆಯುಳ್ಳವರಿಗೆ ಮನವರಿಕೆಯಾಯಿತು. ದೇಶಕ್ಕೆ ಸ್ವಾತಂತ್ರ್ಯ ದೊರೆತು ಸಂವಿಧಾನ ರಚನೆಯಾದಾಗ ಅಸ್ಪೃಶ್ಯತೆಯ ಆಚರಣೆ ಒಂದು ಅಪರಾಧವೆಂದು ಪರಿಗಣಿಸಲಾಯಿತು. ಇಂದಿಗೂ ಅಸ್ಪೃಶ್ಯತೆಯನ್ನು ತೊಡೆದು ಹಾಕಲು ಸಾಧ್ಯವಾಗಿಲ್ಲ. ಸವರ್ಣೀಯರು, ವಿದ್ಯಾವಂತರು ಬಾಹ್ಯವಾಗಿ ಈ ಬಗ್ಗೆ ವಿರೋಧ ವ್ಯಕ್ತಪಡಿಸಿದರೂ ಆಂತರಂಗಿಕವಾಗಿ ಇಂಥ ಸೋಗಲಾಡಿ ತನದಿಂದ ಹೊರ ಬಂದಿಲ್ಲ. ಸಾಮಾಜಿಕ ವ್ಯವಸ್ಥೆಯೊಳಗಿನ ಅಸಮಾನತೆಯ ಬೇರನ್ನು ಕಿತ್ತೊಗೆಯಬೇಕಾದರೆ, ಹೊಸ ವ್ಯವಸ್ಥೆಯನ್ನು ಸೃಷ್ಟಿಸಬೇಕಾದರೆ ಸಮಾಜದಲ್ಲಿ ನಿರ್ಲಕ್ಷ್ಯಕ್ಕೆ, ನಿರಾಕರಣೆಗೆ, ತಿರಸ್ಕಾರಕ್ಕೆ ಒಳಗಾದರಿಂದಲೇ ಪ್ರತಿಭಟನೆಯ ದನಿ ಹೊರಹೊಮ್ಮಬೇಕು. ವ್ಯವಸ್ಥೆಗೆ ಬೆನ್ನು ತೋರಿಸದೆ ದಿಟ್ಟವಾಗಿ ಮುಖಮಾಡಿ ನಿಂತು ಹೋರಾಡಬೇಕು. ಆ ಮೂಲಕ ತನ್ನಂತೆಯೇ ಶೋಷಣೆಗೆ ಒಳಗಾದ ಜನರಲ್ಲಿ ಬೇರೂರಿರುವ ತಪ್ಪು ಅಭಿಪ್ರಾಯಗಳನ್ನು ಹೋಗಲಾಡಿಸುವುದು ವಿದ್ಯಾವಂತರ ಕರ್ತವ್ಯವೆಂಬುದನ್ನು ಸಾರಾ ಅವರ 'ನಿಮ್ಮೊಡನಿದ್ದು'- ಕತೆ ಬಿಂಬಿಸಿದೆ.

ಸರ್ಕಾರಿ ಮನೆಗಳಿರುವ ಬಡಾವಣೆಯಲ್ಲಿ ವಿವಿಧ ಹುದ್ದೆಯಲ್ಲಿ ಕೆಲಸ ಮಾಡುತ್ತಿರುವ ಅಧಿಕಾರಿಗಳು ವಾಸವಾಗಿದ್ದರು. ಇವರಲ್ಲಿ ಹಿಂದೂ, ಕ್ರೈಸ್ತ, ಮುಸಲ್ಮಾನ ಹಾಗೂ ಒಂದೇ ಒಂದು ಹರಿಜನ ಕುಟುಂಬವಿದ್ದು, ನಮ್ಮ ದೇಶದ ಜಾತ್ಯತೀತ ನೀತಿಗೆ ಸಾಕ್ಷಿಯಾಗಿತ್ತು. ಜಾತೀಯ ನೆಲೆಗಟ್ಟಿನಲ್ಲೇ ನಿರ್ಮಾಣವಾದ ಸಾಮಾಜಿಕ ವ್ಯವಸ್ಥೆಯಲ್ಲಿ ಗೋಚರವಾಗುವ ಇರುಸು- ಮುರುಸು ಲಲಿತೆಯಲ್ಲಿ ಕ್ರೋಧ ಮಾನವೀಯತೆಗಳ ಮುಖಾಮುಖಿಯಲ್ಲಿ ಅಸಮಾಧಾನ ಮತ್ತು ಅಸಹಾಯಕತೆಯ ರೂಪದಲ್ಲಿ ತೆರೆದು ಕೊಳ್ಳುತ್ತದೆ. ಜಾತಿಯ ಕಾರಣಕ್ಕಾಗಿಯೇ ಅಲ್ಲಿ ನಡೆಯುವ ಸಮಾರಂಭಗಳಿಂದ ತಾವು ಮತ್ತು ಏನೂ ಅರಿಯದ ತನ್ನ ಮಕ್ಕಳಿಗೂ ದೂರ ಉಳಿಯ ಬೇಕಾದ ಸಂದರ್ಭ ಎದುರಾದಾಗ ವೇದನೆಗೆ ಒಳಗಾಗುತ್ತಾಳೆ.

ಸುಕುಮಾರನ ಆಪ್ತ ಗೆಳೆಯ ರಾಜಣ್ಣನ ಕುಟುಂಬವೂ ಅದೇ ರೀತಿ ನಡೆದುಕೊಂಡಾಗ ಅಪಮಾನದ ಛಾಯೆ ಆವರಿಸಿಕೊಳ್ಳುತ್ತದೆ. ' ನಮ್ಮನ್ನು ಕರೆದಿದ್ದರಲ್ಲವೆ ನಾವು ಬರುವುದು? ಸರಕಾರ ಎಷ್ಟು ಕಾನೂನುಗಳನ್ನು ಮಾಡಿದ್ದರೇನು? ಈ ಜನರ ಕಣ್ಣಿಗೆ ನಾವಿನ್ನು ಮನುಷ್ಯರಂತೆ ಕಾಣಿಸುತ್ತಿಲ್ಲ. ಲಿಸ್ಸಿ ಮತ್ತು ಫಾತಿಮ್ಮಳಿಗೆ ಆ ಮನೆಯಲ್ಲಿ ಪ್ರವೇಶವಿದ್ದರೂ ನನ್ನ ರವಿ ಮತ್ತು ಸುಮಾಳಿಗೆ ಅಲ್ಲಿ ಪ್ರವೇಶ ದೊರೆಯದು. ಬಹುಶಃ

ನಮ್ಮ ಈ ನೋವು ಯಾರಿಗೂ ಅರ್ಥವಾಗದು"[೩೨] ಎಂದು ಅಸಮಾಧಾನದಿಂದ ನುಡಿಯುತ್ತಾಳೆ. ತನ್ನ ಗೆಳೆಯನಿಂದಾಗಿ ಅವಮಾನಕ್ಕೆ ಪ್ರತಿಕಾರವೆಂಬಂತೆ ಸುಕುಮಾರ ಕಂಠ ಪೂರ್ತಿ ಕುಡಿದು ಮನೆಯಲ್ಲಿ ಗಲಾಟೆ ತೆಗೆಯುತ್ತಾನೆ. ಪಕ್ಕದ ಮನೆಯಾಕೆ "ಹುಟ್ಟುಗುಣ ಸತ್ತರೂ ಹೋಗದು- ಎಷ್ಟು ಓದಿದರೇನು? ಎಲ್ಲಿದ್ದರೇನು? ಕಂಠ ಪೂರ್ತಿ ಕುಡಿದು ರಾತ್ರಿ ಮನೆಗೆ ಬಂದು ಗಲಾಟೆ ಮಾಡುವ ಜನರ ಬುದ್ದಿ ಎಂದಾದರೂ ಬದಲಾದೀತೇ?" ಎಂದು ತಿರಸ್ಕಾರದಿಂದ ವ್ಯಂಗ್ಯವಾಡುತ್ತಾಳೆ. ಮೂಲಭೂತ ಧೋರಣೆಗಳಿಂದ ಬದಲಾಗದ ಸಾಂಪ್ರದಾಯಿಕ ಮನಸ್ಸುಗಳು ಬದಲಾಗದಿರುವುದನ್ನು ಖಂಡಿಸುತ್ತಾರೆ. ಮೆಹರುನ್ನಿಸಾಳ ಆಪ್ತತೆಯಲ್ಲಿ 'ಮನುಷ್ಯ ಪ್ರಜ್ಞೆ'ಯನ್ನು ಬಿಂಬಿಸಿದ ಕತೆಗಾರ್ತಿ ಆಕೆಯ ಕುಟುಂಬದ ಮೂಲಕವೇ ರೂಢಿಗತ ಮೌಲ್ಯಗಳನ್ನು ತಿರಸ್ಕರಿಸಿ, ಹೊಸ ಮೌಲ್ಯವನ್ನು ಕಂಡುಕೊಳ್ಳುವ ಪ್ರಯತ್ನದಲ್ಲಿ ತಮ್ಮನ್ನು ತೊಡಗಿಸಿಕೊಳ್ಳುವುದರೊಂದಿಗೆ ತಮ್ಮ ಜನಾಂಗದಲ್ಲಿ ಬದಲಾವಣೆಯನ್ನು ತರುವ ಪ್ರಯತ್ನ ಮಾಡುತ್ತಾರೆ. ಇದನ್ನು ಗ್ರಹಿಸಿದ ಸುಕುಮಾರ "ಪಲಾಯನದಿಂದ ಏನನ್ನೂ ಸಾಧಿಸಲಾಗುವುದಿಲ್ಲ, ಹೋರಾಟವೇ ಸರಿಯಾದ ಹಾದಿ. ಇಲ್ಲಿದ್ದುಕೊಂಡೇ ನಮ್ಮ ಜನರಲ್ಲಿ ಜಾಗೃತಿ ಮೂಡಿಸಲು ಪ್ರಯತ್ನಿಸುತ್ತೇನೆ. ನಾವೇಕೆ ತಲೆಮರೆಸಿಕೊಳ್ಳಬೇಕು?"[೩೩] ಎಂದು ಅಸಮಾನತೆಯನ್ನು ಪ್ರಶ್ನಿಸುವ ಮನೋಭಾವವನ್ನು, ಆತನ ಆಲೋಚನಾ ಕ್ರಮದಲ್ಲಾದ ಬದಲಾವಣೆಯನ್ನು ಕತೆಯ ಆಶಯವಾಗಿ ಗ್ರಹಿಸಬಹುದು.

ಸ್ತ್ರೀ ಶೋಷಣೆಯ ವಿವಿಧ ಆಯಾಮಗಳನ್ನು ಸಾರಾ ಅವರ ಹಲವಾರು ಕಥೆಗಳು ಪ್ರತಿಬಿಂಬಿಸಿವೆ. ಈ ಹಿನ್ನೆಲೆಯಲ್ಲಿ 'ವಿಜ್ಞಾನ ಭವಿಷ್ಯ ನುಡಿದಾಗ', 'ಸಾರಾಂಶ', 'ಪಯಣ', 'ಹುಟ್ಟು', 'ಬಂದಣಿಗೆ', 'ಮಸೀದಿಕಟ್ಟುವವರು', 'ಒಂದು ಬದುಕಿನ ಕೆಲವು ಪುಟಗಳು', 'ದೋಣಿಸಾಗಲಿ', 'ಬಲೆ', 'ಖೆಡ್ಡಾ' ಇವೇ ಮೊದಲಾದ ಕತೆಗಳು. ಸ್ತ್ರೀ ಶೋಷಣೆಯ ವಿಭಿನ್ನ ಸ್ವರೂಪವನ್ನು ಕಟ್ಟಿಕೊಡುತ್ತವೆ.

ಯಾವುದೇ ಸಮುದಾಯದ ಮಹಿಳೆಯು ಸಂಪ್ರದಾಯ, ಧರ್ಮ ಸಮಾಜದ ಕಟ್ಟು ಕಟ್ಟಳೆಗಳ ನಿಯಂತ್ರಣಗಳಿಗೆ ಸಿಲುಕಿ ನಲುಗುವುದು ಒಂದು ಮುಖವಾದರೆ, ಗಂಡಿನ ದರ್ಪ, ಅಹಂಕಾರ, ಸ್ವಾರ್ಥಲೋಲುಪತೆಗಾಗಿಯೇ ಹಿಂಸೆ ಅನುಭವಿಸುವುದು ಇನ್ನೊಂದು ಮುಖ. ಇಂಥ ಸಮಸ್ಯೆಗಳು ಗಂಡು, ಹೆಣ್ಣು ಎಂಬ ಕಾರಣವನ್ನು ಪ್ರಧಾನವಾಗಿರಿಸಿಕೊಂಡು ಲಿಂಗ ಅಸಮಾನತೆಯನ್ನು ಎತ್ತಿ ಹಿಡಿಯುತ್ತವೆ. ಈ ಹಿನ್ನೆಲೆಯಲ್ಲಿ 'ವಿಜ್ಞಾನ ಭವಿಷ್ಯ ನುಡಿದಾಗ' ಕತೆಯನ್ನು ಗ್ರಹಿಸಬಹುದು.

ಪುರುಷ ಕೇಂದ್ರಿತ ವ್ಯವಸ್ಥೆಯಲ್ಲಿ ಗಂಡಿನ ಆಶಯಗಳೇ ಪ್ರಧಾನವಾಗಿದ್ದು, ಇಲ್ಲಿ ಹೆಣ್ಣು ಗಂಡು ಮಗುವನ್ನೇ ಹೆರಬೇಕೆಂಬ ಒತ್ತಡ ಎಂಥ ಅಪಾಯವನ್ನು ತಂದೊಡ್ಡಬಲ್ಲದು ಎಂಬುದನ್ನು ಹೆಣ್ಣನ್ನು ದುಡಿಯುವ ಯಂತ್ರವೆಂದು ಭಾವಿಸಿದಂತೆಯೇ ತಮಗೆ ಬೇಕಾದ ಗಂಡುಮಕ್ಕಳನ್ನೆ ಹೆರುವ ಯಂತ್ರ ಎಂಬಂತೆ ಗ್ರಹಿಸಿರುವುದನ್ನು 'ವಿಜ್ಞಾನ ಭವಿಷ್ಯನುಡಿದಾಗ' ಕತೆಯಲ್ಲಿ ಕಂಡರಿಸಿದ್ದಾರೆ. ಮಕ್ಕಳೆರಡು ಸಾಕೆಂದು ಶಸ್ತ್ರಚಿಕಿತ್ಸೆ ಮಾಡಿಸಿಕೊಳ್ಳಬೇಕೆಂಬ ಹಂಬಲ ಹೆಂಡತಿಗಿದ್ದರೆ ಆ ಎರಡೂ ಮಕ್ಕಳು ಹೆಣ್ಣಾದ್ದರಿಂದ ಗಂಡಾದ ಬಳಿಕವೇ ಶಸ್ತ್ರಚಿಕಿತ್ಸೆ ಮಾಡಿಸಿಕೊಳ್ಳಬೇಕೆಂಬ ನಿರ್ಬಂಧ ಗಂಡನದು. ಹೆಂಡತಿಯಿಂದ ಗಂಡುಮಗುವನ್ನು ನಿರೀಕ್ಷಿಸುವ ಮತ್ತು ಹೆಣ್ಣಾದರೆ ಭ್ರೂಣಾವಸ್ಥೆಯಲ್ಲಿ ಅದನ್ನು ನಾಶಪಡಿಸಬೇಕೆಂಬ ಒತ್ತಡ ಹೆಂಗಸರನ್ನು ಯಾವ ಸ್ಥಾನದಲ್ಲಿ ಇಟ್ಟಿದ್ದಾರೆಂಬುದನ್ನು ಸೂಚಿಸುತ್ತದೆ. ಹೆಂಡತಿ ಎಂದರೆ ಹೆರುವ ಯಂತ್ರ ಅದರಲ್ಲೂ ಗಂಡು ಮಗುವನ್ನು

ಹೆತ್ತರೆ ಆಕೆಗೆ ಪುರಸ್ಕಾರ; ಹೆಣ್ಣು ಹೆತ್ತರೆ ತಿರಸ್ಕಾರ . ಹೆಂಡತಿ ಎಂದರೆ ಗಂಡನ ನಿರೀಕ್ಷೆಗಳನ್ನೆಲ್ಲಾ ಪೂರೈಸುವ ಹಾಗೂ ಮನಸ್ಸು ಹೃದಯಗಳೇನೂ ಇಲ್ಲದ ಭಾವನೆಗಳೇ ಬತ್ತಿಹೋದ ನಿರ್ಜೀವ ವಸ್ತುವೆಂಬಂತೆ ಪರಿಗಣಿಸುವುದು ಅಥವಾ ಹೆಣ್ಣಿನ ದೇಹ ಬೇಕಾದಾಗಲೆಲ್ಲಾ ಗರ್ಭಪಾತ ಮಾಡಿಸಿಕೊಳ್ಳಲು ತಯಾರಾಗಿರಬೇಕೆಂಬ ನಿರ್ಧಾರಗಳನ್ನು ವಿಷಾದದಿಂದ ಚಿತ್ರಿಸಿದ್ದಾರೆ. ವ್ಯವಸ್ಥೆಯ ಕೇಂದ್ರಿತ ನೆಲೆಗಳಲ್ಲಿ ಹೆಣ್ಣು-ಗಂಡಿನ ಆಶಯಗಳು ಸುಸಂಸ್ಕೃತಗೊಳ್ಳದೆ, ವಿಚಾರ ಪ್ರಜ್ಞೆ ಇಲ್ಲದೆ ಇರುವ ಅಪಾಯವನ್ನು ಕತೆ ಗಂಭೀರವಾಗಿ ಗಮನಿಸುತ್ತದೆ. ಸಾರಾ ಅವರು ಹಿಂದೂ ಸಮಾಜದ ಒಳಗಿನ ಈ ಸಂಘರ್ಷವನ್ನು ತಮ್ಮ ಮತೀಯ ಆವರಣದಿಂದ ದೂರ ಇದ್ದು, ಸೂಕ್ಷ್ಮವಾಗಿ ವಿಶ್ಲೇಷಿಸಿದ್ದಾರೆ.

ವ್ಯವಸ್ಥೆಯ ಹಿಡಿತದೊಳಗೆ ವಿಜ್ಞಾನದ ಹೊಸ ಹೊಸ ಸಂಶೋಧನೆಗಳು ಬದುಕನ್ನು ಮಾನವೀಯಗೊಳಿಸಲಾರವು. ವಿಜ್ಞಾನವನ್ನು ಬಳಸಿಕೊಳ್ಳುವ ಪುರುಷ ಕೇಂದ್ರಿತ ಆವರಣವು ಹೆಣ್ಣನ್ನು ಶೋಷಿಸುತ್ತವೆ. "ನಿರ್ಲಿಪ್ತ ಎನ್ನುವ ವಿಜ್ಞಾನ ಕೂಡ ಸಾಮಾಜಿಕ ಅಗತ್ಯ ಮತ್ತು ನಂಬಿಕೆಗಳ ದಿಕ್ಕಿನಲ್ಲಿ ಬೆಳೆಯುತ್ತದೆ. ಸಾಮಾಜಿಕ ಅಂಶಗಳು ವಿಜ್ಞಾನ ತಂತ್ರಜ್ಞಾನದ ಹಾದಿಯನ್ನು ರೂಪಿಸುತ್ತವೆ. ಪಿತೃ ಪ್ರಧಾನ ಸಮಾಜದಲ್ಲಿ ವಿಜ್ಞಾನದ ಅಳವಡಿಕೆಗಳು ಮಹಿಳಾ ಶೋಷಣೆಯ ಅಸ್ತ್ರವಾಗಬಲ್ಲವು. ಭಾರತದಂಥಾ ದೇಶಗಳಲ್ಲಿ ಗಂಡು ಮಕ್ಕಳಿಗೆ ನೀಡಿರುವ ಅತಿ ಪ್ರಾಮುಖ್ಯತೆ. ಗರ್ಭಧಾರಣೆಗೆ ಮೊದಲೆ ತಮಗೆ ಬೇಕಾದ ಲಿಂಗದ ಮಗುವನ್ನೂ ಆಯ್ದುಕೊಳ್ಳುವ ಸಾಧ್ಯತೆ ದೊರೆತಿದೆ. ಹಾಗಾಗಿ ಈ ತಂತ್ರಜ್ಞಾನ ನೇರ ದುರುಪಯೋಗಕ್ಕೆ ಕಾರಣವಾಗುತ್ತದೆ. ಪ್ರಪಂಚದ ಬಹಳಷ್ಟು ಸಮಾಜಗಳಲ್ಲಿ ಈ ಗಂಡು ಮಗುವಿನ ಮಾನ್ಯತೆ, ಈ ರೀತಿಯ ವೈಜ್ಞಾನಿಕ ಶೋಧನೆಗಳಿಗೆ ಅಪರೋಕ್ಷವಾಗಿ ಪ್ರೋತ್ಸಾಹ ನೀಡಿದೆ. ಸಮಾಜದಲ್ಲಿಯ 'ಗಂಡು' ಮಗುವಿಗೆ ಇರುವ ಪ್ರಾಶಸ್ತ್ಯ ಈ ತಂತ್ರದ ದುರುಪಯೋಗಕ್ಕೆ ಕಾರಣವಾಗುತ್ತದೆ. ಹುಟ್ಟುವ ಮೊದಲೇ ಹೆಣ್ಣು ಭ್ರೂಣದ ಸಾಧ್ಯತೆಗಳನ್ನು ತಡೆಯುತ್ತದೆ. ಭ್ರೂಣಾವಸ್ಥೆಯಲ್ಲಿ ವಂಶವಾಹಿನಿಯ ಕೊರತೆಗಳನ್ನು, ಆನುವಂಶಿಕ ರೋಗಗಳನ್ನು ಕಂಡುಹಿಡಿಯಲು ಶೋಧಿಸಿದ ಮತ್ತೊಂದು ತಂತ್ರ 'ಆಮ್ನಿಯಾ ಸಿಂಟಿಸಿಸ್' ಕೇವಲ ಭ್ರೂಣದ ಲಿಂಗ ಪತ್ತೆಗೆ ತದನಂತರ ಹೆಣ್ಣು ಭ್ರೂಣದ ಹತ್ಯೆಗೆ ನೇರ ಕಾರಣವಾಗಿದೆ. ಸದುದ್ದೇಶ ಪ್ರೇರಿತವಾದ ವೈಜ್ಞಾನಿಕ ಶೋಧನೆಗಳೂ ಕೂಡ ಲಿಂಗತಾರತಮ್ಯದ ಸಮಾಜದಲ್ಲಿ ಮಹಿಳೆಯ ವಿರುದ್ಧ ಕೆಲಸ ಮಾಡುತ್ತಿವೆ".[೩೬] ನೇಮಿಚಂದ್ರರ ಮಾತುಗಳು ವಿಜ್ಞಾನದ ಬೆಳವಣಿಗೆ ಮಹಿಳೆಯ ಶೋಷಣೆಯ ಹೊಸ ರೂಪಗಳನ್ನು ತೋರುತ್ತವೆ. ಇದನ್ನು ಈ ಕತೆಯ ಮೂಲಕ ಸಾರಾ ಅವರು ಮನುಷ್ಯ ಪ್ರಯತ್ನದ ಸೃಷ್ಟಿಯೂ ಜೀವ ವಿರೋಧಿ ಆಶಯಗಳಾಗಿ ದುಡಿಸಿಕೊಂಡಿರುವುದು ಗಮನಾರ್ಹವೆನಿಸುತ್ತದೆ. ಭಾರತೀಯ ಸಾಂಪ್ರದಾಯಿಕ, ಕೌಟುಂಬಿಕ ವ್ಯವಸ್ಥೆಯು ಗಂಡು ಮಾತ್ರ ವಂಶದ ಉದ್ಧಾರಕ, ಮೋಕ್ಷಕಾರಕವೆಂದು ಸ್ವೀಕರಿಸಿ ಬಿಟ್ಟಿರುವುದರಿಂದ ಹೆಣ್ಣಿನ ಕಣ್ಣೀರಿನ ಕಥೆಯು ಜೀವನದುದ್ದಕ್ಕೂ ಶಾಶ್ವತವಾಗಿ ಉಳಿಯುತ್ತದೆ.

ವೈದ್ಯಕೀಯ ಆವರಣದೊಳಗೂ ನಿರ್ಣಯಾತ್ಮಕವಾಗಿ ಒಪ್ಪಿಗೆ ಅಥವಾ ತೀರ್ಮಾನದ ಸಮ್ಮತಿಯ ಹಕ್ಕು ಗಂಡಿನದೇ ಆಗಿರುವುದರಿಂದ ಗಂಡಿನ ತೀರ್ಮಾನವೇ ಅಂತಿಮವಾದುದಾಗಿರುತ್ತದೆ. ಇಲ್ಲಿ ಮಧುಕರನ ಕೌಟುಂಬಿಕ ಗ್ರಹಿಕೆಗಳು ಸ್ಥಿರತೆಯನ್ನೇ ಪ್ರಧಾನವಾಗಿಸಿಕೊಳ್ಳುತ್ತವೆ. ಆದರೆ ಅವು ವೈಯಕ್ತಿಕವಾಗಿ ಮಾಲಿನಿಯ ಅಸ್ತಿತ್ವವನ್ನು ತಿರಸ್ಕರಿಸುವ ನೆಲೆಗೆ ಸರಿಯುತ್ತವೆ. ಇದನ್ನು ವಿರೋಧಿಸುವ ಆಕೆಯ ಪ್ರಯತ್ನ

ಯಶಸ್ವಿಯಾಗುವುದಿಲ್ಲ. ಬೇಕು ಬೇಡಗಳ ಸಂಘರ್ಷದಲ್ಲಿ ಕರುಳಿನ ಕುಡಿ ನಶಿಸಿಹೋಗಿತ್ತು. ಆದ ಗಾಯದ ಮೇಲೆ ಬರೆ ಎಳೆದಂತೆ ಎಲ್ಲರ ನಿರೀಕ್ಷೆಯ ಗಂಡು ಕೂಸೇ ಬಲಿಯಾದ ಸುದ್ದಿ ತಿಳಿದಾಗ ಮಧುಕರನಿಗೆ ಹೆರುವ ಕರುಳಿನ ವೇದನೆ ತಟ್ಟಿರಬಹುದೇನೋ? ಆದರೆ ವೈದ್ಯಕೀಯ ವ್ಯವಸ್ಥೆಯೊಳಗಿನ ನಿರ್ಲಕ್ಷ್ಯ ಧೋರಣೆ ಗೋಚರಿಸುತ್ತದೆ. "ವಿಜ್ಞಾನ ಎಷ್ಟೇ ಪ್ರಗತಿ ಸಾಧಿಸಿದರೂ ಕೆಲವೊಮ್ಮೆ ಇಂತಹ ಅಚಾತುರ್ಯವಾಗುತ್ತವೆ". ಇಂಥ ಒತ್ತಡಗಳನ್ನು ವಿಜ್ಞಾನ ಹೇರುತ್ತದೆ. ತನ್ನೊಡನೆ ಇರುವ ಸಾಕು ಪ್ರಾಣಿಗಳಲ್ಲಿ ಹೆಣ್ಣನ್ನು ಬಯಸುವ ಮಾನವನ ಆಶಯ ತನ್ನ ಬದುಕಿನ ಸಂದರ್ಭದಲ್ಲಿ ಅದನ್ನು ತಿರಸ್ಕರಿಸುತ್ತದೆ. ಇದಕ್ಕೆ ಕಾರಣ ಗಂಡು ಬದುಕಿಗೆ ಮೂಲಧಾತುವಾದುದು, ಹೆಣ್ಣು ತನ್ನ ಆಶಯಗಳನ್ನು ಅವನಷ್ಟೇ ಪ್ರಬಲವಾಗಿ ಪ್ರತಿಪಾದಿಸದಿರುವುದು. ಆದ್ದರಿಂದ ಮಾಲಿನಿ ತೋರುವ ಪ್ರತಿಭಟನೆ ಸಾಂಪ್ರದಾಯಿಕ ಮೌಲ್ಯಗಳಿಗೆ ತೋರಿದ ಪ್ರತಿಭಟನೆಯಾಗಿದೆ. ಗಂಡಿನ ಇಚ್ಛೆಗೆ ಅನುಗುಣವಾಗಿ ಗರ್ಭತೆಗೆಸಿಕೊಳ್ಳುವ ಹಿಂಸೆಯು ಹೆಣ್ಣಿಗಷ್ಟೇ ಸೀಮಿತವಾಗಿಬಿಡುವುದರಿಂದ ಗಂಡು ಅದರ ಹಿಂಸೆ ಒತ್ತಡಗಳಿಂದ ಸುಲಭವಾಗಿ ತಪ್ಪಿಸಿಕೊಳ್ಳುತ್ತಾನೆ.

ಇಲ್ಲಿ ಮಾಲಿನಿ ಮಧುಕರನ ತೀರ್ಮಾನವನ್ನು ಖಚಿತವಾಗಿ ತಿರಸ್ಕರಿಸಲು ಯಾಕೆ ಸಾಧ್ಯವಾಗುವುದಿಲ್ಲವೆಂದರೆ ಅವಳ ಬದುಕು ಪೂರ್ಣವಾಗಿ ಗಂಡನ ಮೇಲೆ ಆಧಾರವಾಗಿದೆ. ಆತನೇನಾದರು ನಿರ್ಲಕ್ಷಿಸಿ ಬಿಟ್ಟರೆ ಅಥವಾ ಬಿಟ್ಟುಬಿಟ್ಟರೆ ಆಕೆ ಸ್ಥಿತಿ ಈಗಿರುವುದಕ್ಕಿಂತಲೂ ಚಿಂತಾಜನಕವಾಗಬಹುದಾದ ಸಾಧ್ಯತೆ ಇರುವುದರಿಂದ ಮತ್ತು ಸಾಂಪ್ರದಾಯಿಕ ಆವರಣವು ಸೃಷ್ಟಿಸಿರುವ ಕೌಟುಂಬಿಕ ಬಂಧನವು ಸ್ವತಂತ್ರಳಲ್ಲದ ಹೆಣ್ಣಿಗೆ ಅನಿವಾರ್ಯವಾದುದರಿಂದ ಮಾಲಿನಿ ಗಂಡನ ಜೀವ ವಿರೋಧಿ ಆಶಯಗಳಿಗೆ ತಲೆಬಾಗಬೇಕಾಗುತ್ತದೆ. ಹೆಣ್ಣಿನ ಮೇಲೆ ಇಂಥ ಹಿಡಿತವನ್ನು ಸ್ಥಿರವಾಗಿಸಲು ಗಂಡು ಅವಳಿಗೆ ಆರ್ಥಿಕ ಹಕ್ಕನ್ನು ನೀಡಲು ನಿರಾಕರಿಸುತ್ತಾನೆ. ಮಧುಕರನ ಗಂಡು ಮಗುವಿನ ಬಯಕೆ ಎಷ್ಟು ಅಪಾಯಕಾರಿಯಾದುದೆಂದರೆ "ನೋಡಿ ಆ ದಿನ ವೈದ್ಯರಂದರಲ್ಲ, ಬದುಕು ಕೊಟ್ಟಿದ್ದನ್ನು ಸ್ವೀಕರಿಸಬೇಕೂಂತ ನಮಗೆ ಇಬ್ಬರು ಮಕ್ಕಳಿದ್ದಾರೆ. ನಮ್ಮ ಆದಾಯಕ್ಕೆ ಅವು ಧಾರಾಳ ಸಾಕು. ಇಲ್ಲಿಗೆ ನಿಲ್ಲಿಸಿ ಬಿಡೋಣ" ಎಂದ ತಕ್ಷಣ ಆತ "ಅದು ಹೇಗಾಗುತ್ತದೆ?"[೩೫] ಒಂದು ಗಂಡು ಮಗು ಇಲ್ಲಿ ಬೇಕೆ ಬೇಕು. ಮಾಲಿನಿಯ ಗರ್ಭ ಗಂಡಿನ ಲಕ್ಷಣ ತೋರಿದ ನಂತರ ಆಕೆ ಗರ್ಭಧರಿಸಬೇಕು ಮತ್ತು ಹೆಣ್ಣಿನ ಲಕ್ಷಣ ಬಂದಾಗಲೆಲ್ಲಾ ತೆಗೆಸಬೇಕು. ಅವನ ಈ ನಿರ್ಧಾರಗಳು ಆಕೆಯನ್ನು ಪ್ರತಿಕ್ರಿಯಿಸಲಾರದ ಅಸಹಾಯಕತೆಯ ಆಘಾತಕ್ಕೆ ದೂಡುತ್ತವೆ. ಕೌಟುಂಬಿಕ ಸನ್ನಿವೇಶದಲ್ಲಿ ಹೆಣ್ಣುಗಂಡಿನ ಸಾಧ್ಯತೆಗಳನ್ನು ಅರ್ಥ ಮಾಡಿಕೊಂಡಿರುವುದಕ್ಕೆ ವಿರುದ್ಧವಾಗಿ, ಹೆಣ್ಣಿನ ಆಶಯಗಳನ್ನು ಅವಳು ಮಾನವೀಯವಾಗಿ ಬದುಕುವ ನೆಲೆಗಳನ್ನು ಗಂಡು ಬೇಕೆಂದೇ ತಿರಸ್ಕರಿಸುತ್ತಾನೆ ಎಂಬುದು ಮಾಲಿನಿ 'ಹೆಂಡತಿ ಎಂದರೇನು'? ಎಂದು ಕೇಳಿಕೊಳ್ಳುವ ವಿಷಾದದಲ್ಲಿ ಮಡುಗಟ್ಟಿದೆ.

'ಸಾರಾಂಶ' ಕತೆಯು ಹೆಣ್ಣು ಮಕ್ಕಳ ಬಗ್ಗೆ ಹೆತ್ತವರು ತೋರುವ ನಿರ್ಲಕ್ಷ್ಯಕ್ಕೆ ತಾಯಿ ಮತ್ತು ಅಣ್ಣ ಕಾರಣರಾದರೆ, ಕ್ಷುಲ್ಲಕ ಕಾರಣಕ್ಕೆ ಹೆಣ್ಣಿನ ಸುಂದರವಾದ ಕನಸುಗಳನ್ನೇ ಕಿತ್ತುಕೊಂಡು ಸ್ವಾರ್ಥ ಸಾಧಿಸಿಕೊಂಡ ಗಂಡ ತನ್ನ ಕಾಮತೃಷೆಗೆ ಯಮುನಾಳನ್ನು ಅವಳ ಮುಗ್ಧತೆಯನ್ನು ಬಳಸಿಕೊಂಡು ಉಪಾಯದಿಂದ ತನ್ನ ಮನೆಯಿಂದ ಹೊರಹಾಕುವ ತಂತ್ರ ಮಾಡುತ್ತಾನೆ. ತನ್ನ ಸ್ನೇಹಿತ ರಂಗಪ್ಪನ ಮನೆಯಲ್ಲಿ ಕೆಲವು ದಿನಗಳಿರುವಂತೆ

ಪುಸಲಾಯಿಸಿ ಹೋದವ ಮತ್ತೆ ಬರುವುದಿಲ್ಲ. ರಂಗಪ್ಪನ ಹೆಂಡತಿಯಿಂದ ಹೊರದೂಡಲ್ಪಟ್ಟ ಯಮುನಾಳ ನೋವಿಗೆ ಸ್ಪಂದಿಸಿ ಅವಳಿಗೆ ಆಶ್ರಯ ನೀಡುವ ಔದಾರ್ಯ ತೋರಿದವಳು ಶಬಾನ ಮತ್ತು ಸೈಯದ್ ದಂಪತಿಗಳು. ಒಂದು ಹೆಣ್ಣಿಗಾದ ಅನ್ಯಾಯವನ್ನು ಅರ್ಥಮಾಡಿಕೊಳ್ಳದೆ, ಆಕೆಯ ಬಗ್ಗೆ ಸುಳ್ಳು ಆಪಾದನೆಗಳನ್ನು ಹೇರುವ ಮೂಲಕ ಆಕೆಯನ್ನು ಅನಾಥಳನ್ನಾಗಿಸುವ ತಂತ್ರವೆಸಗುತ್ತಾರೆ. ಕೋಮು ದಳ್ಳುರಿಯ ನೆಪದಲ್ಲಿ ಆಶ್ರಯದಾತರನ್ನು ಹಿಂದೆ ಸರಿಯುವಂತೆ ಮಾಡುವಲ್ಲಿ ರಂಗಪ್ಪ ಹೂಡಿದ ಕುತಂತ್ರ ಯಶಸ್ವಿಯಾಗುತ್ತದೆ. ಒಬ್ಬ ಅಸಹಾಯಕ ಹೆಣ್ಣಿನ ಬದುಕನ್ನು ಬೆತ್ತಲೆಗೊಳಿಸಿ ಆಕೆಯನ್ನು ಬೀದಿಗೆ ತರಲು ತೋರುವ ಉತ್ಸುಕತೆ ಬೆಚ್ಚಿ ಬೀಳಿಸುವಂತಿದೆ. ಸಮಾಜದ ವಿವಿಧ ಶಕ್ತಿಗಳು ಹೇಗೆ ಪರಿಸರ ಹಾಗೂ ಜನರ ಮನಸ್ಸನ್ನು ಕಲುಷಿತಗೊಳಿಸಿ ಕೋಮುವಾದವನ್ನು ಹುಟ್ಟಿಸಲೆತ್ನಿಸುತ್ತದೆ ಅದರ ನೆಲೆಯಲ್ಲಿ ಹೆಣ್ಣನ್ನೇ ಹೇಗೆ ಬಲಿಪಶುಮಾಡುತ್ತವೆಂಬುದರ ಶೋಷಣೆಯ ಸ್ವರೂಪವನ್ನು ಕತೆ ಕಟ್ಟಿಕೊಡುತ್ತದೆ.

'ಹುಟ್ಟು' ಕತೆಯಲ್ಲಿ ಬೇಗ ಮಕ್ಕಳಾಗಲಿಲ್ಲವೆಂಬ ಕಾರಣಕ್ಕೆ ಇನ್ನೊಬ್ಬಳನ್ನು ಕಟ್ಟಿಕೊಂಡು ಬಂದು ಮೊದಲ ಹೆಂಡತಿಯಾದ ಕದೀಜಾಳ ಮೇಲೆ ಲೈಂಗಿಕ ದೌರ್ಜನ್ಯವನ್ನೆಸಗುವ ಗಂಡ, ತವರಿನಿಂದ ಹಣ ತರಲಿಲ್ಲವೆಂಬ ಕಾರಣಕ್ಕೆ ತವರಿನ ಸಂಬಂಧವನ್ನೇ ಕಡಿದುಹಾಕುತ್ತಾನೆ. ತನ್ನ ಹೆರಿಗೆಯ ಸಂದರ್ಭದಲ್ಲಿ ಹಜ್‌ಯಾತ್ರೆಗೆ ಹೋಗುವ ಗಂಡನ ಕ್ರೌರ್ಯಕ್ಕೆ ರೋಸಿಹೋದ ಕದೀಜಾ ಬದುಕುವ ಆಸೆಯನ್ನು ತೊರೆಯುತ್ತಾಳೆ. ಕೊನೆಯಲ್ಲಿ ತನ್ನ ಮಗಳನ್ನು ಕುರಿತು ಕದೀಜಾ ಹೇಳುವ ಮಾತುಗಳು "ನಾಳೆ ನನ್ನ ಹೆಣ ನೋಡಲು ನನ್ನ ತಾಯಿ ಅಂದರೆ ನಿನ್ನ ಅಜ್ಜಿ ಮತ್ತು ಮಾವ ಬಂದೇ ಬರುತ್ತಾರೆ. ರಕ್ತ ಸಂಬಂಧವನ್ನು ಕತ್ತರಿಸಲು ಯಾರಿಂದಲೂ ಸಾಧ್ಯವಾಗದು. ಅವರೊಡನೆ ನೀನು ಹೊರಟುಹೋಗು. ನಿನ್ನನ್ನು ತಡೆಯುವ ಯಾವ ಶಕ್ತಿಯೂ ಈಗ ಇಲ್ಲಿಲ್ಲ. ತುಂಬಾ ಓದಿ ವಿದ್ಯವಂತಳಾಗು, ಬುದ್ಧಿವಂತಳಾಗು, ನಿನ್ನ ಅನ್ನವನ್ನು ನೀನೇ ಸಂಪಾದಿಸು, ನನ್ನಲ್ಲಿ ಹುಟ್ಟುವುದು ನಿನ್ನಲ್ಲಿ ಹುಟ್ಟಲಿ".[೩೬] ತಾಯಿಯ ಆಶಯ, ಗಂಡನ ಬಗೆಗಿನ ತಿರಸ್ಕಾರ ಧ್ವನಿತವಾಗಿದೆ. ಈ ಕತೆಯ ನಿರೂಪಣಾ ತಂತ್ರ ಆಕರ್ಷಕವಾಗಿದ್ದು, ಹೆಣ್ಣಿನ ಆಂತರ್ಯದ ನೋವನ್ನು ಹೆರಿಗೆ ನೋವಿಗೆ ಸಮೀಕರಿಸಿ ಹೇಳುವ ವಿಧಾನ ವಸ್ತುಸ್ಥಿತಿಗೆ ಗಟ್ಟಿಯಾದ ಅಭಿವ್ಯಕ್ತಿಯ ಶಕ್ತಿ ನೀಡಿದೆ. ಈ ರೀತಿಯ ಸಾಂಕೇತಿಕತೆ ಕತೆಗೆ ಹೊಸ ಶಕ್ತಿಯನ್ನು ತುಂಬಿದೆ ಎನಿಸುತ್ತದೆ.

ಇದೇ ಸಂಕಲನದ 'ಬಂದಣಿಗೆ' ಕತೆ ಗಂಡಸಿನ ದೌರ್ಜನ್ಯ ಮತ್ತು ಲಂಪಟತನವನ್ನು ಬಯಲಿಗೆಳೆಯುತ್ತದೆ. ಸಾಂಪ್ರದಾಯಿಕವಾಗಿ ಯಾವ ವಿರೋಧವೂ ಇಲ್ಲದೆ ಗಂಡನೇ ಸರ್ವಸ್ವ ಎಂದು ನಿಷ್ಠೆಯಿಂದ ಒಪ್ಪಿಕೊಳ್ಳುವ ಹೆಣ್ಣು ಕೂಡ ಆತನ ಕ್ರೌರ್ಯಕ್ಕೆ ಬಲಿಯಾಗುತ್ತಾಳೆ. ಹೆಣ್ಣನ್ನು ಗುಲಾಮಳಂತೆ ನಡೆಸಿಕೊಳ್ಳುವ ಅಬ್ದುಲ್ ಖಾದರ್‌ಗೆ ಹೆಣ್ಣಿರುವುದೇ ಗಂಡು ಹೇಳಿದಂತೆ ಕೇಳುವುದಕ್ಕಾಗಿ. ಖಾದರ್ ಏನು ಮಾಡಿದರೂ ಸರಿ ಎಂಬ ಧೋರಣೆ ವ್ಯಕ್ತಿ. ಅಪ್ಪನಂತೆ ಮಗನೂ ಅದೇ ದಾರಿಯನ್ನು ಹಿಡಿಯುತ್ತಾನೆ. ಹೆಣ್ಣುಗಳ ಹಿಂದೆ ಅಲೆಯುವ ಖಯಾಲಿ ಬೆಳೆಸಿಕೊಂಡು ಹೆಣ್ಣಿನ ಮೇಲೆ ಆಕ್ರಮಣ ಮಾಡುವುದನ್ನು ಸಹಜವೆಂದು ತಿಳಿಯುತ್ತಾನೆ. ಪರಿಚಯವನ್ನೇ ಸ್ವಾರ್ಥಕ್ಕೆ ಬಳಸಿಕೊಳ್ಳುವ ಅಬೀದ್ ಆಲಿಗೆ ತಕ್ಕದಾದ ಶಾಸ್ತಿಯನ್ನು ಪೊಲೀಸ್ ಅಧಿಕಾರಿ ಜಮಾಲುದ್ದೀನ್ ಮಾಡುತ್ತಾನೆ. ತಂದೆ ಮಗನ ಉದ್ಧಟತನದಿಂದ ನಿತ್ಯ ಶೋಷಣೆಯನ್ನು ಅನುಭವಿಸುವವಳು ಅಬ್ದುಲ್ ಖಾದರನ ಹೆಂಡತಿ ಅಸ್ಮಾ.

ಉಳ್ಳವರ ಕಾಮತೃಷೆಗೆ ಬಲಿಯಾಗಿ, ಮಕ್ಕಳನ್ನು ಹಡೆದು ಸಮಾಜದ ನೆಲೆಯಲ್ಲಿ ಅಪವಾದ ನಿಂದನೆಗಳನ್ನು ಸಹಿಸಿಕೊಂಡು ಮಕ್ಕಳ ಭವಿಷ್ಯಕ್ಕಾಗಿ ಹೆಣಗಾಡುವ ಹೆಣ್ಣುಮಕ್ಕಳಿಗೂ ಕೊರತೆಯಿಲ್ಲ. ಇಂಥ ನೆಲೆಯಲ್ಲಿ ಕಾಣಿಸಿಕೊಳ್ಳುವ 'ಮಸೀದಿ ಕಟ್ಟುವವರು' ಕತೆಯ ಹಲೀಮ. ಮಗ ತಂದೆ ಯಾರು ಎಂದು ಕೇಳಿದ ಪ್ರಶ್ನೆಗೆ ಆಕೆ 'ಆ ದೊಡ್ಡ ಬಂಗಲೆ, ಕಾರು, ದೀಪಗಳ ಎಡೆಯಲ್ಲೆಲ್ಲೋ ಅವಿತುಕೊಂಡಿದ್ದಾರೆ ನಿನ್ನ ತಂದೆ. ನಿನ್ನೆದುರು ಕಾಣಿಸಿಕೊಳ್ಳಲು ಅವರಿಗೆ ನಾಚಿಕೆಯಾಗುತ್ತದೆ.!' ಲೈಂಗಿಕ ನೆಲೆಯಲ್ಲಿ ಹೆಣ್ಣನ್ನು ಬಳಸಿಕೊಂಡು ನಂತರ ಬೆಳವಣಿಗೆಯಿಂದ ದೂರವೇ ಉಳಿಯುವ ಗಂಡಿನ ಶೋಷಣೆಯ ಮತ್ತೊಂದು ನೆಲೆಯನ್ನು ಈ ಮಾತುಗಳು ಅಭಿವ್ಯಕ್ತಿಸಿವೆ.

ಶೋಷಣೆಯ ಮೊದಲಮೆಟ್ಟಿಲು ಹೆಣ್ಣೆ. ಮಗನ ಪ್ರತಿಯೊಂದು ವರ್ತನೆಗಳಿಗೂ ತಾಯಿಯನ್ನೇ ಕಾರಣವನ್ನಾಗಿಸಿ ಅಪವಾದದ ನೆಲೆಯಿಂದ ದೂರ ಸರಿಯುವ ಗಂಡಿನ ಧೋರಣೆ, ಸಾಧನೆ ಮಾಡಿದಾಗ ತನ್ನ ಮಗನೆಂದು ಹೆಮ್ಮೆಪಡುವ ತಂದೆಗೆ ಮಗ ತನ್ನಿಷ್ಟಕ್ಕೆ ವಿರೋಧವಾಗಿ ಬೆಳೆದಾಗ ಅದರ ಫಲಿತಗಳನ್ನೆಲ್ಲಾ ಹೆಂಡತಿಗೆ ರವಾನಿಸುವುದು ಸಾಮಾನ್ಯ ಮನೋಧರ್ಮ. ಸಾಮಾನ್ಯ ವಿಚಾರಗಳಿಗೂ ಹೆಂಡತಿಯ ಮೇಲೆ ಯಾವಾಗಲೂ ಅಧಿಕಾರ ಚಲಾಯಿಸುವ, ಬೈಯುವ, ಹೊಡೆಯುವ ಸ್ವಭಾವ ಹೊಂದಿದ್ದ ಗಂಡನಿಗೆ ಮಗ ಬೇರೆ ಜಾತಿಯ ಹುಡುಗಿಯನ್ನು ಮದುವೆ ಮಾಡಿಕೊಂಡ ಸುದ್ದಿ ಕಿವಿಗೆ ಕಾದ ಸೀಸ ಸುರಿದಂತಾಯಿತು. ತಂದೆಯ ಬಗ್ಗೆ ಗೌರವವಿದ್ದರೂ, ಅವರ ಸ್ವಭಾವಕ್ಕೆ ಹೆದರಿ ಮಗ ಬೇರೆಯ ಮನೆ ಮಾಡಿ ಸಂಸಾರ ಹೂಡುತ್ತಾನೆ. ಮಗನ ಬಗ್ಗೆ ಯಾವುದೇ ಸುದ್ದಿತಿಳಿಯದೆ ಚಡಪಡಿಸುತ್ತಿದ್ದ ತಾಯಿಗೆ ಮಗಳಿಂದ ಆಹ್ವಾನ ಬರುತ್ತದೆ. ಮಗಳನ್ನು ನೋಡುವ ನೆಪದಲ್ಲಿ ಗಂಡನಿಂದ ಅನುಮತಿ ಪಡೆದು ಮಗಳ ಮನೆಗೆ ಹೋಗುತ್ತಾಳೆ. ಮಗಳಿಂದ ತನ್ನ ಮಗನ ವಿಚಾರ ತಿಳಿದು ಮನಸ್ಸಿನ ದುಗುಡ ಸ್ವಲ್ಪ ಕಡಿಮೆಯಾಗುತ್ತದೆ. ಮಗ ನಮ್ಮನ್ನೆಲ್ಲ ಮರೆತಿಲ್ಲ ಎಂಬುದೇ ಅವಳಿಗೆ ಸಮಾಧಾನದ ಸಂಗತಿ. ಆದರೆ ಗಂಡನ ಕಠಿಣವಾದ ನಿರ್ಧಾರ ಮಗ ಮತ್ತು ಮಗಳನ್ನು ನೋಡದೆ ಇರಬೇಕೆಂಬ ಆಜ್ಞೆ ಹೆಂಡತಿಯನ್ನು ಸಾವಿನ ಮನೆಗೆ ಕರೆಯಿತು. ಮುಂದೆ ಮಗ ಅಪಘಾತದಲ್ಲಿ ಸಾವನ್ನಪ್ಪುತ್ತಾನೆ. ಮಗನ ಸಾವು ತಂದೆಯನ್ನು ಅಧೀರನನ್ನಾಗಿಸುತ್ತದೆ. ಮಗನ ಸಾವಿಗೆ ಸೊಸೆಯ ಮೇಲೆ ಗೂಬೆ ಕೂರಿಸುತ್ತಾನೆ. ಆದರೆ ಮಗ ಬದುಕಿದ್ದಾಗ, ಸೊಸೆಯ ಕಾರಣಕ್ಕಾಗಿ ಹೆಂಡತಿ ಮಕ್ಕಳನ್ನು ಹಿಂಸಿಸಿದ ಗಂಡನು ತನ್ನ ಮುಪ್ಪಿನ ಕಾಲದಲ್ಲಿ ಆ ಸೊಸೆಯನ್ನೇ ಆಶ್ರಯಿಸಬೇಕಾಗುತ್ತದೆ. ಸಮಾಜದಲ್ಲಿ ಈ ರೀತಿ ವಿವಾಹವಾದಾಗ ಆಡುವ ಮಾತುಗಳನ್ನು ಮುಗ್ಧತೆಯ ನೆಲೆಯಲ್ಲಿ ಪ್ರಶ್ನೆಯಾಗಿಸುತ್ತಾ ಹೆಣ್ಣಿನ ಶೋಷಣೆಯ ನೆಲೆಯನ್ನು ಈ ಕತೆ ಬಿಂಬಿಸುತ್ತದೆ.

ಭಾರತೀಯ ಸಮಾಜದಲ್ಲಿ ವೈವಾಹಿಕ ಸಂಬಂಧದಲ್ಲಿ ಹೆಚ್ಚಿನ ಸ್ವಾತಂತ್ರ್ಯವಿರುವುದು ಪುರುಷನಿಗೆ. ಮಹಿಳೆಗಿರುವ ಪ್ರಮಾಣದಲ್ಲಿ ಪುರುಷರಿಗೆ ಲೈಂಗಿಕ ಸ್ವಾತಂತ್ರ್ಯಕ್ಕೆ ನಿರ್ಬಂಧವಿಲ್ಲ. ಒಬ್ಬಳಿಗಿಂತ ಅಧಿಕ ಪತ್ನಿಯರನ್ನು ಹೊಂದಿರಬಾರದು ಎಂದು ಹಿಂದೂ ವಿವಾಹ ಕಾಯ್ದೆ ಪ್ರತಿಪಾದಿಸಿದೆ. ಆದರೆ ಇದನ್ನೂ ಮೀರಿದ ಅನೈತಿಕ ಸಂಬಂಧ ಹೇರಳವಾಗಿದೆ. ಇದಕ್ಕೆ ವಯಸ್ಸಿನ ಮಿತಿ ಇರುವಂತೆ ಕಾಣುವುದಿಲ್ಲ. ಇಂಥ ಅಗತ್ಯಗಳಿಗಾಗಿ ಪುರುಷ ಕೊಡುವ ಕಾರಣಗಳು ಅವನ ನೆಲೆಯಲ್ಲಿ ಮಾತ್ರ ಅನಿವಾರ್ಯವೆಂಬಂತಿದೆ. ಇಂಥ ಸಂಬಂಧಗಳಿಗೆ ಪುಷ್ಟಿ ತುಂಬುವ ನಗರಗಳು, ಕುಟುಂಬದ ನೆಮ್ಮದಿಯನ್ನು ಕಿತ್ತುಕೊಂಡು ಅನುಮಾನದಲ್ಲಿ ಜೀವಿಸುವಂತೆ

ಮಾಡುತ್ತವೆ. ಇಂತಹ ಆತಂಕಕಾರಿ ನೆಲೆಯಲ್ಲಿ ತನ್ನ ಬದುಕಿನ ಭದ್ರತೆ ಸಡಿಲಗೊಳ್ಳದಂತೆ ಮುನ್ನೆಚ್ಚರಿಕೆ ವಹಿಸುವ ನಿರ್ಧಾರವನ್ನು ಕೈಗೊಳ್ಳುತ್ತಾಳೆ. 'ದೋಣಿ ಸಾಗಲಿ' ಕಥೆಯ ನಾಯಕಿ 'ಲತಾ', |ನಾ ಮುಡಿದ ಮಲ್ಲಿಗೆಯ ಅವಳೊಂದು ಗಳಿಗೆ ಮುಡಿಯಲೇಳು' ಎಂಬ ನಿರ್ಲಿಪ್ತತೆಯಿಂದ ಕೈಚೆಲ್ಲಿ ಕೂರುವ ಹೆಣ್ಣಲ್ಲ. ಗಂಡ ಹೆಂಡಿರ ಸಂಬಂಧದ ಸೂಕ್ಷ್ಮತೆಯನ್ನು ಅರ್ಥೈಸಿಕೊಂಡು ಆ ಸಂಬಂಧವು ಶಿಥಿಲವಾಗದಂತೆ ಮುನ್ನೆಚ್ಚರಿಕೆ ವಹಿಸಿ, ಗಂಡಸು ದಾರಿ ತಪ್ಪುಬಹುದಾದ ನೆಲೆಯಿಂದಲೇ ದೂರವಿಡುವ ಪ್ರಜ್ಞೆ ಹೊಂದಿರುವವಳು.

ಲತಾ ಕಾಳಜಿ ವಹಿಸಲು ಕಾರಣವಾದ ಸಂದರ್ಭವನ್ನು ಗಮನಿಸಿದಾಗ ನಿರೂಪಕಿಯ ಮನೋಗತ ಅರ್ಥವಾಗುತ್ತದೆ. ಎದುರು ಮನೆಯಲ್ಲೆ ವಾಸವಿದ್ದು ತನ್ನ ಗಂಡನ ಕಛೇರಿಯಲ್ಲೇ ಉದ್ಯೋಗಸ್ಥನಾಗಿ ಹೆಂಡತಿಯಿಂದ ಬಿಡುಗಡೆ ಹೊಂದಿರುವ ವ್ಯಕ್ತಿ, ಹಗಲಿನಲ್ಲಿ ಸಭ್ಯ ನಾಗರಿಕನಂತೆ ನಟಿಸುತ್ತಾ ರಾತ್ರಿಯಲ್ಲಿ ನಡೆಸುವ ವ್ಯಭಿಚಾರ ಹೆಣ್ಣಿನ ಮೇಲೆ ನಡೆಯುವ ದೌರ್ಜನ್ಯ, ದಬ್ಬಾಳಿಕೆ ತಮ್ಮ ಗಂಡಂದಿರ ಬಗ್ಗೆ ಗುಮಾನಿಪಡುವಂತೆ ಮಾಡುತ್ತವೆ. ಕೌಟುಂಬಿಕ ಸ್ಥಿರತೆಯನ್ನು ಕಾಯ್ದುಕೊಳ್ಳುವ ಒತ್ತಡವನ್ನು ಹೆಣ್ಣಿಗೆ ನಿರ್ಮಾಣ ಮಾಡುತ್ತದೆ. ಕತ್ತಲೆಯ ಜಗತ್ತಿನ ಕರಾಳಕೃತ್ಯ, ಹೊಲಸು ನಾತ, ಬೆಳಗಿನ ಜಾವದ ಮಲ್ಲಿಗೆಯ ಹೂವಿನ ಮಾರಾಟದ ಮೂಲಕ ಮಾಯವಾಗಿದೆ. ದಾಂಪತ್ಯದ ಸಂಬಂಧದೊಳಗೆ ನಂಬಿಕೆ ಪ್ರಧಾನವಾಗಿದ್ದರೂ ಈ ಮಿತಿಯನ್ನು ಬಹುಬೇಗ ದಾಟಬಲ್ಲ ದೌರ್ಬಲ್ಯ ಗಂಡಿನದಾಗಿರುವುದರಿಂದ ಆತಂಕದ ಸ್ಥಿತಿ ಹೆಣ್ಣಿನದಾಗುತ್ತದೆ. "ಒಮ್ಮೆ ಈ ಗೊಬ್ಬರದ ಗುಂಡಿಯಲ್ಲಿ ಬಿದ್ದಾತನನ್ನು ಮೇಲೆತ್ತುವುದು ಪ್ರಯಾಸದ ಕೆಲಸ. ರೋಗ ಬಂದ ಮೇಲೆ ಚಿಕಿತ್ಸೆ ಆರಂಭಿಸುವುದಕ್ಕಿಂತ ಬಾರದಂತೆ ತಡೆಗಟ್ಟುವುದೇ ಮೇಲಲ್ಲವೇ?"[೩೨] ಲೇಖಕಿ ಸಂಪ್ರದಾಯದ ಆಚರಣೆಗಳಿಗಿಂತ ತಮ್ಮ ಕೌಟುಂಬಿಕ ನೆಮ್ಮದಿಯನ್ನು ಜೋಪಾನವಾಗಿ ಕಾಯ್ದುಕೊಳ್ಳುವ ಸ್ಥಿತಿಯ ಅನಿವಾರ್ಯತೆಯನ್ನು ಸೂಕ್ಷ್ಮವಾಗಿ ವಿಶ್ಲೇಷಿಸುವ ಮೂಲಕ ಇಂತಹ ವ್ಯವಸ್ಥೆಯನ್ನು ವಿಡಂಬಿಸಿದ್ದಾರೆ.

ಕೌಟುಂಬಿಕ ವ್ಯವಸ್ಥೆಯನ್ನು ಹೆಣ್ಣಿನ ರಕ್ಷಣೆಯ ಫಲಕವೆಂದು ಬಿಂಬಿಸುವ ವ್ಯವಸ್ಥೆಯಲ್ಲಿ ಹೆಣ್ಣೇ ಆ ಕುಟುಂಬವನ್ನು ಕಾಯ್ದುಕೊಳ್ಳಬೇಕಾದುದು ವಿಪರ್ಯಾಸವೇ ಸರಿ. ಕತೆಯಲ್ಲಿ ಲತಾಳ ತಾಯಿ ಗಿರಿಜಮ್ಮ ನಗರ ಬದುಕಿನ ಮುಖವಾಡ ಕಳಚಿದಾಗ ಕಾಣುವ ದೃಶ್ಯ: "ಮೋಸ, ವಂಚನೆ, ಕ್ರೌರ್ಯಗಳೆಲ್ಲ ಕತ್ತಲೆಯ ಮೇಲ್ಮುಸುಕು! ಹೆಂಡತಿಯನ್ನು ತವರಿಗಟ್ಟಿ, ಈ ಕೊಳಚೆಯಲ್ಲಿ ಕಾಲಿಟ್ಟ ಈತನಾದರೂ ಎಂತಹವನು?[೩೮] ಎಂದು ಯೋಚಿಸುತ್ತಾ ಅದೇ ವಯಸ್ಸಿನ ತನ್ನ ಗಂಡನ ನೆನಪಾಗಿ ಅವರೆದೆಯಲ್ಲಿ ಸೂಕ್ಷ್ಮ ಅಲೆಯೊಂದು ಎದ್ದಿದೆ. ಇಪ್ಪತ್ತರ ವಯಸ್ಸಿನ ಮನೆಗೆಲಸದ ಸಾವಿತ್ರಿಯ ಬದುಕು ನೆನಪಾಗಿ ಸಂದೇಹಗಳು ಮೂಡಲಾರಂಭಿಸಿತು. ಸಾವಿತ್ರಿಯ ಬಗೆಗೆ ಕಾಳಜಿ ಹೆಚ್ಚಾಯಿತು. ಪರಿಸರ, ಸಂದರ್ಭ, ಸನ್ನಿವೇಶಗಳು ಗಂಡಸಿಗೆ ಪೂರಕವಾದಾಗ ನಡೆಯಬಹುದಾದ ಅಚಾತುರ್ಯಕ್ಕೆ ಉತ್ತರವಿಲ್ಲ. 'ಹುಣಸೆ ಮರ ಮುಪ್ಪಾದರೂ ಹುಳಿ ಮುಪ್ಪೆ' ಹಾಗಾಗಿ ಎಚ್ಚರಿಕೆಯ ಅನಿವಾರ್ಯತೆ ಇದೆ. ಒಂದು ಹೆಣ್ಣಿನ ಬಗೆಗೆ ಇನ್ನೊಬ್ಬ ಹೆಣ್ಣು ಕಾಳಜಿ ತೋರಬೇಕಾದ ಅಗತ್ಯವನ್ನು ಕತೆ ಕಟ್ಟಿಕೊಟ್ಟಿದೆ. ಗಂಡಿನ ಲಂಪಟತನಕ್ಕೆ ಮುಗ್ಧ ಹೆಣ್ಣು-ಮಕ್ಕಳನ್ನು ದುರುಪಯೋಗಮಾಡಿಕೊಂಡು ನಂತರ ಅವಳನ್ನು ನಿರ್ಲಕ್ಷಿಸಿ, ಕಾಲಕಸದಂತೆ ಕಾಣುವ ಗಂಡಿನ ದೌರ್ಜನ್ಯಕ್ಕೆ ತಿರಸ್ಕಾರವನ್ನು ಗಿರಿಜಮ್ಮ ಮತ್ತು ಲತಾ ಪಾತ್ರಗಳು ಬಿಂಬಿಸಿವೆ. ಕತೆಯ ಶೀರ್ಷಿಕೆ ಕೌಟುಂಬಿಕ ಬದುಕಿನ

ಸಂಕೇತವಾದ ದೋಣಿ, ಸಮಾಜವೆಂಬ ನದಿಯಲ್ಲಿ ಸಾಗಬೇಕಾದಾಗ ವಹಿಸಬೇಕಾದ ಮುಂಜಾಗ್ರತೆಯನ್ನು ಸಂಯಮದಿಂದಲೇ ಹೇಳುತ್ತಾ ಕ್ರಿಯೆಗೆ ಒತ್ತಾಸೆ ನೀಡುತ್ತಾರೆ.

ಭಾವನೆಗೆ, ಕಲ್ಪನೆಗೆ ಸಿರಿತನ-ಬಡತನ ಮುಖ್ಯವಾಗುವುದಿಲ್ಲ. ಅದರಲ್ಲೂ ಹರೆಯದ ವಯಸ್ಸಿಗೆ ಕನಸುಗಳು ಮುದ ನೀಡುವ ಜಾದೂವಿದ್ದಂತೆ. ಇಂತಹ ಜಾದೂಗೆ ಒಳಗಾದವಳು 'ಒಂದು ಬದುಕಿನ ಕೆಲವು ಪುಟಗಳು' ಕತೆಯ ಖದೀಜಾ ಕಲ್ಪನಾ ಲೋಕದ ವಿಹಾರಿ.

ತಾಯಿ ಮತ್ತು ಮಾವ ಮುದುಕನಿಗೆ ಮದುವೆ ಮಾಡಿ ಕೈ ತೊಳೆದುಕೊಳ್ಳಲು ನಿರ್ಧರಿಸಿದಾಗ ಮನೆಯಿಂದ ಓಡಿಬಂದು ನಿರೂಪಕಿಯ ಆಶ್ರಯ ಪಡೆದು ನಗರದಲ್ಲಿ ಮನೆ ಕೆಲಸಕ್ಕೆ ಸೇರಿದಳು. ಮುಂದೆ ಬದುಕಿನ ಆಶ್ರಯಕ್ಕಾಗಿ ಮತಾಂತರ ಹೊಂದಿ ಡೇವಿಡ್‌ನನ್ನು ಮದುವೆಯಾಗಿ ಸಲೀನಳಾಗಿ ಹೊಸ ಜೀವನ ಆರಂಭಿಸುತ್ತಾಳೆ. ಕೆಲ ವರ್ಷಗಳ ನಂತರ ತೀರಿಕೊಂಡ ಗಂಡನಿಂದ ಆಕೆಗೆ ಒಂದು ಸೈಟು ದೊರೆಯುತ್ತದೆ. ಮತ್ತೆ ಸಲೀನಳ ಬದುಕು ಬಾಣಲಿಯಿಂದ ಬೆಂಕಿಗೆ ಎಂಬಂತಾಗುತ್ತದೆ. ತಂದೆ ಸತ್ತಮೇಲೆ ಆತನ ಹಿರಿಯ ಮಗ ಜೋಸೆಫ್ ಸಲೀನಳ ಮಗಳು ಫಿಲೋಮಿನಾಳನ್ನು ತನ್ನ ತಂಗಿಯಲ್ಲವೆಂದು ಬಗೆದು ಅವಕಾಶ ದೊರೆತಾಗಲೆಲ್ಲ ಆಕೆಯ ಮೇಲೆ ಹತ್ಯಾಚಾರವೆಸಗುತ್ತಾನೆ. ಈ ವಿಷಯವನ್ನು ಬಾಯ್ಬಿಟ್ಟಳೆಂಬ ಕಾರಣಕ್ಕೆ ಆಕೆಯನ್ನು ಸುಟ್ಟುಹಾಕುತ್ತಾನೆ. ಅಸಹಾಯಕ ಹೆಣ್ಣಿನ ಮೇಲೆ ಮತ್ತೆ ಮತ್ತೆ ನಡೆಯುವ ಇಂಥ ಕ್ರೌರ್ಯ ಆಘಾತಕಾರಿಯಾದುದು. ಗಂಡು ಎಂಬ ಕಾರಣಕ್ಕಾಗಿ ಲೈಂಗಿಕ ಶೋಷಣೆಗೆ ಒಳಪಡಿಸಿ, ವಿರೋಧದ ನೆಲೆ ಗೋಚರಿಸಿದಾಗ, ಜೀವಂತವಾಗಿ ದಹನಗೈಯುವ ಬರ್ಬರ ಕೃತ್ಯಗಳು ಮನುಷ್ಯ ಸಮಾಜವನ್ನೇ ತಲ್ಲಣಿಸುವಂತೆ ಮಾಡಿವೆ. ಪುರುಷ ಪ್ರಧಾನ ಸಮಾಜದ ಇಂತಹ ಆಘಾತಕಾರಿ ಜೀವ ವಿರೋಧಿ ಬೆಳವಣಿಗೆಯ ಒಂದು ಮುಖವನ್ನು ಕತೆ ಕಟ್ಟಿಕೊಟ್ಟಿದೆ.

ಕತೆಯ ಬೆಳವಣಿಗೆಯಲ್ಲಿ ಸಲೀನ ಸಾವಿನ ಬಗ್ಗೆ ದೂರು ನೀಡಲು ಹೋದಾಗ ದೂರು ದಾಖಲಿಸಿಕೊಳ್ಳಲು ಹಣ ಕೇಳುವ ಪೊಲೀಸ್ ವ್ಯವಸ್ಥೆಯ ಕರಿನೆರಳು ಆಕೆಯನ್ನು ಹಿಂದೆ ಸರಿಯುವಂತೆ ಮಾಡುತ್ತದೆ. ಇದೇ ಸಂದರ್ಭದಲ್ಲಿ ತಾನು ಕೆಲಸ ಮಾಡುತ್ತಿದ್ದ ಮನೆಯ ಯಜಮಾನ ಗಂಡನ ಸಾವಿನ ನಂತರ ಸಲೀನಳಿಗೆ ಸಿಕ್ಕಿ ನಿವೇಶನವನ್ನು ಉಪಾಯವಾಗಿ ತನ್ನದಾಗಿಸಿಕೊಂಡು ಆಕೆಯನ್ನು ನಿರ್ಗತಿಕಳನ್ನಾಗಿ ಮಾಡುತ್ತಾನೆ. ಮುಗ್ಧ ಹೆಣ್ಣುಗಳನ್ನು ಶೋಷಿಸುವ ಪುರುಷ ಸಮಾಜದ ಕ್ರೌರ್ಯದ ಕರಾಳ ದರ್ಶನ ಇಲ್ಲಿದೆ. ನಂಬಿದವರಿಂದ ಎಲ್ಲಾ ಹಂತದಲ್ಲೂ ಶೋಷಣೆಗೆ ಒಳಗಾದ ಸಲೀನ ಕೊನೆಗೆ ಖದೀಜಾಳಾಗಿ ಹಿಂತಿರುಗುವುದು ವಿಪರ್ಯಾಸ. ತನ್ನಿಚ್ಛೆಗೆ ವಿರುದ್ಧವಾದ ಮದುವೆ ನಿರಾಕರಿಸಿ ತನ್ನ ಬದುಕನ್ನು ದಿಟ್ಟತನದಿಂದ ಹುಡುಕ ಹೊರಟ ಹೆಣ್ಣು ಅಂತಹ ಬದುಕಿಗಾಗಿ ಯಾವಯಾವ ಪಾತ್ರ ವಹಿಸಿದರೂ, ಪರಿಣಾಮ ಮಾತ್ರ ಶೋಷಣೆ ಎಂಬ ಸತ್ಯವನ್ನು ಹೊರಚೆಲ್ಲುವುದರ ಜೊತೆಗೆ ವ್ಯವಸ್ಥೆಯ ಮೋಸದ ಮುಖವಾಡಗಳನ್ನು ಕಳಚಿಟ್ಟಿದೆ.

ಹಸಿವು, ಬಡತನ, ನಿರುದ್ಯೋಗ, ಅನಕ್ಷರತೆ, ಮೌಢ್ಯ, ಶೋಷಣೆ, ಆರ್ಥಿಕ ಅಸಮಾನತೆ, ವರ್ಗ ತಾರತಮ್ಯ, ಅಪರಾಧ ಮುಂತಾದ ಸಮಸ್ಯೆಗಳು ಬೇರೆಲ್ಲಾ ಸಮಾಜವನ್ನು ಕಾಡಿದಂತೆ ಮುಸ್ಲಿಂ ಸಮಾಜವನ್ನು ಕಾಡಿವೆ. ಆದರೆ ಅವುಗಳ ಸ್ವರೂಪ ಬೇರೆಲ್ಲಾ ಸಮಾಜಕ್ಕಿಂತ ಭಿನ್ನವಾಗಿವೆ. ಈ ಹಿನ್ನೆಲೆಯಲ್ಲಿ 'ಚಪ್ಪಲಿಗಳು' ಕಥಾ ಸಂಕಲನದ 'ಚಪ್ಪಲಿಗಳು' ಧರ್ಮ ಬಲೆ ಬೀಸಿದಾಗ', 'ಬಿತ್ತಿ ಬೆಳೆದವರು', 'ಮರಿಯಮ್ಮನ ಅಳಿಯ',

'ಬಿರುಗಾಳಿ', ಮಸೀದಿ ಕಟ್ಟುವವರು', 'ಅರ್ಧರಾತ್ರಿಯಲ್ಲಿ ಹುಟ್ಟಿದ ಕೂಸು', 'ಕಥಾಸಂಕಲನದ ಅರಕ್ಷಿತ', 'ಪಯಣ ಮತ್ತು ಇತರ ಕಥೆಗಳು', ಸಂಕಲನದ 'ಧ್ವನಿಯಿಲ್ಲದ ನೋವುಗಳು', 'ಅಂಕುರ' 'ಮೂಲೆ ಮುಟ್ಟಿದ ಹುಳು', 'ಖೆಡ್ಡಾ' ಕಥಾ ಸಂಕಲನದ 'ಬಿಸಿಲ್ಗುದುರೆಯ ಬೆನ್ನತ್ತಿ', 'ಬೆನ್ನಟ್ಟುವ ಭೂತಗಳು' ಈ ಕತೆಗಳನ್ನು ಪ್ರಾತಿನಿಧಿಕವಾಗಿಟ್ಟುಕೊಂಡು ಇವುಗಳ ಪರಿಶೀಲನೆಯ ಮೂಲಕ ಮುಸ್ಲಿಂ ಸಮಾಜದಲ್ಲಿನ ಸಮಸ್ಯೆಗಳ ಸ್ವರೂಪವನ್ನು ಗಮನಿಸಲಾಗಿದೆ.

ಸಾರಾ ಅವರ ಬಹುಪಾಲು ಕತೆಗಳಲ್ಲಿ ಗಂಡ ಮದುವೆಯಾದ ನಂತರದಲ್ಲಿ ಕೆಲಸವನ್ನು ಅರಸಿ ಮುಂಬೈ ಅಥವಾ ಕೊಲ್ಲಿ ರಾಷ್ಟ್ರಕ್ಕೆ ಹೋಗುವ ಸಂದರ್ಭವನ್ನು ಕಾಣುತ್ತೇವೆ. ಪ್ರಸ್ತುತ 'ಚಪ್ಪಲಿಗಳು' ಕತೆಯ ಶಬೀರ ವೈಚಾರಿಕ ಚಿಂತನೆಯನ್ನು ಬೆಳೆಸಿಕೊಂಡ ವ್ಯಕ್ತಿ. ಇಸ್ಲಾಂ ಧರ್ಮದ ಸಾಮಾಜಿಕ ಕಟ್ಟುಕಟ್ಟಳೆ ಗಳಿಂದ ಬಂಧಿತಳಾದ ಹೆಂಡತಿ ಸಮೀರಳ ಪಾಲಿಗೆ ತಂಗಾಳಿಯಂತೆ ಬಂದವನು. ಆದರೆ ಆಕೆ ಬದುಕಿನ ವಾಸ್ತವತೆಯನ್ನು ಅರಿಯುವುದರೊಳಗಾಗಿ ಸಮೀರಳನ್ನು ತವರಿನಲ್ಲೆ ಬಿಟ್ಟು ಕೆಲಸಕ್ಕಾಗಿ ದುಬಾಯಿಗೆ ಹೊರಟುಹೋಗುತ್ತಾನೆ. ಬಿಡುಗಡೆ ಇಲ್ಲದ ಅದೇ ವ್ಯವಸ್ಥೆಯೊಳಗೆ ಧ್ವನಿ ಇಲ್ಲದೆ ಉಳಿದ ಸಮೀರ ಮಾನಸಿಕ ಖಿನ್ನತೆಗೆ ಒಳಗಾಗುತ್ತಾಳೆ. ಸ್ತ್ರೀ ವ್ಯಕ್ತಿತ್ವಕ್ಕೆ ಕಿಂಚಿತ್ತೂ ಬೆಲೆ ಇಲ್ಲ ಎಂಬುದನ್ನು ಈ ಕಥೆ ಬಿಂಬಿಸಿದೆ. ಕೊಲ್ಲಿರಾಷ್ಟ್ರಗಳ ಉದ್ಯೋಗದ ಆಕರ್ಷಣೆ ಬಹಳಷ್ಟು ಹೆಣ್ಣುಮಕ್ಕಳ ವೈವಾಹಿಕ ಬದುಕನ್ನೇ ಬಲಿತೆಗೆದು ಕೊಂಡಿರುವುದನ್ನು ಲೇಖಕಿ ಮನಮುಟ್ಟುವಂತೆ ಆಪ್ತತೆಯಿಂದ ಕಟ್ಟಿಕೊಡುತ್ತಾರೆ.

'ಧ್ವನಿಯಿಲ್ಲದ ನೋವುಗಳು' ಕತೆಯ ಮುಸ್ತಾಫನು ಹಣಗಳಿಸಲು ಕೊಲ್ಲಿರಾಷ್ಟ್ರಕ್ಕೆ ಹೋಗುತ್ತಾನೆ. ಆರಂಭದ ದಿನಗಳಲ್ಲಿ ಎಲ್ಲರ ನಿರೀಕ್ಷೆಯಂತೆ ಪತ್ರ ಬರೆಯುತ್ತಾ, ಯೋಗಕ್ಷೇಮ ವಿಚಾರಿಸುತ್ತಾ, ಹಣ ಕಳುಹಿಸುತ್ತಾ ನಂಬಿಕಸ್ಥನಂತೆ ನಡೆದುಕೊಂಡ ಈತ ಕ್ರಮೇಣ ಬದಲಾಗುವುದನ್ನು ಕತೆಯಲ್ಲಿ ಕಾಣುತ್ತೇವೆ. ರಂಜಾನ್ ಹಬ್ಬಕ್ಕೆ ಹಣವನ್ನು ಕಳುಹಿಸಿ. ತಾನೂ ಬರುವ ಸೂಚನೆಯನ್ನು ನೀಡಿ ನಂತರ ಮನೆಯವರ ನಂಬಿಕೆಯನ್ನು ಹುಸಿಗೊಳಿಸುತ್ತಾನೆ. ಹಬ್ಬಕ್ಕೆ ನಾಲ್ಕು ದಿನಗಳಿರುವಾಗ ವಿನಾಕಾರಣ ತನ್ನ ಹೆಂಡತಿ ಜರೀನಳಿಗೆ 'ತಲಾಖ್' ಕಳುಹಿಸುತ್ತಾನೆ.

'ಧರ್ಮ ಬಲೆ ಬೀಸಿದಾಗ' ಕತೆಯ ಖತೀಜಾಬಿಯ ಮೇಲೆ ಸುಳ್ಳು ಆರೋಪಗಳನ್ನು ಹೊರಿಸಲು ಗಂಡ 'ಕರೀಂಸಾಬು' ಜೊತೆಯಲ್ಲಿ ಇಲ್ಲದಿದ್ದದ್ದು ಒಂದು ಕಾರಣ ಎನ್ನಬಹುದು. ಅದೇ ರೀತಿ 'ಅಂಕುರ' ಕತೆಯ ಸಲೀಂ ದುಡಿಯುವ ನಿಮಿತ್ತ ಕೊಲ್ಲಿರಾಷ್ಟ್ರದಲ್ಲಿದ್ದು, ಇವನ ಅನುಪಸ್ಥಿತಿಯಲ್ಲಿ ಇವನ ಅಣ್ಣ ಕರೀಂ ಮತ್ತು ತಾಯಿ ಆಸ್ಯಮ್ಮಳಿಂದ ಹೆಂಡತಿ ಶಕೀಲಾ ಮಾನಸಿಕ ಚಿತ್ರ ಹಿಂಸೆಯನ್ನು ಅನುಭವಿಸುವುದನ್ನು ಕತೆಯಲ್ಲಿ ಕಾಣಬಹುದು. ಬಾವ ಕರೀಂ ತನ್ನ ಮಾತುಗಳನ್ನು ನಾದಿನಿ ಶಕೀಲಾ ಪ್ರತಿಭಟಿಸಿದಳೆಂಬ ಕಾರಣಕ್ಕೆ ಅವಳಿಗೆ ಅನೈತಿಕ ಸಂಬಂಧವಿದೆ ಎಂಬ ಸುಳ್ಳು ಹೇಳಿ ತಮ್ಮನಿಂದ 'ತಲಾಖ್' ಕೊಡಿಸಿ ತವರಿಗೆ ಅಟ್ಟಿ ತನ್ನ ಕ್ರೌರ್ಯವನ್ನು ಎಸಗುತ್ತಾರೆ. ಇದರಿಂದಾಗಿಯೇ ಮುಸ್ಲಿಂ ಸಮಾಜದ ಹೆಣ್ಣುಗಳು ಧ್ವನಿ ಇದ್ದೂ ಇಲ್ಲದಂತೆ ಬದುಕುವ ಮೂಕ ಸ್ಥಿತಿಯನ್ನು ಅನುಭವಿಸುವಂತಾಗಿದೆ ಎಂಬುದನ್ನು ಕತೆಯಲ್ಲಿ ಕಾಣಬಹುದು.

ಕೌಟುಂಬಿಕ ಸಂಬಂಧಗಳ ಒಳಗೆ ಆರ್ಥಿಕ ಸ್ಥಿತಿಗತಿಯ ಚಿಂತನೆಯು ಪ್ರಧಾನವಾದಾಗ, ವೈಯಕ್ತಿಕ ದ್ವೇಷ ನಿಂದನೆಗಳ ಮೂಲಕ ಸಂಬಂಧಗಳು ಅರ್ಥ ಕಳೆದುಕೊಂಡು, ವ್ಯಕ್ತಿಯ ಸ್ಥಾನಮಾನಗಳು ಮುಖ್ಯವಾಗಿ

'ಹೇಗಾದರೂ ಹಣ ಸಂಪಾದನೆ' ಮಾಡಬೇಕೆಂಬ ಹಠ ಮನುಷ್ಯನಲ್ಲಿ ಬೇರೂರಿರುತ್ತದೆ. ಆರ್ಥಿಕ ಅಸಮಾನತೆಯೇ ಅಪರಾಧಗಳಿಗೆ ಮೂಲ ಎಂಬುದನ್ನು ಸಾರಾ ಅವರ 'ಬಿತ್ತಿಬೆಳೆದವರು' ಕತೆ ಅಭಿವ್ಯಕ್ತಿಸುತ್ತದೆ.

"ಹಣವಿಲ್ಲದವನು ಹೆಣಕ್ಕೆ ಸಮಾನ" ಎಂದು ತೀರ್ಮಾನಿಸಿ ಹೇಗಾದರೂ ಸರಿ ಹಣ ಮಾಡಬೇಕು. ನನ್ನನ್ನು ಕೀಳಾಗಿ ಕಂಡವರನ್ನು ನಾನೂ ಕೂಡ ಕಾಲ ಕಸದಂತೆ ಕಾಣುವ ಒಂದು ದಿನ ಬರಬೇಕು" ಎಂಬುದೇ ಮಮ್ಮದ್‌ನ ಬಾಳಿನ ಏಕೈಕ ಗುರಿಯಾಯಿತು. ಶಿಕ್ಷಣಜ್ಞಾನವಿಲ್ಲದಿದ್ದರೂ ವ್ಯವಹಾರದ ಜ್ಞಾನದಲ್ಲಿ ಚುರುಕಾಗಿದ್ದ ಮಮ್ಮದ ಸಿರಿವಂತನಾಗಲು ಶ್ರದ್ಧೆ ನಿಷ್ಠೆಗಳಿಂದ ದುಡಿದು ಬಹಳ ಬೇಗನೆ ಪ್ರಗತಿ ಸಾಧಿಸುತ್ತಾನೆ. 'ಗಂಗೆಯಲ್ಲಿ ಮುಳುಗಿ ಬಂದರೆ ಪಾಪವೆಲ್ಲಾ ಪರಿಹಾರ' ವೆಂಬಂತೆ ಮುಸಲ್ಮಾನರಲ್ಲಿ ಹಜ್ ಯಾತ್ರೆಗೆ ಹೋಗಿ ಬಂದರೆ ಪಾಪಿಷ್ಟನೂ ಮಹಾತ್ಮನಾಗುತ್ತಾನೆ. ಮಮ್ಮದ್ ತಾನು ಅನುಭವಿಸಿದ ಅವಮಾನಗಳಿಗೆ ಉತ್ತರ ವೆಂಬಂತೆ ಹಣ ಗಳಿಸುತ್ತಾ ಊರಿನ ಶ್ರೀಮಂತನಾಗಿ ಬೆಳೆದು ಮುಂದೆ 'ಹಜ್‌ಯಾತ್ರೆ' ಮುಗಿಸಿ 'ಮಹಮ್ಮದ್ ಹಾಜಿ' ಆಗುತ್ತಾರೆ. ತನ್ನ ಮಕ್ಕಳಿಂದ ಸಹಿ ಮಾಡುವುದನ್ನು ಕಲಿತುಕೊಂಡ ಇವನ ದೃಷ್ಟಿಯಲ್ಲಿ ಮನುಷ್ಯನಿಗೆ ಶಿಕ್ಷಣ ಅನಿವಾರ್ಯವಲ್ಲ. "ಇಷ್ಟು ವರ್ಷ ಅಕ್ಷರವಿಲ್ಲದೆ ವ್ಯಾಪಾರ ಮಾಡಿ ನಾನು ಹಣ ಸಂಪಾದಿಸಿಲ್ಲವೇ? ನನ್ನೊಡನೆ ಸೇರಿಕೊಂಡು ವ್ಯಾಪಾರದ ಮರ್ಮವನ್ನೆಲ್ಲಾ ಕಲಿತುಕೋ ಅಷ್ಟು ಸಾಕು" ಎಂದು ಮಗನಿಗೆ ಬುದ್ಧಿ ಹೇಳುತ್ತಾನೆ. ತನಗೆ ಒದಗಿ ಬಂದ ಎಲ್ಲಾ ಸಂದರ್ಭಗಳನ್ನೂ ಪೂರಕವಾಗಿ ಬಳಸಿಕೊಂಡು ಹಣ ಸಂಪಾದನೆಗೆ ದಾರಿಯಾಗಿಸಿಕೊಳ್ಳುವ ಕುಶಲತೆಯನ್ನು ತೋರುತ್ತಾನೆ. 'ಕೈಯಲ್ಲಿಕೊಟ್ಟು; ಚೀಲದಲ್ಲಿ ತುಂಬಿಕೋ' ಎಂಬ ಮಾತಿನಂತೆ ರಾಜಕೀಯ ಪಕ್ಷದವರಿಗೆ ಚುನಾವಣೆಗಾಗಿ ವಂತಿಗೆಯನ್ನು ನೀಡುತ್ತಾನೆ.

ಹಿಂದೊಮ್ಮೆ ತಮ್ಮ ಮಿಲ್ಲಿನ ಕಾರ್ಮಿಕರನ್ನು ಸಂಘಟಿಸಿ ಮುಷ್ಕರ ಮಾಡಿಸಿದ ಮುಖಂಡನಿಗೂ ಹಣದ ಸಹಾಯ ಹಸ್ತವನ್ನು ನೀಡಿದಾಗ ಮಗನ ಪ್ರಶ್ನೆಗೆ "ನಿನಗೆ ಗೊತ್ತಾಗುವುದಿಲ್ಲ ಮಗಾ. ಅದೆಲ್ಲ ಎಲ್ಲಿ ಬಿತ್ತಬೇಕು, ಹೇಗೆ ಬೆಳೆ ತೆಗೆಯಬೇಕು ಎಂಬುದೊಂದೂ ನಿಮಗೆ ಗೊತ್ತಿಲ್ಲ. ಕೊಂಚದಿನ ಕಳೆಯಲಿ ನಾನೆಲ್ಲವನ್ನು ಹೇಳುವೆ"[೩೯] ಎಂದು ಸಂಪಾದನೆಯ ಹಾದಿಯಲ್ಲಿ ರಾಜಕೀಯದಿಂದ ಲಾಭಪಡೆಯುವ ಹುನ್ನಾರವನ್ನು ನಡೆಸುತ್ತಾನೆ. ಕಾಡು ಕಡಿಯುವ ಗುತ್ತಿಗೆಯನ್ನು ತನ್ನದಾಗಿಸಿಕೊಂಡು ಲಕ್ಷಗಟ್ಟಲೆ ಹಣವನ್ನು ಕಬಳಿಸುತ್ತಾನೆ. ರಾಜಕೀಯದಲ್ಲಿ ರಾಜಕೀಯ ಅಧಿಕಾರಕ್ಕಿಂತ, ರಾಜಕಾರಣಿಗಳನ್ನು ತನ್ನ ಬುಟ್ಟಿಯಲ್ಲಿ ಇಟ್ಟುಕೊಂಡರೆ ಹಣದ ಗಿಡಕ್ಕೆ ಮುಪ್ಪೇ ಬರುವುದಿಲ್ಲವೆಂದು ತಿಳಿದವನು.

ಸಾಮಾಜಿಕ ಅಸಮಾನತೆಗಳು, ವರ್ಗಾಧಾರಿತ ಪರಿಕಲ್ಪನೆಗಳು ಮೌಲ್ಯಾಧಾರಿತ ಆಶಯಗಳನ್ನು ಕಬಳಿಸಿ ವ್ಯವಸ್ಥೆ ನಿರ್ಮಿಸಿದ ಬದುಕಿನಲ್ಲಿ ಅರ್ಥ ಹುಡುಕುವ ಪ್ರಯತ್ನವನ್ನು ಮಾಡುತ್ತವೆ. ಆರೋಗ್ಯಕರವಾಗಿ ಬೆಳೆಯಬಹುದಾದ ಸಂಬಂಧಗಳು ಮುರುಟಿ, ಆತಂಕಕಾರಿಯಾಗಿ ಬದಲಾವಣೆ ಹೊಂದುವುದು ವಿಪರ್ಯಾಸವೆನಿಸುತ್ತದೆ. ಆರ್ಥಿಕ ಅಸಮಾನತೆ, ಅತಿಯಾದಾಗ ಮನುಷ್ಯ ಅಸಹಾಯಕನಾಗಿ, ಕ್ಷುದ್ರನಾಗಿ, ಕೀಳು ಮಟ್ಟದ ಎಂಥಾಕೃತ್ಯವನ್ನು ಎಸಗಲು ಸಿದ್ಧನಾಗುತ್ತಾನೆ. ಆತ ಸಾಮಾಜಿಕ ಜವಾಬ್ದಾರಿಯುಳ್ಳ ಮನುಷ್ಯನಾಗಿ ರೂಪುಗೊಳ್ಳುವುದಕ್ಕಿಂತ ಸಮಾಜ ಬಾಹಿರ ಘಟಕಗಳ ಮೂಲಶಕ್ತಿಯಾಗಿ ಪರಿವರ್ತಿತನಾಗುವ ಅಪಾಯವನ್ನು ಈ ಕಥೆ ಬಿಂಬಿಸಿದೆ.

ಕೌಟುಂಬಿಕ ಸಂಬಂಧದೊಳಗೆ ಬಡವ- ಬಲ್ಲಿದ ಎಂಬ ಮನೋಧರ್ಮಗಳು ಬೆಳೆದು ಅವು

ಸಾಮಾಜಿಕ ಸ್ತರದಲ್ಲಿ ವ್ಯಕ್ತಿತ್ವಗಳಿಗಿಂತ ಅಂತಸ್ತಿಗೆ ಪ್ರಾಮುಖ್ಯತೆ ದೊರೆಯುವುದರಿಂದ ಇಂಥ ವ್ಯವಸ್ಥೆಯಲ್ಲಿ ಬೆಳೆಯುವ ಯುವಕರು ಕೂಡ ಹಣಸಂಪಾದನೆಯ ದಂಧೆಗೆ ಕೈ ಹಾಕುತ್ತಾರೆ. ಇದರಿಂದ ಸಾಮಾಜಿಕ ವಿನಾಶಕಾರಕ ವ್ಯಕ್ತಿಗಳು ಪ್ರಬಲರಾಗಿ ಸಮಸ್ಯೆಗಳು ಸೃಷ್ಟಿಯಾಗಿ, ಬದುಕಿನ ನೆಮ್ಮದಿಯನ್ನು, ಸಮಾಜದ ಆರೋಗ್ಯವನ್ನು ಹಾಳು ಗೆಡವುತ್ತವೆ. ಸಾರಾ ಅವರು ತಮ್ಮ ಸಾಮಾಜಿಕ ಚಿತ್ರಣಗಳನ್ನು ಬಿಂಬಿಸುವ ಕಾದಂಬರಿಯ ಯುವ ಪಾತ್ರಗಳು ಈ ರೀತಿಯ ಅಡ್ಡದಾರಿ, ಅಡ್ಡ ಸಂಪಾದನೆಯ ಮೂಲಕ ಬಹುಬೇಗ ಶ್ರೀಮಂತರಾಗುವ ಹಂಬಲ ಹಂಬಲಿಸುತ್ತಾರೆ. ಇಲ್ಲಿ ಆದರೆ ಮುಖ್ಯವಾಗಿ ಗಮನಿಸಬೇಕಾದದ್ದು, ಇಂಥ ಯುವಕರು ಕಡು ಬಡತನದ ಬದುಕಿನಿಂದ, ಒತ್ತಡಗಳಿಂದ ರೋಸಿ ಹೋಗಿ ದಾರಿ ತಪ್ಪಿದವರು, ವರ್ಗ ಸಮಾಜದ ಈ ನೀತಿಯಿಂದಾಗಿ ಬದುಕಿನಲ್ಲಿ ಇಂಥ ವೈರುದ್ಯಗಳು ಕಾಣುತ್ತವೆ. ಹಣ ಸಂಪಾದನೆಗಾಗಿ ರಾಜಕೀಯ ಲಾಭ ಪಡೆಯುವ ಮಮ್ಮದ್ ಹಾಜಿ ಯಂಥವರೇ ಸಮಾಜ ಘಾತುಕ, ವಂಚಕ, ವಿನಾಶಕಾರಕ ಶಕ್ತಿಯಾಗುವ ಅಪಾಯ ತೆರೆದುಕೊಳ್ಳುತ್ತದೆ.

ಸಾರಾ ತಮ್ಮ ಸಾಹಿತ್ಯದಲ್ಲಿ ಬಡತನವನ್ನೇ ಸ್ಥಾಯಿಯಾಗಿಟ್ಟುಕೊಂಡು ಬರೆದವರಲ್ಲ. ಮುಸ್ಲಿಂ ಮಹಿಳೆಯ ಬದುಕನ್ನು ತೆರೆದಿಡುವಾಗ ಅವು ಹಾಸು ಹೊಕ್ಕಾಗಿ ಬೆರೆತುಕೊಂಡಿವೆ. ಇಲ್ಲಿನ ಬಹಳಷ್ಟು ಸ್ತ್ರೀ ಪಾತ್ರಗಳು ತಮ್ಮ ಗಂಡಂದಿರಿಂದ ವಂಚಿತರಾಗಿ ಹೆತ್ತವರ ಆಶ್ರಯವೂ ಇಲ್ಲದೆ ಕರುಳ ಕುಡಿಗಳ ಉಳಿವಿಗಾಗಿ ಹೊಯ್ದಾಡುತ್ತವೆ. ಚಿಕ್ಕ ಪುಟ್ಟ ಆಸೆಗಳನ್ನು ಈಡೇರಿಸಿಕೊಳ್ಳಲಾಗದೆ ಪರಿತಪಿಸುತ್ತವೆ. ಬಹಳ ಮಕ್ಕಳ ಬಡತನದ ಸಂಸಾರದಲ್ಲಿ ದುಡಿಯುವ ಕೈ ಒಂದೋ- ಎರಡೋ, ಆದರೆ ತಿನ್ನುವ ಬಾಯಿಗಳು ಹೆಚ್ಚು, ಎಷ್ಟು ದುಡಿದರೂ 'ಹಸಿವೆಂಬ ಬ್ರಹ್ಮರಾಕ್ಷಸನಿಗೆ ಮೂರು ಕಾಸಿನ ಮಜ್ಜಿಗೆ'ಎಂಬಂತೆ ಅರೆಹೊಟ್ಟೆ, ಹಳೆ ಬಟ್ಟೆ, ಅರೆನಿದ್ರೆ ಇಂಥ ಅಸಹಾಯಕ ಬದುಕಿನಲ್ಲಿ ತೊಳಲಾಡುವುದನ್ನು 'ಬಿರುಗಾಳಿ', ' ಮಸೀದಿಕಟ್ಟುವವರು', 'ಮರಿಯಮ್ಮನ ಅಳಿಯ', 'ಮೂಲೆ ಮುಟ್ಟಿದ ಹುಳು', 'ಬಿಸಿಲ್ಗುದುರೆ ಬೆನ್ನತ್ತಿ' ಕತೆಗಳು ವಸ್ತುನಿಷ್ಟವಾಗಿ ಬಿಂಬಿಸಿದೆ.

'ಬಿರುಗಾಳಿ' ಕತೆಯ ಫಾತಿಮ್ಮ ಗಂಡನಿಂದ ತಲಾಖ್‌ಗೆ ಒಳಗಾಗಿ ಇಬ್ಬರು ಚಿಕ್ಕಮಕ್ಕಳನ್ನು ಕಟ್ಟಿಕೊಂಡು ಊರಿಗೆ ಬಂದಾಗ ಆಕೆಗೆ ಸಹಾಯ ಮಾಡಿದ ಚಿಕ್ಕಪ್ಪ, ಅವರ ಉಪವಾಸದ ದಿನಗಳನ್ನು ತಪ್ಪಿಸಲು ಮಕ್ಕಳನ್ನು ಹಡಗಿನಲ್ಲಿ ಕೆಲಸ ಮಾಡಲು ಸೇರಿಸಿದರು. ಬಡತನದಿಂದ ಬೇಸತ್ತು ಹೋಗಿದ್ದ ತಾಯಿ ಹೃದಯಕ್ಕೆ ಮಕ್ಕಳನ್ನು ಇಂಥ ಅಪಾಯದ ವೃತ್ತಿಯಲ್ಲಿ ತೊಡಗಿಸಲು ಕೊಂಚವೂ ಇಷ್ಟವಿಲ್ಲದಿದ್ದರೂ ಒಪ್ಪಿಗೆ ನೀಡುತ್ತಾಳೆ. ಹೃದಯ ಹಂಬಲಕ್ಕಿಂತ ಬದುಕಿನ ವಾಸ್ತವ ಅವಳಲ್ಲಿ ಈ ನಿರ್ಧಾರವನ್ನು ಮಾಡಿಸುತ್ತದೆ. ಮಕ್ಕಳು ಬಿರುಗಾಳಿಗೆ ಸಿಕ್ಕಿ ಇನ್ನಿಲ್ಲವಾದಾಗ ಫಾತಿಮ್ಮಳ ಸಹಜ ಕ್ಷೇಮ ಕಾತರಗಳೆಲ್ಲ ಕ್ಷಣ ಮಾತ್ರದಲ್ಲಿ ಕರಗಿ ಸಮುದ್ರದ ನೀರಿನಲ್ಲಿ ಮಕ್ಕಳು ಇಲ್ಲವಾದಂತೆ, ನಿಜದ ಬದುಕಿನ ಪ್ರಯಾಸಕರ ಜೀವನಯಾನದಲ್ಲಿ ಫಾತಿಮ್ಮ ಕಳೆದುಹೋಗುತ್ತಾಳೆ. ನಿಜದ ಅರ್ಥದಲ್ಲಿ ಎಲ್ಲಾ ರೀತಿಯಿಂದಲೂ ಬದುಕನ್ನು ಕಳೆದುಕೊಂಡ ಫಾತಿಮಾಳಿಗೆ ಹಡಗಿನ ಒಡೆಯರು ಯಾವ ಸಹಾಯವನ್ನೂ ಮಾಡದೆ ಮೋಸ ಮಾಡಿಬಿಡುತ್ತಾರೆ. ಮತಧರ್ಮಗಳು ಸೃಷ್ಟಿಸಿದ ಸಮಸ್ಯೆಯ ಸುಳಿಯೊಳಗೆ ಸಿಕ್ಕ ಪಾತಿಮ್ಮಳಿಗೆ ಈಗ ಬೇಕಿರುವುದು ಮತಧರ್ಮಗಳಾಚೆಯ ಮಾನವೀಯ ಅಪ್ಪುಗೆ.

ಒಡೆಯರ ನಿರ್ಲಕ್ಷ್ಯ, ಬಡತನ, ನಿರುದ್ಯೋಗ, ವ್ಯವಸ್ಥೆಯ ಅನ್ಯಾಯ, ಶೋಷಣೆ ಹೆಣ್ಣಿನ ಸಂತೋಷವನ್ನೇ ಕಸಿದುಕೊಂಡಿದೆ. ಬಡತನ ಅಸಹಾಕತೆ ಮುಗ್ಧತೆಯನ್ನು ಬಳಸಿಕೊಂಡು ಗರ್ಭಿಣಿ ಹೆಂಡತಿಗೆ ಮತ್ತು ಅತ್ತೆಯ ನಂಬಿಕೆಗೆ ಮಣ್ಣೆರಚಿ, ನಿರ್ಗತಿಕರನ್ನಾಗಿ ಮಾಡಿದವನು. 'ಮರಿಯಮ್ಮನ ಅಳಿಯ' ಕತೆಯ

ಮೈದೂ. ಬದುಕಿಗಂಟಿದ ದಟ್ಟ ದಾರಿದ್ರ್ಯವನ್ನು ಹೇಗಾದರೂ ನಿವಾರಿಸಿಕೊಳ್ಳಬೇಕೆಂದು ಅದಕ್ಕಾಗಿ ಗಂಡ ಮೂಸೆ; ಕೊಲ್ಲಿಗೆ ಹೋಗಬೇಕೆಂಬ ಒತ್ತಾಯವನ್ನು ಹೆಂಡತಿ ಮಾಡುತ್ತಾಳೆ. ಆ ಕಾರಣದಿಂದ ಮೂಸೆ ಹಣದ ಪೂರೈಕೆಗಾಗಿ, ವರದಕ್ಷಿಣೆಯ ಹಣಕ್ಕಾಗಿ ಹೆಂಡತಿಗೆ ಒತ್ತಡವೇರುತ್ತಾನೆ. ಮದುವೆ ನಂತರ ಮಗಳ ಬದುಕಿನ ಕಡೆಗೆ ತಿರುಗಿ ನೋಡದೆ ಇರುವ ತವರವರಿಂದ ಹಣ ಕೇಳುವ ಹಿಂಸೆಗೆ ಅಸ್ಮ ಒಳಗಾಗುತ್ತಾಳೆ. ಆ ಕಾರಣಕ್ಕಾಗಿ ತಂದೆಯಿಂದ ನಿಂದನೆಗೆ ಗುರಿಯಾಗುತ್ತಾಳೆ. ಬಡವರಾದ ತವರವರೂ ಪೂರ್ತಿ ಹಣ ಹೊಂದಿಸಲಾರದೆ ತಮ್ಮ ಅಂಗೈ ಅಗಲದ ಜಾಗವನ್ನು ಒತ್ತೆ ಇಟ್ಟು ೩ ಸಾವಿರ ಸಾಲ ಕೊಡಿಸುತ್ತಾರೆ. ಮೂಸೆಯ ತಾಯಿ ಚಿನ್ನದ ಆಲಿಕತ್ತುನ್ನು ಮಾರಿ ಉಳಿದ ಹಣವನ್ನು ಪೂರೈಕೆ ಮಾಡುತ್ತಾಳೆ. ಮೂಸೆ ಕೊಲ್ಲಿರಾಷ್ಟ್ರಗಳಿಗೆ ಕೂಲಿಕಾರರನ್ನು ಕಳುಹಿಸುವ ಶ್ರೀಮಂತ ದಲ್ಲಾಳಿ ಶೇಕಾಲಿ ಮೂಲಕ ದುಬಾಯಿ ಪ್ರಯಾಣ ಬೆಳೆಸುತ್ತಾನೆ.

ದೂರದ ಬೆಟ್ಟ ನುಣ್ಣಗೆ ಎಂಬಂತೆ ಅಲ್ಲಿನ ಪರಿಸ್ಥಿತಿ ಮೂಸೆಗೆ ಕಠಿಣಕಾರಿ ಎನಿಸುತ್ತದೆ. "ನನ್ನ ಆರೋಗ್ಯವೂ ಕೆಟ್ಟಿದೆ, ಒಮ್ಮೆ ಈ ಸಾಲ ಮುಗಿದರೆ ನಾನು ಊರಿಗೆ ಬಂದು ಬಿಡುತ್ತೇನೆ. ಇಲ್ಲಿನ ಈ ಕೆಲಸಕ್ಕಿಂತ ಊರಿನ ಕೂಲಿ ಕೆಲಸವೇ ವಾಸಿ. ಊರಿನಲ್ಲಿ ಮಕ್ಕಳ ಮುಖ ನೋಡಿ ಕೊಂಡಾದರೂ ನನ್ನ ದಣಿವನ್ನೆಲ್ಲಾ ಮರೆಯಬಹುದು"[೬೦] ಎಂದು ಪತ್ರ ಬರೆಯುತ್ತಾನೆ. ಮೂಸೆಯಿಂದ ನಂತರ ಬಹಳ ದಿನಗಳಾದರೂ ಯಾವ ಸುದ್ದಿಯೂ ಇಲ್ಲದೆ ಕುಟುಂಬ ಆತಂಕಕ್ಕೆ ಒಳಗಾಗುತ್ತದೆ. ಅವನ ಇರುವಿಕೆಯ ಸುದ್ದಿಯನ್ನು ತಿಳಿಯಲು ಚಡಪಡಿಸುತ್ತದೆ. ಈ ಸಂಬಂಧವಾಗಿ ಒಡೆಯರ ಮನೆಗೆ ಹೋಗಿ, ಹೇಗೋ ಅವಕಾಶ ಗಿಟ್ಟಿಸಿಕೊಂಡು ಶೇಕ್ ಆಲಿಯನ್ನು ಭೇಟಿಮಾಡಿದಾಗ 'ಒಮ್ಮೆ ಅಲ್ಲಿ ಕೆಲಸಕ್ಕೆ ಸೇರಿದ ಮೇಲೆ ನನ್ನ ಜವಾಬ್ದಾರಿ ಮುಗಿಯಿತು. ನೀವು ಇಲ್ಲಿಯ ತನಕ ಬಂದುದ್ದಕ್ಕಾಗಿ ಪತ್ರ ಬರೆದು ವಿಚಾರಿಸುತ್ತೇನೆ. ಆದರೆ ಪದೇ ಪದೇ ಬಂದು ನನಗೆ ತೊಂದರೆ ಕೊಡಬೇಡಿ' ಎಂದು ತಿಳಿಸುತ್ತಾನೆ. ಈ ಮಾತು ಉಳ್ಳವರ ನಿರ್ಲಕ್ಷ್ಯ, ಉದಾಸೀನತೆಯ ಪ್ರತೀಕವಾಗಿದೆ. ಮಾಡಿದ ಸಾಲಕ್ಕೆ ಗಳಿಸಿದ ಹಣ ಸಾಲದಾದಾಗ, ಸಾಲ ಕೊಡುವ ಅಂಗಡಿಯವನು ದುಬಾಯಿ ಹಣವೆಂದು ದುಬಾರಿ ಬೆಲೆ ವಸೂಲಿಗೆ ನಿಲ್ಲುವುದು ಶೋಷಣೆಯ ಇನ್ನೊಂದು ಮುಖ. ಬಡವರು ಏನು ಮಾಡಲು ಹೋದರೂ 'ಬೆಟ್ಟ ಅಗೆದು ಇಲಿ ಹಿಡಿದಂತೆ' ಅಥವಾ ಅಗೆದದ್ದಷ್ಟೇ ಲಾಭ ಎಂಬಂತೆ 'ಬಡತನ' ಮತ್ತಷ್ಟು ಹೆಚ್ಚಾಗಿದೆ. ಕೊಲ್ಲಿಯಲ್ಲಿ ಅನುಭವಿಸಿದ ವೇದನೆ ಮೂಸೆಯನ್ನು ಅಧೀರನನ್ನಾಗಿಸಿದರೆ ಅಸ್ಮಾಳಿಗೆ ಬದುಕಿನ ಬಗ್ಗೆ ಕಹಿ ಭಾವನೆ ಮೂಡಿಸಿದೆ. ತಾಯಿಗೆ ನಿರಾಶೆ ಕಾಡಿದೆ. ಬಡವರ ಮುಗ್ಧತೆಯನ್ನು ಬಂಡವಾಳ ಮಾಡಿಕೊಂಡು ಹಣ ಕಬಳಿಸುವ ಶೇಕಾಲಿಯಂತವರು 'ಮಸೀದಿ ಕಟ್ಟಿಸುವುದರ' ಮೂಲಕ ಪುನೀತರಾಗುವ ವ್ಯಂಗ್ಯವನ್ನು ಕತೆ ಕಾಣಿಸುತ್ತದೆ. ಬಡವರ ಕಷ್ಟ-ಸುಖಗಳನ್ನು ನೋಡದ ಕಾಣದ ಜನ ಬಡವರ ಉದ್ಧಾರಕ್ಕಾಗಿ 'ಮಸೀದಿ'ಯೊಂದನ್ನು ನಿರ್ಮಾಣಮಾಡುವುದು ಇಸ್ಲಾಂ ಧಾರ್ಮಿಕ ನಿಯಮಗಳನ್ನೇ ಗಾಳಿಗೆ ತೂರಿ ವ್ಯಕ್ತಿಯ ಸ್ವಾರ್ಥ, ವೈಯಕ್ತಿಕ ಪ್ರತಿಷ್ಠೆಯನ್ನು ಬೆಳಸಿಕೊಳ್ಳುವುದರ ಮೂಲಕ ಧರ್ಮಾತ್ಮರೆನಿಸಿ ಕೊಳ್ಳುವುದರ ವ್ಯಂಗ್ಯವನ್ನು ಕತೆ ಅರ್ಥಪೂರ್ಣವಾಗಿ ಧ್ವನಿಸಿದೆ.

'ಬಿಸಿಲ್ಗುದುರೆಯ ಬೆನ್ನತ್ತಿ' ಕತೆಯಲ್ಲಿ ಬಡತನದ ನಿವಾರಣೆಗಾಗಿ ಕೆಲಸಕ್ಕಾಗಿ 'ದುಬಾಯಿ'ಗೆ ಕಳಿಸಲು ಬೇಕಾದ ಹಣಕ್ಕಾಗಿ ಹಮೀದನ ಅಕ್ಕ ನೆಬೀಸಾ ಶ್ರೀಮಂತ ಮುದುಕನನ್ನು ಮದುವೆಯಾಗುವಳು. ಅಕ್ಕ ತನ್ನ ಮನಸನ್ನು, ಬದುಕನ್ನು ಬಲಿಯಾಗಿಸಿಕೊಂಡು ತಮ್ಮನಿಗೆ ಹಣ ಒದಗಿಸಿದರೆ, ಶ್ರೀಮಂತ ದಲ್ಲಾಳಿಯ ವಂಚನೆಗೆ

ಒಳಗಾಗಿ ಬಡತನ ಇನ್ನಷ್ಟು ಬಿಗಡಾಯಿಸುತ್ತದೆ. ನೆಮ್ಮದಿಯ ಬದುಕಿಗಾಗಿ ಹಾತೊರೆದ ಹೆಣ್ಣು ಹೃದಯಗಳು ಜೀವಂತವಾಗಿ ದಹಿಸಿಹೋಗುವುದನ್ನು ಕತೆ ಮಾರ್ಮಿಕವಾಗಿ ಕಟ್ಟಿಕೊಡುತ್ತದೆ.

ಇಂಥ ಅಪ್ರಾಪ್ತ ವಯಸ್ಸಿನ ವಿವಾಹಗಳು ಮುಸ್ಲಿಂ ಸಮಾಜದಲ್ಲಿ ಒಪ್ಪಿತವಾಗಿದೆ. ಸಾಮಾನ್ಯವಾಗಿ ಹನ್ನೆರಡರಿಂದ ಹದಿನಾಲ್ಕು ವರ್ಷಕ್ಕೆ ಸಾಂಸಾರಿಕ ವ್ಯವಸ್ಥೆಯೊಳಗೆ ಪ್ರವೇಶ ಮಾಡುವ ಹೆಣ್ಣುಮಕ್ಕಳು ಮದುವೆ-ಗಂಡ-ಮನೆ- ಮಕ್ಕಳು ಸಂಸಾರದ ಆಪ್ತತೆಯನ್ನು ಅರಿಯವ ಮೊದಲೇ ವಿಘಟನೆಗೆ ಬಲಿಯಾಗುತ್ತಾರೆ. ಸಾರಾ ಅವರ ಸಾಹಿತ್ಯವನ್ನು ಗಮನಿಸಿದಾಗ ಹೆಣ್ಣು ಮಕ್ಕಳು ಪ್ರಾಪ್ತ ವಯಸ್ಸಿಗೆ ಬರುವ ವೇಳೆಗಾಗಲೇ ಅವಳು 'ಗಂಡ ಬಿಟ್ಟವಳಾಗಿ' ಬದುಕಬೇಕಾದ ಸ್ಥಿತಿಯೇ ಹೆಚ್ಚು.

'ಸಹನಾ' ಕಾದಂಬರಿಯ ನಾಯಕಿ ನಸೀಮಾಳ ಬಾಳು ಹಾಳಾಗುವುದಕ್ಕೆ, ಚಪ್ಪಲಿಗಳು ಕಥೆಯ ನಾಯಕಿ ಸಮೀರಳ ಬದುಕು, ಹುಟ್ಟು ಕತೆಯ ನಾಯಕಿ 'ಕದೀಜಾ' ಳ ಸುಂದರವಾದ ಬದುಕು ಕಮರಿ ಹೋಗಲು ಬಾಲ್ಯ ವಿವಾಹವೂ ಕಾರಣವಾಗಿದೆ. ತಮ್ಮ ಮಕ್ಕಳನ್ನು ಚಿಕ್ಕ ವಯಸ್ಸಿನಲ್ಲೆ ಮದುವೆ ಮಾಡಲು ತಂದೆ-ತಾಯಿಗಳು ಕಾತುರ ಪಡುವುದು ಸರ್ವೇ ಸಾಮಾನ್ಯವಾದ ಸಂಗತಿ.

ಇಂತಹುದೇ ಸಮಸ್ಯೆಗಳನ್ನು ಕತೆಗಳಲ್ಲಿ ಕಂಡರಿಸಿದ ರೀತಿಯನ್ನು ಗಮನಿಸಬಹುದು. ಈ ಪ್ರಾತಿನಿಧಿಕ ಕತೆಗಳಲ್ಲಿ ಬಡತನದ ಸ್ಥಿತಿಯಿಂದ ವರದಕ್ಷಿಣೆ ಕೊಡಲಾಗದೆ ತಮ್ಮ ಮಗಳನ್ನು ವಯಸ್ಸಾದವರಿಗೆ ಮದುವೆ ಮಾಡಿ ಕೈತೊಳೆದುಕೊಳ್ಳುವ ಪರಿಸ್ಥಿತಿಗಳಿವೆ. ಇಂಥ ಮದುವೆಯನ್ನು ಧಿಕ್ಕರಿಸಿ ಮನೆಬಿಟ್ಟು ಓಡಿಹೋದ ಕದೀಜಾ ಹಲವಾರು ರೀತಿಯ ಸಂಕಷ್ಟಗಳನ್ನು ಎದುರಿಗೆ ಮೋಸಹೋಗಿ ಕೊನೆಗೆ ನಿರ್ಗತಿಕಳಾದ ಸ್ಥಿತಿಯನ್ನು 'ಒಂದು ಬದುಕಿನ ಕೆಲವು ಪುಟಗಳು' ಕತೆ ಚಿತ್ರಿಸಿದರೆ, ವರದಕ್ಷಿಣೆಯ ಕಾರಣಕ್ಕಾಗಿಯೇ ದೂರದ ಊರಿನ ಅನಾಥ ಹುಡುಗ ಮೈದುವಿನೊಂದಿಗೆ ಜುಲೇಖಳನ್ನು ಮದುವೆ ಮಾಡಿದ ಮರಿಯಮ್ಮ ತನ್ನ ಅಳಿಯನನ್ನು ಮನೆಯ ಮಗನಂತೆ ಕಂಡು ನೆಮ್ಮದಿಯ ಉಸಿರು ಬಿಡುವುದರೊಳಗೆ, ಫೋಟೋ ತೆಗೆಸುವ ನೆಪದಲ್ಲಿ ಹೆಂಡತಿಯನ್ನು ಒಡೆಯರ ಮನೆಯ ಚಿನ್ನದ ಹಾರವನ್ನು ತರುವಂತೆ ಪುಸಲಾಯಿಸಿ, ನಂತರ ಅಪಹರಿಸಿ ತಲೆಮರೆಸಿಕೊಂಡು ಜೀವಮಾನವಿಡೀ ಹೆಂಡತಿ ಮತ್ತು ಅತ್ತೆಯನ್ನು ಜೀತದಾಳುಗಳಾಗಿ ಮಾಡಿ, ಗರ್ಭಧರಿಸಿದ ಹೆಂಡತಿಯನ್ನು, ಅವರ ನಂಬಿದ ಅತ್ತೆಯನ್ನು ನಿರ್ಗತಿಕರನ್ನಾಗಿಸಿದ ಸ್ಥಿತಿಯನ್ನು 'ಮರಿಯಮ್ಮನ ಅಳಿಯ' ಕತೆ ಬಿಂಬಿಸಿದೆ. ಹೆಣ್ಣು ಹೆತ್ತವರನ್ನು ಅವಮಾನಿಸುತ್ತಾ ವರದಕ್ಷಿಣೆಯ ಕಾರಣಕ್ಕೆ ಸೊಸೆಯನ್ನು ಜೀತದಾಳಿನಂತೆ ದುಡಿಸುವ, ತವರಿನ ಸಂಪರ್ಕವನ್ನೆ ಕಡಿದು ಹಾಕಿ, ಅತ್ತೆ ಮೈದುನರ ಕಿರುಕುಳವನ್ನು ಪ್ರತಿಭಟಿಸಿದಾಗ ಅನೈತಿಕ ಸಂಬಂಧದ ನೆಪವೊಡ್ಡಿ ಗಂಡನಿಂದ 'ತಲಾಖ್' ಕೊಡಿಸಿ ಶಕೀಲಳ ವೈವಾಹಿಕ ಬದುಕನ್ನೇ ನಾಶ ಮಾಡುತ್ತಾನೆ. ಇಲ್ಲಿ ಹಣದ ದಾಹ ಮನುಷ್ಯನನ್ನು ಎಷ್ಟು ಕ್ರೂರಿಯನ್ನಾಗಿಸುತ್ತದೆ ಎಂಬುದನ್ನು 'ಅಂಕುಶ' ಕಥೆ ಧ್ವನಿಸಿದೆ.

ಸಾರಾ ಅವರು ವರದಕ್ಷಿಣೆಯ ಸಮಸ್ಯೆಯ ಜೊತೆಯಲ್ಲೆ ತಳುಕು ಹಾಕಿಕೊಂಡಿರುವ ಅದರ ವಿಭಿನ್ನ ಸ್ವರೂಪವನ್ನು ಈ ಹಿನ್ನೆಲೆಯಲ್ಲಿ ಮಹಿಳೆ ಅನುಭವಿಸುವ ಆಘಾತಕಾರಿ ಹಿಂಸೆಯನ್ನು ವಾಸ್ತವದ ನೆಲೆಯಲ್ಲಿ ಚಿತ್ರಿಸಿದ್ದಾರೆ. ಸಾಮಾಜಿಕವಾಗಿ ಹೆಣ್ಣು ವರದಕ್ಷಿಣೆ ಎಂಬ ಪಿಡುಗಿನಿಂದ ಬಿಡಿಸಿಕೊಳ್ಳಲಾಗದೆ, ಇನ್ನೊಂದೆಡೆ ಮದುವೆ ಎಂಬ ವ್ಯವಸ್ಥೆಯಿಂದಲೂ ತಪ್ಪಿಸಿಕೊಳ್ಳಲಾಗದೆ ಇರುವ ಅತಂತ್ರ ಸ್ಥಿತಿಯನ್ನು ಕಟ್ಟಿಕೊಟ್ಟಿದ್ದಾರೆ.

ಈ ಎಲ್ಲಾ ಘಟನೆಗಳಲ್ಲಿ 'ಪುರುಷ' ಎಚ್ಚರದ ತಂತ್ರವನ್ನು ಉಪಯೋಗಿಸಿದ್ದಾನೆ. ಯಾವುದೇ

ಅಪರಾಧಗಳೂ ತನ್ನ ಮೇಲೆ ಬಾರದಂತೆ ನಿಗಾವಹಿಸಿ, ವ್ಯವಸ್ಥೆ ಮತ್ತು ಧರ್ಮದ ಬೆಂಬಲಪಡೆದು ತಾನೇ ರೂಪಿಸಿಕೊಂಡ ಇವುಗಳ ರಕ್ಷಣೆಯಲ್ಲಿ 'ಮಹಿಳೆ'ಯನ್ನು ಅಪರಾಧಿ ಸ್ಥಾನದಲ್ಲಿ ನಿಲ್ಲಿಸಿ ಕೈತೊಳೆದುಕೊಳ್ಳುವ ಕೃತ್ರಿಮತೆಯನ್ನು ಲೇಖಕಿ ಗಂಭೀರವಾಗಿ ವಿರೋಧಿಸಿದ್ದಾರೆ.

ಬಡತನವನ್ನೇ ಪ್ರಧಾನವಾಗಿಸಿಕೊಂಡು ಕಾದಂಬರಿಗಳನ್ನು ಬರೆಯದಿದ್ದರೂ ಬದುಕಿನ ಸಂದರ್ಭದಲ್ಲಿ ಅದು ಸ್ಥಾಯಿಯಾಗಿ ನಿಂತಿರುವುದನ್ನು ಸಾರಾ ಅವರ ಸಹನಾ ಮತ್ತು ಸುಳಿ ಕಾದಂಬರಿಗಳಲ್ಲಿ ಪ್ರಾತಿನಿಧಿಕವಾಗಿ ನೋಡಬಹುದು.

'ಸಹನಾ' ಮತ್ತು 'ಸುಳಿ' ಕಾದಂಬರಿಗಳು ಮುಸ್ಲಿಂ ಸಮಾಜದ ಬದುಕಿನ ಹಸಿವು, ಬಡತನ, ನಿರುದ್ಯೋಗ, ಅನಕ್ಷರತೆ, ಮೌಢ್ಯ, ಶೋಷಣೆ, ಆರ್ಥಿಕ ಅಸಮಾನತೆ, ವರ್ಗ ತಾರತಮ್ಯ, ಅಪರಾಧ ಇವುಗಳ ಬಹುಮುಖವನ್ನು ಗಾಢವಾಗಿ ಕಟ್ಟಿಕೊಡುತ್ತವೆ.

ಸಾರಾ ಅವರ ಕಥಾ ಸಾಹಿತ್ಯದಲ್ಲಿ ಚಿತ್ರಣಗೊಂಡಿರುವ ಬಹುಪಾಲು ಪೋಷಕ ಮಹಿಳಾ ಪಾತ್ರಗಳು, ತಮ್ಮ ಕುಡಿಗಳ ಏಳಿಗೆಗಾಗಿ ಪರಿತಪಿಸುತ್ತಾ, ಹೇಗಾದರೂ ವ್ಯವಸ್ಥೆ ಒಪ್ಪಿತ ನೆಲೆಯಲ್ಲೆ ಬದುಕನ್ನು ಸಾರ್ಥಕ ಗೊಳಿಸಿಕೊಳ್ಳುವ ಪ್ರಯತ್ನದಲ್ಲಿ ತೊಡಗಿರುತ್ತವೆ. ಕಟ್ಟಿಕೊಂಡವನು ಯಾವುದೇ ಸುಳಿವು ನೀಡದೆ ನಿರಾತಂಕವಾಗಿ ಬಿಟ್ಟು ಹೋದಾಗ ಬೇರೆ ದಾರಿ ಕಾಣದೆ ತನ್ನೊಡಲ ಕುಡಿಗೆ ಆಸರೆಯಾಗಿ ಸಂಸಾರದ ನೊಗವನ್ನು ತನ್ನ ಹೆಗಲಿಗೇರಿಸಿ ಹಗಲು-ರಾತ್ರಿಯೆನ್ನದೆ ಉಳ್ಳವರ ಮನೆಯಲ್ಲಿ ಚಾಕರಿ ಮಾಡುತ್ತಾರೆ. ಹೊಟ್ಟೆ ಬಟ್ಟೆಕಟ್ಟಿ ಮಗಳ ಭವಿಷ್ಯದಲ್ಲೇ ತನ್ನ ಬದುಕನ್ನರಸಿದ ಸಕೀನ ಮಗಳ ಮದುವೆಗಾಗಿ ಕಷ್ಟಪಟ್ಟು ಹಣ ಉಳಿಸಿ ಅದನ್ನು ಚೀಟಿ ವ್ಯವಹಾರ ಮಾಡುತ್ತಿದ್ದ ಮೈದೂವಿನಲ್ಲಿ ಕೊಟ್ಟರೆ ನಂಬಿಕೆ ದ್ರೋಹ ಬಗೆದು ಅಪಹರಿಸಿಕೊಂಡು ಹೋಗುತ್ತಾನೆ. ಸಂಪಾದಿಸಿದ ಹಣವೆಲ್ಲಾ ಹೆಣ್ಣುಮಕ್ಕಳಿಗಾಗಿ ಎಂಬ ಹಣೆಪಟ್ಟಿಯನ್ನು ಹೊತ್ತುಕೊಂಡರೂ, ಅದರ ಬಹುಪಾಲು ಬೇರೆಯವರಿಗೇ ಹೋಗುತ್ತದೆ. ಮದುವೆಗಾಗಿ ಗಂಡನ ಮನೆಗೆ ಹೋದ ನಸೀಮ ಬಡತನದ ಬವಣೆಯಿಂದಾಗಿ ಬಾಣಲಿಯಿಂದ ಬೆಂಕಿಗೆ ಬಿದ್ದವಳಂತಾಗುತ್ತಾಳೆ. ಮನೆಯ ಚಾಕರಿಗಳ ಜೊತೆಗೆ ಬೀಡಿಕಟ್ಟುವ ಕೆಲಸವೂ ಕಡ್ಡಾಯವಾಗುತ್ತದೆ. ತಿನ್ನುವ ಬಾಯಿಗೆ ತುಂಬುವ ಕೈಯಲ್ಲಿ ಹಾಗಾಗಿ ನಸೀಮ ಕ್ಷಯರೋಗಕ್ಕೆ ಗುರಿಯಾಗುತ್ತಾಳೆ.

ಈ ಮೇಲಿನ ಸಮಸ್ಯೆಗಳಲ್ಲದೆ ಬಾಲ್ಯವಿವಾಹವೂ ಮುಸ್ಲಿಂ ಸಮುದಾಯವನ್ನು ತೀವ್ರವಾಗಿ ಕಾಡಿರುವುದನ್ನು ಸಾರಾ ಅವರ ಸಾಹಿತ್ಯ ತೆರೆದಿಟ್ಟಿದೆ.

ವ್ಯಕ್ತಿ ನಿಯಮಗಳ ಅಡಿಯಲ್ಲಿ ಸಿಕ್ಕಿ ನರಳುತ್ತಿರುವ ಮುಸ್ಲಿಂ ಮಹಿಳೆಯರು ಈಗಲೂ ಬಾಲ್ಯವಿವಾಹದ ಎಲ್ಲಾ ಅನರ್ಥಗಳಿಗೂ ಬಲಿಯಾಗುತ್ತಲೇ ಇದ್ದಾರೆ. ದಾಂಪತ್ಯದ ಬದುಕಿಗೆ ಹಾಗೂ ಮಗುವನ್ನು ಹೆರಲು ಬೇಕಾದ ದೈಹಿಕ ಸಾಮರ್ಥ್ಯವನ್ನು ಪಡೆಯುವುದಕ್ಕಿಂತ ಪೂರ್ವದ ವಿವಾಹವನ್ನು ಬಾಲ್ಯವಿವಾಹವೆಂದು ಗುರುತಿಸಬಹುದು. ಇದು ಅಪ್ರಾಪ್ತ ವಯಸ್ಸಿನ ವಿವಾಹವಾಗಿರುತ್ತದೆ. ಈ ರೀತಿಯ ವಿವಾಹಗಳು ಗಂಡು ಸಮಾಜದ ಬೇಡಿಕೆಯೂ ಆಗಿದ್ದು, ಇದಕ್ಕೆ ಸಮಾಜದ ಬೆಂಬಲವೂ ಬೆರೆತು ಸಾರ್ವತ್ರಿಕ ಮನ್ನಣೆಯನ್ನು ಪಡೆದಿದೆ. ಹೀಗಾಗಿ ಕಾನೂನಿನ ನಿಯಮಗಳೇನೇ ಇದ್ದರೂ ಸಾಮಾಜಿಕ ವ್ಯವಸ್ಥೆಯ ಕಟ್ಟಳೆಗಳೇ ಪ್ರಬಲವಾಗಿದ್ದು, ಚಾಲ್ತಿಯಲ್ಲಿರುವುದನ್ನು ಕಾಣಬಹುದು.

ಹೆಣ್ಣನ್ನು ಮದುವೆಯ ಚೌಕಟ್ಟಿನೊಳಗೆ ಗುರುತಿಸಿ ಕೊಳ್ಳುವುದರಿಂದ 'ಮದುವೆ' ಆಕೆಯ ಜೀವನದ ಪರಮೋಚ್ಚ ಗುರಿಯಾಗಿ ಅಸ್ತಿತ್ವ ಪಡೆದಿದೆ. ಆಕೆಯ ಬದುಕಿನ ಪೂರಕವಾದ ಎಲ್ಲಾ ರೀತಿಯ ಸಾಧ್ಯತೆಗಳೂ 'ಮದುವೆ' ಎಂಬ ಒಪ್ಪಿತ ವ್ಯವಸ್ಥೆಯೊಳಗೇ ಸೇರಿಹೋಗಿರುವುದರಿಂದ ಒಂದು ರೀತಿಯಲ್ಲಿ ಬಂಧಿತಳಾಗಿದ್ದಾಳೆ. ಈ ಬಂಧನ ಅವಳ ಪಾಲಿಗೆ ಚಿನ್ನದ ಪಂಜರದಂತೆ ಎಂಬುದನ್ನು ಪುರುಷ ಪ್ರಧಾನ ವ್ಯವಸ್ಥೆ ಮನಗಂಡಿದ್ದರೂ, ಅದನ್ನೇ ಧರ್ಮವೆಂದು ಪ್ರತಿಪಾದಿಸುತ್ತಾ ತನ್ನ ಹಿತ ಸಂಬಂಧಿಯಾದ ನಿರ್ಣಯಕ್ಕೆ ಬದ್ಧವಾಗಿದೆ.

'ಸಹನಾ' ಕಾದಂಬರಿಯ ನಾಯಕಿ 'ನಸೀಮಾ'ಳ ಬದುಕು ಹಾಳಾಗಲು ಅಪ್ರಾಪ್ತ ವಯಸ್ಸಿನ ವಿವಾಹಕಾರಣ. ಚಿಕ್ಕ ವಯಸ್ಸಿಗೆ ಮದುವೆಯಾಗಿ ವರ್ಷಕೊಂದು ಮಗುವನ್ನು ಹೆರುತ್ತಾ ದೈಹಿಕವಾಗಿ ದುರ್ಬಲಳಾಗುವ ನಸೀಮಾ ಗಂಡ ಮತ್ತು ಮನೆಯವರ ತಿರಸ್ಕಾರಕ್ಕೆ ಒಳಗಾಗಿ ತವರು ಸೇರುತ್ತಾಳೆ. ಮಗಳ ಸ್ಥಿತಿ ಕಂಡು ಆತಂಕಕ್ಕೆ ಒಳಗಾದ ತಾಯಿ ಆಕೆಯನ್ನು ಮಹಿಳಾ ವೈದ್ಯರ ಬಳಿಗೆ ಕರೆದೊಯ್ಯುತ್ತಾಳೆ. ನಸೀಮಾಳನ್ನು ಪರೀಕ್ಷಿಸಿದ ಮಹಿಳಾ ವೈದ್ಯರು ಹೇಳುವ ಮಾತುಗಳು ಕೆಳವರ್ಗದ ಮುಸ್ಲಿಂ ಮಹಿಳೆಯರ ದುಸ್ಥಿತಿಯನ್ನು ತೆರೆದಿಡುತ್ತವೆ. "ಹದಿಮೂರು, ಹದಿನಾಲ್ಕು ವರ್ಷಕ್ಕೆ ಮದುವೆ ಮಾಡಿಕೊಡುತ್ತೀರಿ, ಸರಿ ಮುಂದಿನ ವರ್ಷದಿಂದ ಮಕ್ಕಳು ಹಡೆಯುವುದಕ್ಕೆ ಪ್ರಾರಂಭ. ಸರಿಯಾದ ಹಾಲು-ಹಣ್ಣು ಬಿಡಿ ಹೊಟ್ಟೆ ತುಂಬಾ ಊಟವಾದರೂ ಇದೆಯೇ ಅಂದರೆ ಅದೂ ಇಲ್ಲ. ಒಂದೆರಡು ಮಕ್ಕಳಾದ ಮೇಲೆ ಮುಂದೆ ಮಕ್ಕಳಾಗುವುದನ್ನಾದರೂ ನಿಲ್ಲಿಸಿ ಅಂದರೆ ಮಕ್ಕಳನ್ನು ಕೊಡುವವನು ದೇವರು ಅನ್ನುತ್ತೀರಿ. ಈಗ ಕ್ಷಯ ರೋಗ ಹಿಡಿದ ನಿಮ್ಮ ಮಗಳು ಈಗಲೋ ಆಗಲೋ ಸಾಯುವಂತಿದ್ದಾಳೆ". ಇಂಥ ಸ್ಥಿತಿಯಲ್ಲಿ ಅವಳ ಗಂಡ ಪಾಷನಿಗೆ ಇನ್ನೊಂದು ಮದುವೆಯನ್ನು ಮಾಡಲಾಗುತ್ತದೆ. ಹದಿನಾರು ವರ್ಷಕ್ಕೆಲ್ಲಾ ನಸೀಮಾಳ ವೈವಾಹಿಕ ಬದುಕಿನ ಕನಸುಗಳೆಲ್ಲಾ ಕುಸಿದು ಹೋಗುತ್ತವೆ. ಸಾಮಾಜಿಕ ಕಟ್ಟಳೆಗಳ ಅಡಿಯಲ್ಲಿ ಸಿಕ್ಕಿ ಅವಳ ಬದುಕು ದುಃಖದ ತವರಾಗುತ್ತದೆ. ಬಾಲ್ಯದ ಬದುಕು, ಕನಸು, ಮುಗ್ಧತೆ ಸಂತೋಷಗಳನ್ನೆಲ್ಲಾ ಅವಳ ವೈವಾಹಿಕ ಬದುಕು ಕಸಿದುಕೊಂಡಿದೆ. ಬಾಲ್ಯವಿವಾಹದ ದುರಂತದ ಒಂದು ಮುಖವನ್ನು ನಸೀಮಾಳ ಕತೆ ಬಿಂಬಿಸಿದೆ. ಸಾರಾ ಅವರು ಮುಸ್ಲಿಂ ಹೆಣ್ಣು ಮಕ್ಕಳು ಇಂಥ ಸ್ಥಿತಿಯಿಂದ ಹೊರಬರಬೇಕಾದ ಆಶಯವನ್ನು ಆಪ್ತತೆಯಿಂದ ವೈಚಾರಿಕ ನಿಲುವಿನಿಂದ ಪ್ರತಿಪಾದಿಸಿದ್ದಾರೆ.

ಮುಸ್ಲಿಂ ಸಮುದಾಯದಲ್ಲಿ ಹೆಣ್ಣು ಮಕ್ಕಳಿಗೆ ಹತ್ತು ಹನ್ನೊಂದು ವರ್ಷಗಳು ಆದವೆಂದರೆ 'ಸೆರೆಮನೆ ವಾಸ' ಆರಂಭವಾದಂತೆ. ಮದುವೆ ಆಗದ ಮುಸ್ಲಿಂ ಹುಡುಗಿಯರು ಮನೆಯಿಂದ ಹೊರಗೆ ಕಾಲಿಡುವಂತಿಲ್ಲ. ಮದುವೆಯ ನಂತರ ಪರ್ದಾ ಧರಿಸದೆ ಓಡಾಡುವಂತಿಲ್ಲ. ಮೇಲ್ನೋಟಕ್ಕೆ ಹೆಣ್ಣು ಮಕ್ಕಳ ರಕ್ಷಣೆಯನ್ನು ಬಿಂಬಿಸುವ ಇಂಥ ನಿಯಮಗಳ ಹಿಂದಿನ ಉದ್ದೇಶ ಪುರುಷ ಪ್ರಧಾನ ಸಮಾಜದ ಹಿತ ಸಂಬಂಧಿಯಾದುದೆ ಆಗಿದೆ. ಬಾಲ್ಯ ವಿವಾಹವು ಇದರ ಒಂದು ಪ್ರಧಾನ ಅಂಶವಾಗಿಯೇ ಮೈ ತಳೆದಿದೆ. ಕೆಲವು ಪ್ರಾತಿನಿಧಿಕ ಕಥೆಗಳ ಮೂಲಕ ಇವುಗಳ ಸ್ವರೂಪವನ್ನು ಕಾಣಬಹುದು.

ಸಾರಾ ಅವರ 'ಚಪ್ಪಲಿಗಳು' ಕತೆಯ ಸಮೀರಳ ಬದುಕು ಬಾಲ್ಯ ವಿವಾಹದ ಮತ್ತೊಂದು ದಾರುಣ ದುರಂತವನ್ನು ನಮ್ಮ ಮುಂದೆ ತೆರೆದಿಡುತ್ತದೆ. ಹದಿಮೂರು ವರ್ಷಕ್ಕೆಲ್ಲಾ ಶಬೀರನನ್ನು ಮದುವೆಯಾದ ಸಮೀರ ಬಂಧನದ ಬದುಕಿನ ಬಿಡುಗಡೆಗಾಗಿ ಹಾತೊರೆಯುತ್ತಾಳೆ. ಕೌಟುಂಬಿಕ ಒತ್ತಡಗಳು, ಅವಿಶ್ರಾಂತ

ದುಡಿಮೆ ಮುಖ್ಯವಾಗಿ ಯಾವುದೇ ರೀತಿಯ ಮನೋರಂಜನೆಯೂ ಇಲ್ಲದೆ ಮಾನಸಿಕ ಖಿನ್ನತೆಗೆ ಒಳಗಾಗುತ್ತಾಳೆ. ಆಡಿ ನಲಿಯ ಬೇಕಾದ ವಯಸ್ಸಿಗೆ ಬದುಕಿನ ಕುರಿತಾಗಿ ಆತಂಕ ನಿರ್ಮಾಣಮಾಡುವ ಇಂಥ ವ್ಯವಸ್ಥೆ ಘೋರ ಎನಿಸುತ್ತದೆ. ಸಮೀರಾಳ ವಯಸ್ಸಿನ ಗಂಡು ಮಕ್ಕಳು ಸ್ವಚ್ಛಂದವಾಗಿ ಬದುಕಲು ಸಾಧ್ಯವಿರುವ ವ್ಯವಸ್ಥೆಯಲ್ಲಿ ಹೆಣ್ಣು ಮಕ್ಕಳು ಅಂಥ ಎಲ್ಲಾ ಸಾಧ್ಯತೆಗಳಿಂದ ದೂರವಿರಬೇಕಾದದ್ದು ವಿಷಾದನೀಯ.

ಹುಟ್ಟು ಕತೆಯ ನಾಯಕಿ 'ಕದೀಜಾ' ಬೇಗ ಮಕ್ಕಳಾಗಲಿಲ್ಲ ಎಂಬ ಕಾರಣಕ್ಕೆ ದೈಹಿಕ ಮತ್ತು ಮಾನಸಿಕ ಹಿಂಸೆಗೆ ಗುರಿಯಾಗುತ್ತಾಳೆ. ಅಲ್ಲದೆ ಇದನ್ನೇ ನೆಪಮಾಡಿಕೊಂಡು ಗಂಡ ಇನ್ನೊಂದು ಮದುವೆಯಾಗುತ್ತಾನೆ. ಬಾಲ್ಯ ವಿವಾಹದ ಕಾರಣದಿಂದ 'ಸಮೀರ'ಳ ಬದುಕಿನಲ್ಲಿ ದುರಂತ ಒಂದು ರೀತಿಯದ್ದಾದರೆ 'ಕದೀಜಾ'ಳ ಬದುಕಿನಲ್ಲಿ ಇನ್ನೊಂದು ಸ್ವರೂಪ ಪಡೆಯುವುದನ್ನು ಕಾಣಬಹುದು.

ವಿವಾಹದ ಜೊತೆ ಜೊತೆಯಲ್ಲೇ ಬೆಸೆದುಕೊಂಡು ಬಂದಿರುವ ವರದಕ್ಷಿಣೆಯು ಸಮಾಜದ ಬಹುದೊಡ್ಡ ಪಿಡುಗು. ಯಾವುದೇ ಸಮುದಾಯವನ್ನು ಬಿಡದೆ ಆಲಂಗಿಸಿ ಕೊಂಡಿರುವ ಇದರ ಹಿಡಿತ ಬಹುಮುಖವಾದುದು. ಸಮಾಜದಲ್ಲಿ ವಿಭಿನ್ನ ರೀತಿಯಲ್ಲಿ ಅಸ್ತಿತ್ವ ಪಡೆದಿರುವ ವರದಕ್ಷಿಣೆಯು ಮನುಷ್ಯ ನಾಗರಿಕನಾದಂತೆ ಹೊಸ ಅರ್ಥ ವ್ಯಾಖ್ಯಾನಗಳನ್ನು ಪಡೆಯುತ್ತಾ ರೇಸಿನ ಕುದುರೆಯಂತೆ ಮುನ್ನುಗ್ಗುತ್ತಾ ಹೆಣ್ಣು ಹೆತ್ತವರಿಗೆ ನಿದ್ದೆಗೆಡಿಸಿದೆ. 1961ರಲ್ಲಿಯೇ ಕೇಂದ್ರ ಸರ್ಕಾರ ವರದಕ್ಷಿಣೆ ನಿಷೇಧ ಕಾಯ್ದೆಯನ್ನು ಜಾರಿಗೊಳಿಸಿದೆ. ಇದು ಸಮಾಜದ ಮೇಲೆ ಕಿಂಚಿತ್ತೂ ಪರಿಣಾಮ ಬೀರಿದಂತೆ ಕಾಣುತ್ತಿಲ್ಲ. ವರದಕ್ಷಿಣೆ ರಕ್ತಬೀಜಾಸುರನಂತೆ ಸಿಡಿದೆದ್ದು ನಿಲ್ಲುತ್ತಲೇ ಇದೆ. ಪ್ರಸ್ತುತ ಕಾಲಘಟ್ಟದಲ್ಲಿಯೂ ವರದಕ್ಷಿಣೆಯ ಕಾರಣದಿಂದ ಅನೇಕ ಮಹಿಳೆಯರು ಬಲಿಯಾಗುತ್ತಿರುವುದು ಅವರ ಬದುಕು ಮಣ್ಣುಗೂಡುತ್ತಿರುವುದನ್ನು ಸಮೂಹ ಮಾಧ್ಯಮಗಳು ಹೊರ ಹಾಕುತ್ತಿರುವುದೇ ಸಾಕ್ಷಿ. ಹೆಣ್ಣಿಗೆ ಆಸ್ತಿಯ ಹಕ್ಕು, ತವರಿನಿಂದ ಸಿಗುವ ಕೊಡುಗೆಗಳನ್ನು ಅಲ್ಪಸ್ವಲ್ಪ ಆರ್ಥಿಕ ಅನುಕೂಲಗಳೆಂದು ಪರಿಭಾವಿಸಬಹುದಾದರೂ ಇವೇ ಮತ್ತೆ ಹೆಣ್ಣಿನ ಬದುಕಿಗೆ ಮಾರಕವಾಗಬಹುದು. ಆದ್ದರಿಂದ ಹೆಣ್ಣಿನ ನಿಜವಾದ ಬಿಡುಗಡೆ ಇರುವುದು ಪುರುಷ ಪ್ರಧಾನ ವ್ಯವಸ್ಥೆ ಧೋರಣೆಯಲ್ಲಿ ಆಮೂಲಾಗ್ರ ಬದಲಾವಣೆ ಆಗದ ಹೊರತು ಪರ್ಯಾಯ ಸೂತ್ರಗಳು ಫಲಕಾರಿಯಾಗಲಾರವು.

ವರದಕ್ಷಿಣೆ ಎಂಬ ಕರಾಳ ಬಾಹುಗಳಲ್ಲಿ ಬಂಧಿಯಾದ ಯಾರಿಗೂ ಅದರಿಂದ ಬಿಡುಗಡೆ ಇಲ್ಲ. ಅದು ಎಷ್ಟರ ಮಟ್ಟಿಗೆ ಬೇರುಬಿಟ್ಟಿದೆ ಎಂದರೆ ವರದಕ್ಷಿಣೆ ಬೇಡ ಎನ್ನುವ ಹುಡುಗರನ್ನು ಗುಮಾನಿಯಿಂದ ನೋಡುವಂತೆ ಮಾಡಿದೆ. ವರದಕ್ಷಿಣೆಯನ್ನು ನಿರಾಕರಿಸಿ ತಮಗಿಷ್ಟವಾದವರನ್ನು ಮದುವೆಯಾಗಲು ಯುವಕರಿಗೂ ಸಾಕಷ್ಟು ಸ್ವಾತಂತ್ರ್ಯವಿದೆ ಎಂದು ಹೇಳಲಾಗುವುದಿಲ್ಲ. ಇಂಥ ಸಾಹಸಕ್ಕೆ ಕೈಹಾಕುವವರು ಕಷ್ಟ ಸಾಧ್ಯತೆಗಳನ್ನು ಅರಗಿಸಿಕೊಳ್ಳಲು ಗಟ್ಟಿಯಾಗಿಯೇ ಸಿದ್ಧರಾಗಿರಬೇಕಾಗುತ್ತದೆ. ಅಥವಾ ಆ ನಂತರ ಗಂಡನ ಕುಟುಂಬ ಬೇರೊಂದು ರೀತಿಯಲ್ಲಿ ಅದರ ಪೂರೈಕೆಗೆ ಒತ್ತಾಯಿಸಬಹುದು, ಇನ್ನಾವುದೇ ರೀತಿಯಲ್ಲಿ ಸಹಾಯ ನಿರೀಕ್ಷಿಸಬಹುದು. ಬೇಡಿಕೆಗಳು ನಿರಂತರವಾಗಿ ಮತ್ತೆ ಮತ್ತೆ ಹೆಣ್ಣು ಹೆತ್ತವರು ಅಸಹಾಯಕತೆಗೆ ಒಳಗಾಗಬಹುದು. ಹೀಗಾಗಿ ವಿವಾಹದ ಹಿನ್ನೆಲೆಯಲ್ಲಿ ರೂಪ ತಾಳುವ ಬೇಡಿಕೆಗಳು ಸೂಕ್ಷ್ಮ ಮತ್ತು ಸಂಕೀರ್ಣವಾಗಿದ್ದು, ಮುಳ್ಳಿನ ಮೇಲೆ ಹಾಸಿದ ವಸ್ತ್ರದಂತೆ, ಎಚ್ಚರಿಕೆಯಿಂದ ಬಿಡಿಸಿಕೊಳ್ಳಬೇಕು. ಸ್ವಲ್ಪ

ಬಲವಾಗಿ ಎಳೆದರೂ ಬಟ್ಟೆ ಹರಿದು ಹೋಗುವಷ್ಟೆ ಸುಲಭದಲ್ಲಿ ಹೆಣ್ಣಿನ ದಾಂಪತ್ಯದ ಬದುಕು ತುಂಡರಿಸುತ್ತದೆ. ಇದರ ಸುಳಿಯಲ್ಲಿ ಸಿಕ್ಕಿ ನಲುಗುವ ಹೆಣ್ಣುಮಕ್ಕಳ ಬದುಕು ಅತಂತ್ರವಾಗಿ 'ಅತ್ತ ದರಿ, ಇತ್ತ ಪುಲಿ' ಆದಂತೆ ಆಗಿ, ಆಡಲೂ ಆಗದೆ ಅನುಭವಿಸಲೂ ಆಗದೆ ಒಳಗೊಳಗೆ ಯಾತನೆಯನ್ನು ಅನುಭವಿಸುತ್ತಾಳೆ. ಸಾರಾ ಅವರ 'ಕದನ ವಿರಾಮ' ಕಾದಂಬರಿಯ ನಾಯಕಿ ನಿರ್ಮಲಳ ಬದುಕು ಇಂಥ ಸಮಸ್ಯೆಯ ಒಳ ನೋಟವನ್ನು ಬಿಡಿಸಿಡುತ್ತದೆ.

ಸುಳ್ಳು ಮಾಹಿತಿಗಳನ್ನು ನೀಡಿ ನಿರ್ಮಲಳನ್ನು ತನ್ನೆಡೆಗೆ ಸೆಳೆದುಕೊಂಡ ಸಂಜಯ, ನಿರ್ಮಲಳ ಮೂಲಕ ಮಾವನ ಹಣವನ್ನು ಸಂಸಾರಕ್ಕೆ ಒದಗುವಂತೆ ಮಾಡುವ ಚಾಣಾಕ್ಷತನ ತೋರುತ್ತಾನೆ. ತನ್ನ ಹೆತ್ತವರನ್ನೇ ತೊರೆದು ನಂಬಿದವನ ಹಿಂದೆ ಓಡಿ ಬಂದ ನಿರ್ಮಲಳಿಗೆ ದಿನ ಕಳೆದಂತೆ ಅವನ ಕುತಂತ್ರ ಅರ್ಥವಾಗಿ ಅವಳ ನಂಬಿಕೆ ಭಗ್ನವಾಗುತ್ತದೆ. ಅವಕಾಶ ಸಿಕ್ಕಾಗಲೆಲ್ಲಾ ಮಾವನನ್ನು ನಿಂದಿಸುತ್ತಾ ನಿರ್ಮಲಳ ಮೇಲೆ ಒತ್ತಡ ಹೇರುವ ತಂತ್ರವನ್ನು ಅನುಸರಿಸುತ್ತಾನೆ. ಅವಳ ಆತ್ಮಗೌರವಕ್ಕೆ ಧಕ್ಕೆಯಾಗುವ ಮಾತುಗಳನ್ನಾಡುವ ಮೂಲಕ ಮಾನಸಿಕ ಹಿಂಸೆಗೆ ಗುರಿಪಡಿಸುತ್ತಾನೆ. ಇಂತಹ ಒತ್ತಡಗಳಿಂದ ದಾಂಪತ್ಯದ ನಂಬಿಕೆಗೆ ಬಿರುಕುಂಟಾಗಿ ಅವರಿಬ್ಬರ ನಡುವೆ ಉಂಟಾಗುವ ಕದನವು ನಿರ್ಮಲಳ ಸಾವಿನಲ್ಲಿ ವಿರಾಮಗೊಳ್ಳುತ್ತದೆ.

ಕಥಾನಾಯಕಿ 'ನಿರ್ಮಲ'ಳ ಬದುಕು ಸಾವಿನಲ್ಲಿ ಕೊನೆಗೊಂಡರೂ ಲೇಖಕಿ ಬದುಕಬೇಕೆಂಬ ಆಶಯವನ್ನು ಬಿಂಬಿಸಿದ್ದಾರೆ. ಸಂಜಯನಂಥ ಗಂಡಸರು ಈ ರೀತಿಯ ತಂತ್ರದ ಮೂಲಕ ಹೆಣ್ಣನ್ನು ಹೆಣ್ಣು ಹೆತ್ತವರನ್ನು ನಿರಂತರ ಶೋಷಣೆಗೆ ಗುರಿಪಡಿಸುವುದು ಅಮಾನವೀಯವಾದುದು. ಒಮ್ಮೆ ಪಡೆಯುವ ವರದಕ್ಷಿಣೆಗಿಂತ ಈ ಬಗೆಯ ಬೇಡಿಕೆಯ ಹಿಂದಿನ ಚಾಲಾಕುತನ, ಕುಟಿಲತನ ಮತ್ತು ಕ್ರೌರ್ಯ ಹೆಚ್ಚು ಅಪಾಯಕಾರಿ ಎಂಬುದನ್ನು ಕಾದಂಬರಿ ಕಂಡಿರಿಸಿದೆ.

ವಿವಾಹ ಸಂಬಂಧದ ನಡುವೆ ಒಮ್ಮೆ ವರದಕ್ಷಿಣೆಯ ಪ್ರಸ್ತಾಪ ಬಂತೆಂದರೆ ಅಂಥ ಸಂಬಂಧವನ್ನು ನಿರಾಕರಿಸುವ ಶಕ್ತಿ ಮತ್ತು ದೃಢತೆಯನ್ನು ಹೆಣ್ಣುಮಕ್ಕಳು ಬೆಳಸಿಕೊಳ್ಳಬೇಕಾದ ಅಗತ್ಯತೆಯನ್ನು ಒತ್ತಿ ಹೇಳುತ್ತದೆ. ಅನುಕೂಲವಾದ ಕುಟುಂಬದಲ್ಲಿ ಹುಟ್ಟಿ ಬೆಳೆದ ನಿರ್ಮಲೆಗೆ ಸಾಕಷ್ಟು ಓದಿ ತನ್ನ ಕಾಲ ಮೇಲೆ ತಾನು ನಿಲ್ಲುವ ಅವಕಾಶವಿತ್ತು. ಆದರೆ ಆಕೆ ನಗರಕ್ಕೆ ಓಡಾಡಲು ಇರುವ ಅನಾನುಕೂಲತೆಯನ್ನು ಮುಂದಿಟ್ಟುಕೊಂಡು ಓದನ್ನು ಮುಂದುವರೆಸುವುದಿಲ್ಲ. ತಂದೆಯೂ ಅದಕ್ಕೆ ಒತ್ತಾಸೆ ನೀಡುವುದಿಲ್ಲ. ಮಗಳು ಓದಿ ಕೆಲಸಕ್ಕೆ ಸೇರಿ ಯಾರನ್ನೂ ಸಾಕಬೇಕಾಗಿಲ್ಲವೆಂಬ ಭಾವನೆ, ಶ್ರೀಮಂತ ಯುವಕನಿಗೆ ಮದುವೆ ಮಾಡಿದರಾಯಿತು ಎಂಬ ಧೋರಣೆ ಅವರದಾಗಿತ್ತು. ತಂದೆಯ ಇಂಥ ಆಲೋಚನೆ ಆಕಾಂಕ್ಷೆ ಮಗಳ ಮನಸ್ಸಿನಲ್ಲಿ ಇಂತಹುದೇ ಬಯಕೆಯನ್ನು ಹುಟ್ಟಿಸಿತು. ನಿರ್ಮಲಳ ನಿರ್ಧಾರದ ಬಗ್ಗೆ ತಂದೆಯ ಸಂಕಲ್ಪ ಮಗಳ ಮನಸನ್ನು ಹಗುರವಾಗಿಸಿತು. ಅದೇಕೋ ಯಾವ ಬೆಲೆ ತೆತ್ತಾದರೂ ತನ್ನ ವಿದ್ಯಾಭ್ಯಾಸವನ್ನು ಮುಂದುವರಿಸಬೇಕೆಂಬ ಮಹತ್ವಾಕಾಂಕ್ಷೆ ಆಕೆಯ ಎದೆಯಲ್ಲಿ ಚಿಗುರಲೇ ಇಲ್ಲವೇನೋ. ತನ್ನ ಅಪಾರ ಬುದ್ದಿವಂತಿಕೆ, ಪ್ರತಿಭೆ ಎಲ್ಲವನ್ನು ಅಡುಗೆ ಮನೆಯ ಸಿಂಕಿನಲ್ಲಿ ಹರಿಸಿ ಬಿಡಲು ಸಿದ್ಧಳಾದಂತಿತ್ತು ಆಕೆಯ ವರ್ತನೆ" ಎಂಬ ನಿರೂಪಕಿಯ ವ್ಯಂಗ್ಯ ಕಾದಂಬರಿ ಆಶಯವನ್ನು ವ್ಯಕ್ತಪಡಿಸುತ್ತದೆ. ಹೆಣ್ಣು ಮಕ್ಕಳು

ಶಿಕ್ಷಣವನ್ನು ಪಡೆದು ಆತ್ಮ ವಿಶ್ವಾಸವನ್ನು ಬೆಳೆಸಿಕೊಳ್ಳಬೇಕೆಂದು ಒತ್ತಿ ಹೇಳುತ್ತದೆ. ಹೆಣ್ಣು ಮಕ್ಕಳು ಓದುವ ದಾರಿಗಳನ್ನು ಹುಡುಕಿಕೊಂಡು ಮುನ್ನುಗ್ಗಬೇಕೇ ಹೊರತು ನೆಪಗಳನ್ನೇ ಪ್ರಮುಖವಾಗಿಸಿಕೊಳ್ಳಬಾರದು. ತಂದೆತಾಯಿಗಳು ಈ ಬಗ್ಗೆ ಹೆಚ್ಚು ಗಮನಹರಿಸಿ ಹೆಣ್ಣು ಮಕ್ಕಳ ಓದಿಗೆ ಉತ್ತೇಜಿಸಬೇಕೆಂಬ ಆಶಯವಿದೆ. ಶಿಕ್ಷಣದಿಂದ ಚಿಂತನೆಯ ಶಕ್ತಿ ಬೆಳೆಯುವುದಲ್ಲದೆ ಆರ್ಥಿಕ ಸ್ವಾವಲಂಬನೆಯ ದಾರಿ ಸುಗಮವಾಗುತ್ತದೆ. ಹೆಣ್ಣು ತನ್ನ ವ್ಯಕ್ತಿತ್ವ ಮತ್ತು ಅಸ್ತಿತ್ವವನ್ನು ಸ್ಥಾಪಿಸಿಕೊಳ್ಳಲು ಸಾಧ್ಯವಾಗುತ್ತದೆ. ಬದುಕಿನ ವಾಸ್ತವತೆಯನ್ನು ಗ್ರಹಿಸಿ ಆತ್ಮಗೌರವ ಬೆಳೆಯುವುದರಿಂದ ಆತ್ಮಹತ್ಯೆಗಳು ಅಳಿಸಿಹೋಗುತ್ತವೆ ಎಂಬುದು ಲೇಖಕಿಯ ಅಭಿಪ್ರಾಯ. ಪುರುಷ ಪ್ರಧಾನ ವ್ಯವಸ್ಥೆಯ ಲೋಪದೋಷಗಳನ್ನು, ದಬ್ಬಾಳಿಕೆಯನ್ನು, ಸ್ತ್ರೀ ಪುರುಷರ ದೌರ್ಬಲ್ಯವನ್ನು ಓದುಗರಿಗೆ ಮನ ಮುಟ್ಟುವಂತೆ ಹೇಳುವಲ್ಲಿ ಕಾದಂಬರಿ ಯಶಸ್ವಿಯಾಗಿದೆ.

ಸಾರಾ ಅವರು ಬೆಳೆದು ಬಂದದ್ದು ಮುಸ್ಲಿಂ ಸಮುದಾಯವಾದರೂ ಎಲ್ಲಾ ಸಮುದಾಯದ ಮಹಿಳೆಯರು ಒಂದಲ್ಲ ಒಂದು ರೀತಿಯಲ್ಲಿ ಇಂಥದ್ದೇ ಸಮಸ್ಯೆಗಳಿಂದ ನರಳುತ್ತಿರುವುದನ್ನು ಅರಿತಿದ್ದಾರೆ. ಇಂಥ ಸಾಮಾಜಿಕ ರೋಗಗಳಿಗೆ ಹೆಣ್ಣು ಬಲಿಪಶುವಾಗುವುದನ್ನು ಗ್ರಹಿಸಿದ್ದಾರೆ. ಹೀಗಾಗಿ ಪರಿಚಿತ ಸಮುದಾಯದ ಜೊತೆಗೆ ಪರಿಚಿತವಲ್ಲದ ಸಮುದಾಯದ ನೋವಿನ ಭಾವನೆಗಳನ್ನು, ಅದರ ಒಳಮಿಡಿತಗಳನ್ನು ಸಮರ್ಥವಾಗಿ ಸೆರೆಹಿಡಿದು ಕೊಟ್ಟಿದ್ದಾರೆ.

ಅಧ್ಯಾಯ-೪

# ಕಾದಂಬರಿ ಮತ್ತು ಕಥೆಗಳಲ್ಲಿ ಹೆಣ್ಣು ಗಂಡಿನ ಸಂಬಂಧದ ಚಿತ್ರಣ

ಹೆಣ್ಣು ಗಂಡಿನ ಸಂಬಂಧಗಳನ್ನು ಮುಖ್ಯವಾಗಿ ದಾಂಪತ್ಯದ ನೆಲೆಯಲ್ಲಿ ವಿಶ್ಲೇಷಿಸಲಾಗಿದೆ. ವೈವಾಹಿಕ ಬದುಕು ತೀರಾ ವೈಯಕ್ತಿಕವಾದುದು. ಆದರೆ ಅದರ ಅಸ್ತಿತ್ವವಿರುವುದು ಸಮಾಜದ ಒಪ್ಪಿಗೆಯಲ್ಲಿ. ಯಾವುದೇ ಸಮುದಾಯದ ಸಾಮಾಜಿಕ ಪರಿಸರವು ವ್ಯಕ್ತಿಯ ವಿಕಾಸವನ್ನು ನಿರ್ಣಯಿಸುವಲ್ಲಿ ಪ್ರಧಾನ ಪಾತ್ರ ವಹಿಸುತ್ತದೆ. ಅದರಲ್ಲೂ ಲಿಂಗ ಅಸಮಾನತೆಯನ್ನು ಸಹಜವೆಂದೇ ಸ್ವೀಕರಿಸುತ್ತಾ ಬಂದ ಹೆಣ್ಣು ತನ್ನಿಚ್ಛೆಯನ್ನು ಈಡೇರಿಸಿಕೊಳ್ಳಲು ಸಾಕಷ್ಟು ಹೆಣಗಬೇಕಾಗುತ್ತದೆ. ಸಮಾಜದ ದೃಷ್ಟಿಯಲ್ಲಿ ಹೆಣ್ಣಿನ ಜೀವನದ ಸಾರ್ಥಕತೆಯ ಮೊದಲ ಗುರಿ ವಿವಾಹ. ಗಂಡು ಹೆಣ್ಣಿನ ಸಂಬಂಧವನ್ನು ನಿರ್ದಿಷ್ಟ ಕೌಟುಂಬಿಕ ಚೌಕಟ್ಟಿನೊಳಗೆ ತರುವ ಉದ್ದೇಶದಿಂದ ವಿವಾಹ ಸಂಸ್ಥೆ ಅಸ್ತಿತ್ವ ಪಡೆದಿದೆ. ಹೆಣ್ಣು - ಗಂಡಿನ ಆಕರ್ಷಣೆ ಪ್ರಕೃತಿ ಸಹಜವಾದುದು. ಅದು ಲೈಂಗಿಕ ಸ್ವೇಚ್ಛಾಚಾರಕ್ಕೆ ಎಡೆ ಮಾಡಿ ಕೊಡದಂತೆ, ಹೆಣ್ಣು ಗಂಡಿನ ನಡುವಿನ ನಿಷ್ಠೆಯ ಕಾರಣಕ್ಕಾಗಿ ಆ ಮೂಲಕ ಸಾಮಾಜಿಕ ಸ್ವಾಸ್ಥ್ಯ ರಕ್ಷಣೆಯ ಕಾಳಜಿಯಿಂದ ರೂಪುಗೊಂಡಿದೆ. ಆದರೆ ಸಮಾಜದ ಪ್ರಧಾನ ಘಟಕವಾಗಿ ಕಾಣಿಸಿಕೊಂಡಿರುವ ಪುರುಷ ವಿವಾಹ ಸಂಬಂಧವನ್ನು ತನ್ನಿಷ್ಟದಂತೆ ಬಳಸಿಕೊಳ್ಳುತ್ತಿದ್ದಾನೆ.

ಸಾರಾ ಅವರ ಕಥೆ-ಕಾದಂಬರಿಗಳಲ್ಲಿ ಚಿತ್ರಣಗೊಂಡಿರುವ ಹೆಣ್ಣುಗಂಡಿನ ಸಂಬಂಧಗಳು ಮುಸ್ಲಿಂ ಸಮುದಾಯದ ಸಾಮಾಜಿಕ ಹಾಗೂ ಧಾರ್ಮಿಕ ಹಿಡಿತದಲ್ಲಿಯೇ ಒಂದಲ್ಲ ಒಂದು ರೀತಿಯಲ್ಲಿ ಸಂಘರ್ಷಿಸುತ್ತವೆ. ಬಹುಪಾಲು ದಾಂಪತ್ಯ ಸಂಬಂಧಗಳು ಅತಂತ್ರ ಸ್ಥಿತಿಯ ತಾಕಲಾಟದಲ್ಲಿ ಹೊಯ್ದಾಡುತ್ತವೆ. ಭೂಮಿಯ ಮೇಲಿನ ತನ್ನ ಅಸ್ತಿತ್ವಕ್ಕಾಗಿ ನಿರಂತರವಾಗಿ ತವಕಿಸುತ್ತವೆ. ಮುಸ್ಲಿಂ ಪುರುಷ ಪ್ರಧಾನ ವ್ಯವಸ್ಥೆ, ಧರ್ಮಗ್ರಂಥವಾದ ಕುರಾನನ್ನು ತನ್ನ ಅನುಕೂಲಕ್ಕೆ ತಕ್ಕಂತೆ ಅರ್ಥೈಸಿಕೊಂಡು ವೈವಾಹಿಕ ಸಂಬಂಧಗಳನ್ನು ಕೇವಲ ತಲಾಖ್‌ನಿಂದ ಶಿಥಿಲಗೊಳಿಸುವ ನಿಯಮಗಳು ಹೆಣ್ಣಿನ ಮನಸ್ಸಿನೊಳಗೆ ಆತಂಕಗಳನ್ನು ನಿರ್ಮಾಣ ಮಾಡಿವೆ. ಬಹುಪತ್ನಿತ್ವವನ್ನು ಪೋಷಿಸುತ್ತಲೇ, ತನ್ನ ಹಿಂದಿನ ಪತ್ನಿಗೆ ಕೊಡಬೇಕಾದ ಪತಿಯ ಸಂಪತ್ತಿನ ಪಾಲನ್ನು ಕೊಡದೆ ಅವಳನ್ನು ಅತಂತ್ರಳನ್ನಾಗಿಸಿದೆ. ವ್ಯಕ್ತಿ ನಿಯಮಗಳನ್ನೇ ಪ್ರಬಲ ಅಸ್ತ್ರಗಳಾಗಿಸಿಕೊಂಡು ದಾಂಪತ್ಯ ಸಂಬಂಧ ಗಂಡಿನ ಮುಷ್ಠಿಯೊಳಗೆ ಕೇಂದ್ರೀಕರಿಸಿದೆ. ಹೆಣ್ಣು ಅನಿವಾರ್ಯವಾಗಿ ಸಂಬಂಧವನ್ನು ತನ್ನ ಅಗತ್ಯದ ನೆಲೆಯಲ್ಲೇ ಗ್ರಹಿಸಬೇಕಾಗಿದೆ. ಜತೆಗೆ ಕೌಟುಂಬಿಕ ಆವರಣದ ರಕ್ಷಣೆಯಲ್ಲಿ ಸಂತಸದಿಂದಿದ್ದೇನೆ ಎಂದು ಒಪ್ಪಿಕೊಳ್ಳಬೇಕಾಗಿದೆ. ಗಂಡ ಮತ್ತು ಗಂಡನ ಮನೆಯವರಿಗೆ ಪೂರಕವಾಗಿದ್ದರೂ, ಯಾವುದೇ ಭಿನ್ನಾಪ್ರಾಯ, ಹೊಂದಾಣಿಕೆಯ ಕೊರತೆ ಇಲ್ಲದಿದ್ದರೂ ಕ್ಷುಲ್ಲಕ ಕಾರಣಕ್ಕೆ ಬಲಿಯಾಗುವವಳು ಹೆಣ್ಣು. ಹಾಗೆಯೇ ತನ್ನ ತಪ್ಪನ್ನು ಅರ್ಥಮಾಡಿಕೊಂಡು ಬದಲಾಗುವ ಆಶಯ ವ್ಯಕ್ತಪಡಿಸುವ ಗಂಡು ಕೂಡ ನಿಯಮಗಳ ಹಿಡಿತದಿಂದ ಹೊರ ಬರಲಾರದೆ ಪರಿತಪಿಸುವುದು ಈ ಸಮಾಜದ ಇನ್ನೊಂದು ದುರಂತ. ಇಂತಹ ಇಕ್ಕಟ್ಟಿಗೆ ಒಳಗಾದವರು 'ಚಂದ್ರಗಿರಿ ತೀರದಲ್ಲಿ' ಕಾದಂಬರಿಯ ರಶೀದ್ ಮತ್ತು ನಾದಿರಾ ದಂಪತಿಗಳು.

**ಕಾದಂಬರಿಯಲ್ಲಿ ಹೆಣ್ಣು ಗಂಡಿನ ಸಂಬಂಧದ ಚಿತ್ರಣ**

ರಶೀದ್ ಮತ್ತು ನಾದಿರಾ ಅವರದು ಅನುರೂಪದ ದಾಂಪತ್ಯ. ಹೆಣ್ಣು-ಗಂಡಿನ ಭಾವನಾತ್ಮಕ ಸಂಬಂಧದೊಳಗೆ ಪರಸ್ಪರ ಪೂರಕವಾದ ಅರ್ಥವಂತಿಕೆ, ಹೊಂದಾಣಿಕೆ ಇರುವುದನ್ನು ಕಾದಂಬರಿಯಲ್ಲಿ ಕಾಣಬಹುದು. ಸುಂದರ ಕನಸುಗಳಲ್ಲಿ ನೆಮ್ಮದಿಯ ದಾಂಪತ್ಯದ ನಡುವೆ ಬಿರುಗಾಳಿಯಂತೆ ಬಂದವರು ನಾದಿರಾಳ ತಂದೆ ಮಹಮದ್‌ಖಾನ್. ಮಗಳ ಬದುಕಿನ ನೆಮ್ಮದಿಗೆ ಒಂದೊಂದೇ ಪೆಟ್ಟುಗಳನ್ನು ನೀಡುತ್ತಾ ಬಂದ ಅವನ ಸ್ವಾರ್ಥ ಮತ್ತು ಅಹಂಕಾರಕ್ಕೆ ರಶೀದ್ ಮತ್ತು ನಾದಿರಾ ಇಬ್ಬರೂ ಬಲಿಯಾಗುತ್ತಾರಾದರೂ ಪರಿಣಾಮ ಮಾತ್ರ ಬೇರೆ ಬೇರೆಯಾಗಿದೆ.

ಮುಸ್ಲಿಂ ಸಮುದಾಯದಲ್ಲಿ ಗಂಡ-ಹೆಂಡತಿಯ ಸಂಬಂಧವೆಂದರೆ ತಲಾಖ್ ನೀಡುವವರೆಗಿನ ಸಂಬಂಧ. "ನಾನು ಹೆಂಡತಿಯನ್ನು ಬಿಟ್ಟೆ" ಎಂದು ಮೂರು ಬಾರಿ ಹೇಳಿದರೆ ಮುಗಿದೇ ಹೋಯಿತು. ಆ ಕ್ಷಣದಿಂದ ಅವರುಬೇರೆ ಬೇರೆ. ಅವನು ತಂದ ಬಟ್ಟೆ ಬರೆ ಸಾಮಾನುಗಳೇನಾದರೂ ಇದ್ದರೆ ಆ ಕೂಡಲೇ ಅವನ ಮನೆಗೆ ಕಳುಹಿಸಿಬಿಡಬೇಕು. ವಿಚ್ಛೇದನ ನೀಡಿದ ಬಳಿಕ ಆತ ಪರಪುರುಷನಾಗುತ್ತಾನೆ. ಇಲ್ಲಿಗೆ ಹೆಂಡತಿಯ ಸಂಬಂಧ ಮುಗಿಯಿತು. ಹೆಂಡತಿಗೆ ತಲಾಖ್ ಕೊಟ್ಟಾಗ ತಲಾಖ್ ಯಾಕೆ ನೀಡಿದೆ ಎಂದು ಯಾರಿಗೂ ಕಾರಣ ಕೊಡಬೇಕಾಗಿಲ್ಲ. ಮೆಹರ್ ನೀಡಿದರೆ ಗಂಡನ ಕರ್ತವ್ಯ ಮುಗಿಯಿತು. ಅವಳಿಗೆ ಯಾವ ರೀತಿಯ ಪರಿಹಾರವನ್ನು ನೀಡಬೇಕಾಗಿಲ್ಲ. ಆಕೆಗೆ ಜೀವನಾಂಶವನ್ನು ಕೊಡಬೇಕಾಗಿಲ್ಲ. ಆಮೇಲೆ ಮೂರುವರೆ ತಿಂಗಳು ಕಳೆದರೆ ಆಕೆ ಬೇರೆ ವಿವಾಹವಾಗಬಹುದು. ಈ ಮೂರುವರೆ ತಿಂಗಳ ಕಾಲಾವಧಿ ಆಕೆ ಗರ್ಭಧರಿಸಿಲ್ಲವೆಂಬ ಖಚಿತತೆಗಾಗಿ. ಗಂಡಸಾದರೆ ನಾಲ್ವರನ್ನು ವಿವಾಹವಾಗಬಹುದು! ಒಂದುವೇಳೆ ಆತನು ನಾಲ್ವರಲ್ಲಿ ಯಾರಿಗೂ ತಲಾಖ್ ಕೊಡದೆ ಐದನೆಯವಳನ್ನು ತಂದಿಟ್ಟುಕೊಂಡರೆ, ಆಗ ಮೊದಲನೆಯ ಪತ್ನಿ ತಂತಾನೇ ವಿಚ್ಛೇದನಗೊಳ್ಳುತ್ತಾಳೆ; ಅಂದರೆ ತಾನಾಗಿ ಹೊರಟುಹೋಗಬೇಕಾಗುತ್ತದೆ! ಎಲ್ಲಿಗೆ? ಎಲ್ಲಿಗೆ ಎಂಬ ಪ್ರಶ್ನೆಗೆ ವ್ಯಕ್ತಿ ನಿಯಮದಲ್ಲಿ ಉತ್ತರವೇನೂ ಇಲ್ಲ; ಆಕೆ ಜೀವನೋಪಾಯಕ್ಕೇನು ಮಾಡಬೇಕೆಂಬ ಪ್ರಶ್ನೆಗೂ ಉತ್ತರವಿಲ್ಲ". ದಾಂಪತ್ಯದ ಸಂಬಂಧದಲ್ಲಿ ಹುಟ್ಟಿದ ಮಕ್ಕಳ ಅಧಿಕಾರ, ಜವಾಬ್ದಾರಿ ಏಳುವರ್ಷಗಳವರೆಗೆ ತಾಯಿಗೆ ನಂತರದ ಅಧಿಕಾರ ಪೂರ್ಣವಾಗಿ ತಂದೆಗೆ ಸಿಗುತ್ತದೆ. ಎಲ್ಲರನ್ನೂ, ಎಲ್ಲವನ್ನೂ ಕಳೆದುಕೊಳ್ಳುವ ಶಿಕ್ಷೆ ಮಾತ್ರ ಹೆಣ್ಣಿಗೆ.

ಮುಸ್ಲಿಂ ಸಮುದಾಯದಲ್ಲಿ ವಿಚ್ಛೇದಿತ ಹೆಣ್ಣನ್ನು ಇನ್ನೊಬ್ಬರಿಗೆ ಮದುವೆ ಮಾಡಬಹುದೆಂಬ ಸಾಧ್ಯತೆಯೇ ಹೆತ್ತವರನ್ನು ದಾರಿ ತಪ್ಪುವಂತೆ ಮಾಡುತ್ತದೆ. ಸಂಬಂಧಗಳನ್ನು, ಭಾವನೆಗಳನ್ನು ಅರ್ಥೈಸಿಕೊಳ್ಳಲಾಗದ ಮಹಮದ್‌ಖಾನ್‌ನಂಥವರು ಇದರ ಪ್ರಯೋಜನ ಪಡೆಯುತ್ತಾರೆ. ಇಂತಹವರಿಂದ ಹೆಣ್ಣುಮಕ್ಕಳ ಅಸ್ತಿತ್ವವೇ ಅಳಿಸಿಹೋಗುತ್ತದೆ. ಕೋಪ ಮತ್ತು ಅಹಂಕಾರದಿಂದ ವಿವೇಚನೆ ಕಳೆದುಕೊಂಡು ಮಹಮದ್‌ಖಾನ್‌ರ ಸ್ವಾರ್ಥ ಗಂಡು ಸಮಾಜವನ್ನೇ ತಿರಸ್ಕರಿಸುವಂತಹ ಹಂತಕ್ಕೆ ತರುತ್ತದೆ. ಜಟ್ಟಿ ಕೆಳಗೆ ಬಿದ್ದರೂ ಮೀಸೆ ಮಣ್ಣಾಗಲಿಲ್ಲ ಎಂಬ ಗಂಡಿನ ಭಂಡತನಕ್ಕೆ ನಾದಿರಾಳ ತಂದೆ ಒಂದು ನಿದರ್ಶನ. ವಿಚ್ಛೇದನೆಯ ನಂತರದ ದಾಂಪತ್ಯ ಸಂಬಂಧ ಎಂಬುದು ಹೆಣ್ಣಿನ ಪಾಲಿಗೆ ನವಿರಾದುದಲ್ಲ. ಇಲ್ಲಿ ನಾದಿರಾ ತನ್ನ ತಂದೆಯ ವಯಸ್ಸಿನ ಎಂಟು ಮಕ್ಕಳ ತಂದೆ ಶ್ರೀಮಂತ ಸಲೀಮರನ್ನು ಆಕೆ ಒಲಿಯಬೇಕಿದೆ. ಹೆಣ್ಣು ಮಕ್ಕಳು ಬದುಕಿನಲ್ಲಿ ಅನ್ನ ಬಟ್ಟೆ ಬಿಟ್ಟು ಹೆಚ್ಚಿನದನ್ನು ಆಶಿಸಬಾರದು. ಅದನ್ನು ಕೊಡಲು

ಯಾರಾದರೊಬ್ಬರಾಯಿತು! ಹಣವಂತ ಸೆಲೀಮರನ್ನು ಮಗಳು ನಾದಿರಾ ಮದುವೆ ಆಗುವುದರಿಂದ ತನ್ನ ಕುಟುಂಬಕ್ಕೆ ಆರ್ಥಿಕ ಅನುಕೂಲವಾಗುತ್ತದೆಂದು ಮಗಳ ತಲಾಖ್ ಅನ್ನು ಸಮರ್ಥಿಸುವ ತಂದೆಯ ಸ್ವಾರ್ಥ ಬೆಚ್ಚಿಬೀಳಿಸುತ್ತದೆ. ಇಲ್ಲಿ ದಾಂಪತ್ಯ ಸಂಬಂಧದ ನಿರ್ಣಯಾತ್ಮಕ ಶಕ್ತಿಗಳು ಹೆಣ್ಣಿನ ದೃಷ್ಟಿಯಿಂದ ಮಾರಕವಾಗಿ, ಗಂಡಿನ ದೃಷ್ಟಿಯಿಂದ ಪೂರಕವಾಗಿ ಹೇಗೆ ಕೆಲಸ ಮಾಡುತ್ತವೆ ಎಂಬುದನ್ನು ಕಾಣಬಹುದು. ತಂದೆ ಮತ್ತು ಗಂಡನ ತಪ್ಪಿಗೆ ಶಿಕ್ಷೆ ಅನುಭವಿಸಿದವಳು ನಾದಿರಾ. ಅದಕ್ಕೆ ಅವಳು ತೆತ್ತ ಬೆಲೆ ಅವಳ ಪ್ರಾಣ.

'ಕೋಪದಲ್ಲಿ ಕೊಯ್ದ ಮೂಗು ಶಾಂತವಾದಮೇಲೆ ಬರುವುದಿಲ್ಲ'. ಇಲ್ಲಿ ರಶೀದ್ ಸ್ಥಿತಿ ಇಂತಹುದು. ಸತ್ಯಾಸತ್ಯತೆಯನ್ನು ಅರಿಯದೆ ಹಗಲು ನೋಡಿದ ಬಾವಿಯಲ್ಲಿ ಇರುಳು ಬಿದ್ದಂತೆ ಮಾಡಿಕೊಳ್ಳುತ್ತಾನೆ. ತನ್ನ ಅವಿವೇಕದಿಂದ ನಾದಿರಾಳಿಗೆ ಆದ ಅನ್ಯಾಯಕ್ಕೆ ಪಶ್ಚಾತ್ತಾಪಪಡುತ್ತಾನೆ. ಅದರಿಂದ ಹೊರಬಂದು ಮತ್ತೆ ಬಾಳ ಪಥದಲ್ಲಿ ಒಂದಾಗಿ ಬದುಕುವ ಆಶಯ ವ್ಯಕ್ತಪಡಿಸುತ್ತಾನೆ. ಆದರೆ ಕಾಲ ಮಿಂಚಿದೆ. ಇಸ್ಲಾಂನ ವ್ಯಕ್ತಿನಿಯಮಗಳ ಹಿಡಿತ ಪುರುಷನನ್ನು ಬಂಧಿಸಿದೆ. ವಿಚ್ಛೇದಿತ ಪತ್ನಿಯನ್ನು ಅದೇ ಪುರುಷ ಪುನಃ ಮದುವೆಯಾಗಬೇಕಾದರೆ "ಆಕೆ ಬೇರೊಬ್ಬನನ್ನು ಮದುವೆಯಾಗಿದ್ದು ಅವನಿಂದ ತಲಾಖ್ ಪಡೆದಿರಬೇಕು. ಇಲ್ಲವೇ ಒಂದು ದಿನಕ್ಕಾದರೂ ಒಬ್ಬನನ್ನು ಮದುವೆಯಾಗಿ, ಒಂದು ರಾತ್ರಿ ಅವನೊಡನೆ ಕಳೆಯಬೇಕು. ಮರುದಿನ ಅವನಿಂದ ತಲಾಖ್ ಪಡೆದು ಮೂರು ತಿಂಗಳು ಕಾಯಬೇಕು. ಅವನಿಂದ ಆಕೆ ಗರ್ಭಿಣಿಯಾಗಿಲ್ಲ ಎಂದು ನಿಶ್ಚಯವಾದ ಮೇಲೆ ಆ ಮೊದಲ ಗಂಡನು ಅವಳನ್ನು ಮದುವೆಯಾಗಬಹುದು. ಇದು ಇಸ್ಲಾಂ ಸಮಾಜ ರೂಪಿಸಿದ ದಾಂಪತ್ಯ ನಿಯಮ. ಇದನ್ನು ಯಾರೂ ಮೀರುವಂತಿಲ್ಲ. ನಿಯಮಗಳ ದೃಷ್ಟಿಯಿಂದ ಪುರುಷನೂ ಹೊರಬರಲಾರದ ಹಿಡಿತವಿದೆ. ಇವು ಪುರುಷನ ಕೌಟುಂಬಿಕ ಮತ್ತು ದಾಂಪತ್ಯದ ಬದುಕಿನಲ್ಲಿ ತೀರಾ ಆಘಾತಕಾರಿ ಪರಿಣಾಮವನ್ನು ಬೀರದಿದ್ದರೂ, ಭಾವನಾತ್ಮಕ ನೆಲೆಯಲ್ಲಿ ಮಾನಸಿಕ ಹಿಂಸೆಗೆ ಆತನೂ ಒಳಗಾಗುತ್ತಾನೆ. ರಶೀದ್ ಮಾತುಗಳು ಇದಕ್ಕೆ ಸಾಕ್ಷಿಯಂತಿವೆ. "ಅರ್ಥವಿಲ್ಲದ ಇಂತಹ ನಿಯಮಗಳಿಗೆಲ್ಲಾ ಬೆಂಕಿ ಹಚ್ಚಬೇಕು. ಬೆಂಕಿ!"[೪೧] ಎಂದು ಆಕ್ರೋಶ ವ್ಯಕ್ತಪಡಿಸಿ, ತನ್ನ ತಪ್ಪುಗಳ ಬಗ್ಗೆ ಮೆಲುಕುಹಾಕುತ್ತಾನೆ. "ಅವಳ ದೌರ್ಬಲ್ಯ ಮತ್ತು ಅಸಹಾಯಕತೆಯನ್ನು ತಾನಾಗೆ ಅರ್ಥಮಾಡಿಕೊಳ್ಳುತ್ತಲೇ ಇಲ್ಲವಲ್ಲ? ಎಂತಹ ಮೂರ್ಖನಾದೆ ತಾನು? ನಿಯಮಗಳನ್ನೆಂದೂ ಪ್ರಶ್ನಿಸಲಾರದ ತಂದೆ-ತಾಯಿಗಳ ಆಜ್ಞಾನುವರ್ತಿಯಾದ, ಹೆತ್ತವರಿಗೆಂದೂ ನೋವುಂಟು ಮಾಡಲಿಚ್ಚಿಸದ ನಾದಿರಾಳನ್ನು ತಾನು ಅರ್ಥಮಾಡಿಕೊಳ್ಳಲು ಇಷ್ಟು ತಡಮಾಡಿದ್ದಾದರೂ ಏಕೆ?"[೪೨] - ಎಂಬ ಪ್ರಶ್ನೆಗಳು ಹೆಣ್ಣಿನ ಮನೋಭಾವನೆಗಳನ್ನು ಗಂಡು ಅರ್ಥಮಾಡಿಕೊಳ್ಳಬೇಕಾದ ಅಗತ್ಯವನ್ನು ನಿರೂಪಿಸುವುದರ ಮೂಲಕ ದಾಂಪತ್ಯ ಸಂಬಂಧಗಳಿಗೆ ಲೇಖಕಿ ಸ್ಪಷ್ಟರೂಪ ಕೊಡುತ್ತಾರೆ. ಪಶ್ಚಾತ್ತಾಪ ಮತ್ತು ಅಸಹಾಯಕತೆಗಳ ಬೇಗೆಯಲ್ಲಿ ಬೇಯುವ ರಶೀದ್‌ಗೆ ಕೂಡ ಸಂಪ್ರದಾಯದ ಹಿಡಿತವಿದೆ. ತನ್ನಿಚ್ಚೆಯ ನಾದಿರಾಳನ್ನು ಕರೆತರುವಂತಿಲ್ಲ. ಈಗ ಆತ ವಿಚ್ಛೇದಿತ ಪತ್ನಿಯ ಮನೆಗೆ ಕಾಲಿಡುವಂತೆಯೂ ಇಲ್ಲ. ಇನ್ನು ನಿಯಮವನ್ನು ಪ್ರಶ್ನಿಸುವ, ಮೀರುವ ಧೈರ್ಯ ಇಲ್ಲದಿದ್ದರೆ ಇರುವುದೊಂದೇ ದಾರಿ ನಿಯಮಕ್ಕೆ ತಲೆಬಾಗಿಬಿಡುವುದು! ಇಸ್ಲಾಂ ನ ವ್ಯಕ್ತಿನಿಯಮಗಳ ಹಿಡಿತದಿಂದ ಬಿಡಿಸಿಕೊಳ್ಳಲು ಪುರುಷನಿಗೆ ಅಸಾಧ್ಯವಾದಾಗ, ನಿಯಮಗಳಿಂದ ಬಂಧಿತಳಾದ ಮಹಿಳೆ ಅದನ್ನು ಮೀರುವುದು ಪವಾಡವೇ ಸರಿ! ಮೂಲಭೂತವಾಗಿ ರಶೀದ್ ಮನುಷ್ಯತ್ವಹೊಂದಿದ್ದ ವ್ಯಕ್ತಿ. ಭಾವನೆಗಳಿಗೆ ಬೆಲೆ

ಕೊಡುವಂತವನು. ಪರಿಸ್ಥಿತಿಗೆ ಹಿಡಿತಕ್ಕೆ ಸಿಕ್ಕಿ ಉದಾಸೀನ ಮನೋಭಾವದಿಂದ ತನ್ನ ದಾಂಪತ್ಯಕ್ಕೆ ಸಂಚಕಾರವನ್ನು ತಂದುಕೊಳ್ಳುತ್ತಾನೆ.

ಗಂಡ-ಹೆಂಡತಿಯಲ್ಲಿ ಪರಸ್ಪರ ಒಲವು ಇನ್ನೂ ಇದ್ದರೂ ಯಾರಿಂದಲೂ ಅದನ್ನು ಮೀರಲಾಗುವುದಿಲ್ಲ. ರಶೀದ್ ಮೀರುವ ಆಲೋಚನೆ ಮಾಡಿದರೂ ಅವನಿಗೆ ಒತ್ತಾಸೆ ದೊರೆಯುವುದಿಲ್ಲ. ನಾದಿರಾ ಅವಳೇ ಹೇಳುವಂತೆ" ಮುಸ್ಲಿಂ ಸ್ತ್ರೀಯರಿಂದ ನಿಯಮ ಮೀರಿ ನಡೆಯಲು ಸಾಧ್ಯವೇ? ನಿಯಮ ಮೀರುವವರು ಎಂದೆಂದಿಗೂ ಜಹನ್ನ (ನರಕ)ಮಿನಲ್ಲಿ ಬೆಂಕಿಯಲ್ಲಿ ಸುಡಲ್ಪಡುತ್ತಾ ನರಳ ಬೇಕಾಗುತ್ತದೆಂದು ಮೊಲಿಯಾರ್ ಹೇಳುವುದನ್ನು ಕೇಳಿಲ್ಲವೆ?"[೪೩] ಮುಗ್ಧ ಪ್ರಶ್ನೆಗಳು ನಿಯಮಗಳ ಬಗ್ಗೆ ಇರುವ ಭಯದ ಸ್ವರೂಪವನ್ನು ನಿರೂಪಿಸಿವೆ.

ಕಾದಂಬರಿಯಲ್ಲಿ ನಾದಿರಾಳ ತಂಗಿ ಜಮೀಲಳ ಪ್ರಶ್ನೆ ಲೇಖಕಿಯ ಪ್ರಶ್ನೆಯೂ ಆಗಿದೆ. ಹೆಣ್ಣಿನ ದಾಂಪತ್ಯ ಸಂಬಂಧದೊಳಗೆ ಇಸ್ಲಾಂನ ವ್ಯಕ್ತಿನಿಯಮಗಳು ಹಿಡಿತ ಸಾಧಿಸಿರುವುದನ್ನು ವಿಶ್ಲೇಷಿಸುತ್ತವೆ. 'ಒಂದು ರಾತ್ರಿಯ ವಿವಾಹದಲ್ಲಿ ಆಕೆಗೆ ಮಗು ಜನಿಸಿದರೆ ಆಗೇನು ಮಾಡುವುದು? ಬಾಳುಪೂರ್ತಿ ಅವಳು ನರಳಬೇಕಾಗುವುದಿಲ್ಲವೆ? ಅಥವಾ ಒಂದು ದಿನಕ್ಕೆ ಮದುವೆ ಮಾಡಿಕೊಂಡವನು ತಲಾಖ್ ನೀಡದಿದ್ದರೆ ಆತನೇ ಅವಳ ಗಂಡನಾದಂತೆ! ಇಂತಹ ನಿಯಮಗಳಿಂದ ದಾಂಪತ್ಯದ ಜೀವನ ಸಲೀಸಾಗಿ ನರಕ ಸದೃಶವಾಗುವುದರಲ್ಲಿ ಅನುಮಾನವಿಲ್ಲ.'

ಈ ರೀತಿಯ ಮದುವೆಗಳನ್ನು ಮಾಡುವಾಗ ಇಂತಹ ಸಮಸ್ಯೆಗಳನ್ನು ತಪ್ಪಿಸಲು ನಿಯಮಗಳನ್ನು ಕಾಪಾಡಲು ಹೆಣ್ಣನ್ನೇ ಹೃದಯಹೀನಳನ್ನಾಗಿಸುವ ತಂತ್ರ ಅಮಾನುಷವಾದುದು. ಖಾದರ್‌ನ ಮಾತುಗಳು ಇದಕ್ಕೊಂದು ಸಾಕ್ಷಿ. "ಒಂದು ರಾತ್ರಿಗೆ ಒಬ್ಬಳ ಗಂಡನಾಗುವುದೆಂದರೆ ಗಂಡಸರಿಗೆ ಅವಮಾನವಲ್ಲವೇ?"[೪೪] ಯಾರು ಒಪ್ಪುತ್ತಾರೆ ಹೀಗಾಗಿ ತಮ್ಮ ಮಾತುಗಳನ್ನು ಕೇಳುವ ಮತ್ತೊಬ್ಬ ಅಮಾಯಕ ಗಂಡು ಪ್ರಾಣಿ ಸಿಕ್ಕರೆ ಸಾಕು. ಅವನಿಗೆ ಹೆಣ್ಣನ್ನು ಆಹಾರವಾಗಿ ಉಣಬಡಿಸಲು ಸಿದ್ಧ. ಇದು ನಿಯಮಗಳ ಹೆಸರಿನಲ್ಲಿ ನಡೆಸುವ ಒಪ್ಪಿತ ವ್ಯಭಿಚಾರ. ಎಲ್ಲಾ ಸಮಸ್ಯೆಗಳನ್ನು ಎದುರಿಸಬೇಕಾದವಳು ಹೆಣ್ಣು. ಗಂಡಸರೇನು ಇಂತಹ ಸಮಸ್ಯೆಗಳನ್ನು ಎದುರಿಸಬೇಕಾಗಿಲ್ಲವಲ್ಲ. ಮನಸ್ಸಿಗೆ ಇಲ್ಲಿ ಬೆಲೆ ಇಲ್ಲವೇ ಇಲ್ಲ. ಗಂಡನಿಂದ ಎಷ್ಟೇ ಅವಮಾನಿತಳಾದರೂ ಹೆಣ್ಣು ಎಲ್ಲವನ್ನೂ ಸಹಿಸಿಕೊಳ್ಳಬೇಕು. ಅವನು ದೂರವಿಟ್ಟಾಗ ದೂರವೇ ಇರಬೇಕು. ಬಯಸಿದಾಗ ಬರಬೇಕು. ಹತ್ತಿರವಿರಬೇಕು, ಬಯಕೆಗಳ ಪೂರೈಸಬೇಕು. ಕಾರಣ ಅವಳಿಗೆ ಊಟ,ಬಟ್ಟೆ ಆಶ್ರಯ ನೀಡುವವನು ಅವನೇ ತಾನೆ? ಹೀಗೆ ಭಾವನೆಗಳ ಕಳೆದುಕೊಂಡು, ದೇಹ ಸಂಬಂಧಗಳಿಗೆ, ಸೌಂದರ್ಯಗಳಿಗೆ ಸೀಮಿತವಾದ ದಾಂಪತ್ಯದಿಂದ ನೋವನ್ನು ಉಂಡವರು 'ಸಹನಾ' ಕಾದಂಬರಿಯ ನಸೀಮಾ ಮತ್ತು 'ವಜ್ರಗಳು' ಕಾದಂಬರಿಯ ನಫೀಸಾ.

ನಸೀಮಾ ಮತ್ತು ಪಾಷನ ದಾಂಪತ್ಯ ಸಂಬಂಧ ಮುಸ್ಲಿಂ ಸಮುದಾಯದ ಸಾಂಸಾರಿಕ ಬದುಕಿನ ಇನ್ನೊಂದು ಮುಖವನ್ನು ಅನಾವರಣ ಮಾಡಿದೆ. ಹೆಂಡತಿ ಬೇಡವೆನಿಸಿದರೆ ಮೂರು ತಲಾಖ್ ಹೇಳಿಬಿಡುಗಡೆ ಹೊಂದುವುದು ಒಂದು ಸಾಧ್ಯತೆಯಾದರೆ ತಲಾಕ್ ಕೊಡದೆ ನಾಲ್ಕುಜರನ್ನು ಮದುವೆಯಾಗುವುದು ಇನ್ನೊಂದು ಸಾಧ್ಯತೆ. ಹೆಂಡತಿಯ ಅನಾರೋಗ್ಯವನ್ನು ಮುಂದಿಟ್ಟುಕೊಂಡು ಎರಡನೆಯ ಮದುವೆ ಮಾಡಿಕೊಂಡು ನಂತರ

ಆಕೆಗೆ ತಲಾಖ್ ನೀಡಿ ಮತ್ತೆ ಮೊದಲ ಹೆಂಡತಿಯ ಬಳಿಗೆ ಬಂದ ಗಂಡನನ್ನು ನಿರಾಕರಿಸುವ ಧೈರ್ಯ ತೋರಿದಾಗ ಅದಕ್ಕೆ ಪ್ರತಿಕಾರ ತೀರಿಸಿಕೊಳ್ಳುವ ನೆಪದಲ್ಲಿ ಹೆಂಡತಿ ನಸೀಮಳಿಗೆ ತಲಾಖ್ ನೀಡದೆ, ಗಂಡನೆಂಬ ಹಕ್ಕು ಸಾಧಿಸುವುದನ್ನು 'ಸಹನಾ' ಕಾದಂಬರಿಯಲ್ಲಿ ಕಾಣಬಹುದು. ಇಲ್ಲಿ ಪಾಷಾ ದಾಂಪತ್ಯ ಸಂಬಂಧವನ್ನು ತನ್ನ ಸ್ವಾರ್ಥಕ್ಕೆ ಬಳಸಿಕೊಳ್ಳುವುದರ ಮೂಲಕ 'ಹಠ' ಸಾಧಿಸಿಕೊಳ್ಳುತ್ತಾನೆ. ಧರ್ಮ ಸಮ್ಮತವಾದ ಬಹುಪತ್ನಿತ್ವದ ಲಾಭವನ್ನು ಪಡೆದು, ಭಾವನೆಗಳಿಗೆ ಬೆಂಕಿಹಾಕುತ್ತಾನೆ. ಈ ಹಿನ್ನೆಲೆಯಲ್ಲಿ 'ತಲಾಖ್' ಬಿಡುಗಡೆಯ ಸುಲಭ ಮಾರ್ಗವಾದರೆ, ಬಹುಪತ್ನಿತ್ವ ಶೋಷಣೆಯ ಹಿಡಿತದಲ್ಲಿ ನೇರ ಮಾರ್ಗವಾಗಿದೆ. ಇಲ್ಲೆಲ್ಲಾ ದಾಂಪತ್ಯ ಸಂಬಂಧಗಳು ಅರ್ಥವನ್ನೇ ಕಳೆದುಕೊಂಡು ಅಸ್ಥಿಪಂಜರದಂತೆ ಎನಿಸುತ್ತದೆ. ಕಥೆ ಮುಂದುವರೆದಂತೆ ಪಾಷನ ಪಾಷಾಣ ವ್ಯಕ್ತಿತ್ವ ಅನಾವರಣಗೊಂಡಿದೆ. "ನಾನು ನಿನ್ನ ತಲಾಖ್ ಕೊಡದೆ, ನೀನು ಇನ್ನೊಬ್ಬನನ್ನು ವಿವಾಹವಾಗುವುದು ಎಂದಿಗೂ ಸಾಧ್ಯವಿಲ್ಲ. ನಾನು ಆಗಾಗ ಬರುತ್ತಿರುತ್ತೇನೆ. ನನ್ನ ಕೈಲಾದುದೇನಾದರೂ ಮಗುವಿನ ಖರ್ಚಿಗಾಗಿ ಕೊಡುತ್ತಿರುತ್ತೇನೆ. ಆದರೆ ನಾನು ಇನ್ನೊಂದು ನಿಖಾ ಮಾಡಿಕೊಳ್ಳುತ್ತೇನೆಯೇ ಹೊರತು ಸಾಯುವವರೆಗೆ ನಿನಗೆ ತಲಾಖ್ ಕೊಡಲಾರೆ"[೪೫] ಎನ್ನುವ ಗಂಡನ ಈರ್ಷ್ಯೆ, ಹಠ ಹುರುಳಿಲ್ಲದ ದಾಂಪತ್ಯ ಸಂಬಂಧ ಮತ್ತು ಅದರ ಹಿಡಿತ ಪುರುಷ ಮುಖಿಯಾಗಿರುವುದನ್ನು ಸ್ಪಷ್ಟಪಡಿಸುತ್ತದೆ.

ವಿವಾಹ ವಿಚ್ಛೇದನದ ಹಕ್ಕು ಸ್ತ್ರೀಯರಿಗೂ ಇದೆ ಎಂದು ಮುಸ್ಲಿಮರು ವಾದಿಸುತ್ತಾರೆ. ವಿಚ್ಛೇದನ ನೀಡುವ ಗಂಡಿಗೆ ಕಾರಣಗಳು ಬೇಕಿಲ್ಲ. ಅವನ್ನು ಸಾಬೀತುಮಾಡಬೇಕಾಗಿಲ್ಲ. ಇದು ಗಂಡಸರ ಪಾಲಿಗೆ ಸದಾ ಹಸಿರು. ಆದರೆ ಹೆಂಡತಿ ವಿಚ್ಛೇದನ ಪಡೆಯಲು ಸಮನಾದ ಕಾರಣ ಕೊಡಬೇಕು. ನ್ಯಾಯಾಲಯಕ್ಕೆ ದೂರು ಸಲ್ಲಿಸಬೇಕು. ಅದಕ್ಕೆ ತಕ್ಕುದಾದ ಪುರಾವೆಗಳನ್ನು ಅಥವಾ ಸಾಕ್ಷ್ಯಾಧಾರಗಳನ್ನು ಒದಗಿಸಬೇಕು. ಇವನ್ನೆಲ್ಲಾ ಸ್ಪಷ್ಟೀಕರಿಸಿದರೂ ಅಂತಿವಾಗಿ ನ್ಯಾಯಮೂರ್ತಿ ಒಪ್ಪಿದರೆ ಮಾತ್ರ ಇದು ಸಾಧ್ಯ! ಅದು ಸಾಧ್ಯವಾದಾಗ 'ಶರಿಯತ್' ಅಥವಾ ಮುಸ್ಲಿಂ ಸಮಾಜ ವಿರೋಧಿಸಿದರೆ ಇಲ್ಲಿ ಮತ್ತೆ ಹೆಣ್ಣು ಅತಂತ್ರಳು. ಇದಕ್ಕೆ ಷಭಾನು ಪ್ರಕರಣ ಒಂದು ನಿದರ್ಶನ.

ಪಾಷಾ ತನ್ನ ಸ್ವಾರ್ಥ ಮತ್ತು ಸುಖವನ್ನೇ ಪ್ರಧಾನವಾಗಿಸಿಕೊಂಡು ತನ್ನನ್ನೇ ನಂಬಿ ಬಂದ ನಸೀಮಾಳಿಗೆ ದ್ರೋಹ ಮಾಡುವ ಮೂಲಕ ದಾಂಪತ್ಯ ಸಂಬಂಧಕ್ಕೆ ತೆರೆ ಎಳೆದರೆ, ಸಂಪ್ರದಾಯದ ಮಿತಿ ಮತ್ತು ನಾಗರಿಕತೆಯ ಆಕರ್ಷಣೆ ನಫೀಸಾ ಮತ್ತು ಬದ್ರುದ್ದೀನರ (ವಜ್ರಗಳು) ದಾಂಪತ್ಯ ಸಂಬಂಧವನ್ನು ಕಡಿದು ಹಾಕುತ್ತದೆ. ಪರಿಸ್ಥಿತಿಯ ಒತ್ತಡ ಆಕೆಯನ್ನು ಮತ್ತೊಂದು ಅಸಮ ವಿವಾಹಕ್ಕೆ ದೂಡುತ್ತದೆ. ಆದರೆ ಆಸ್ತಿಯ ಕಾರಣಕ್ಕಾಗಿ ಪಿತೂರಿ ಹೂಡಿ ನಫೀಸಾಳ ಎರಡನೆಯ ದಾಂಪತ್ಯ ಸಂಬಂಧಕ್ಕೆ ತಲಾಖ್ ಕೊಡಿಸುವುದರ ಮೂಲಕ ಆ ಸಂಬಂಧವೂ ಮುರಿದು ಬೀಳುವಂತೆ ಮಾಡುತ್ತಾರೆ. ಇಲ್ಲಿ ದಾಂಪತ್ಯ ಸಂಬಂಧಗಳಿಗೆ ಭದ್ರವಾದ ಬುನಾದಿ ಇಲ್ಲದಿರುವುದರಿಂದ ದಾಂಪತ್ಯ ಸಂಬಂಧದೊಳಗೆ ಬೇರೆಬೇರೆ ಪುರುಷರು ಹೇಗೆ ತಮ್ಮ ಸ್ವಾರ್ಥ ಸಾಧನೆಗೆ ಹೆಣ್ಣನ್ನು ದುರುಪಯೋಗ ಪಡಿಸಿಕೊಳ್ಳುವ ಸಾಧ್ಯತೆಗಳನ್ನು ಕಾದಂಬರಿ ಕಂಡರಿಸಿದೆ.

ದಾಂಪತ್ಯ ಸಂಬಂಧದ ಒಳಮರ್ಮಗಳನ್ನು 'ಸುಳಿ' ಕಾದಂಬರಿ ಬಯಲಿಗೆಳೆದಿದೆ. ಇಲ್ಲಿನ ಗಂಡಸರು ಹೆಣ್ಣಿನ ಸಂಬಂಧವನ್ನು ಧಾರ್ಮಿಕ ಹಿನ್ನೆಲೆಯಲ್ಲಿ ಸಮರ್ಥಿಸಿಕೊಳ್ಳುತ್ತಾರೆ. ಕಾದಂಬರಿಯಲ್ಲಿ ಜೊಹರಾ

ಮತ್ತು ಜಲೀಲನ ದಾಂಪತ್ಯ ಎಲ್ಲಾ ರೀತಿಯಲ್ಲೂ ಅನುಕೂಲವಾಗಿರಬಹುದಾಗಿದ್ದ ದಾಂಪತ್ಯ. ಆದರೆ ನಿಷ್ಠೆ ಇಲ್ಲದ ಗಂಡ ಅಡಿಗೆ ಕೆಲಸದ ಅಸಹಾಯಕ ಹುಡುಗಿಯೊಂದಿಗೆ ಸಂಬಂಧ ಹೊಂದಿ ಆಕೆ ಅದರ ಫಲ ಹೊತ್ತು ನಿಂತಾಗ ಜೊಹರಾ ತತ್ತರಿಸಿಹೋಗುತ್ತಾಳೆ. ತನ್ನ ಮನೆತನದ ಗೌರವವನ್ನು ಕಾಪಾಡಿಕೊಳ್ಳಲು ಯತ್ನಿಸುತ್ತಾಳೆ. ಈ ಸಂದರ್ಭದಲ್ಲಿ ತಾಯಿ ಅಮೀನಾಬಿ ಹೇಳುವ : "ಗಂಡಸರೆಂದರೆ ಹಾಗೆಯೇ ಮೋಳೇ, ಕೆಸರುಕಂಡಲ್ಲಿ ತುಳಿಯುತ್ತಾಳೆ. ನೀರು ಕಂಡಲ್ಲಿ ತೊಳೆಯುತ್ತಾರೆ. ನಿನ್ನಬ್ಬನನ್ನೇ ನೋಡು, ಹಗಲಿರುಳು ಯಾವ್ಯಾವುದೋ ಹುಡುಗರ ಸಹವಾಸ. ನಾನೆಷ್ಟು ಕೋಪಿಸಿಕೊಂಡೆ, ಕಣ್ಣೀರು ಸುರಿಸಿದೆ, ನಾನೇನು ಮಾಡಿದೆ, ಈಗ ಮುದುಕರಾದ ಮೇಲೂ ಇಂತಹ ಚಟ ಬಿಟ್ಟಿಲ್ಲವಲ್ಲ?"[೪೬] ಎಂಬ ಈ ಮಾತು ಗಂಡಿನ ಲೈಂಗಿಕ ಸ್ವಾತಂತ್ರ್ಯದ ಮತ್ತೊಂದು ಮುಖವನ್ನು ಅನಾವರಣ ಮಾಡಿದೆ. ಕೌಟುಂಬಿಕ ಆವರಣದೊಳಗೆ, ದಾಂಪತ್ಯದೊಳಗಿನ ಕೊಳಕುಗಳನ್ನು ಸಹಿಸಿಕೊಳ್ಳುತ್ತಾ, ವ್ಯವಸ್ಥೆಯೊಡನೆ ಹೊಂದಿಕೊಂಡು ಮನೆತನದ ಗೌರವವನ್ನು, ಸಂಬಂಧವನ್ನು ಉಳಿಸಿಕೊಳ್ಳಲು ಇಲ್ಲಿನ ಹೆಣ್ಣುಪಾತ್ರಗಳು ಹೆಣಗಾಡುತ್ತವೆ.

ದಾಂಪತ್ಯ ಸಂಬಂಧಗಳ ಶೋಧನೆಯ ಕ್ರಿಯೆ ಸಾರ್ವತ್ರಿಕವಾಗಿ ಕಾಣುತ್ತದೆ. ಮುಸ್ಲಿಂ ಸಮುದಾಯವಲ್ಲದೆ ಇತರ ಸಮುದಾಯದಲ್ಲೂ ಹೆಣ್ಣು ಗಂಡಿನ ವಿಷಯ ಲಂಪಟ ತನಕ್ಕೆ ಸರಕಾಗುವ ಚಿತ್ರಣವಿದೆ. ದಾಂಪತ್ಯ ಸಂಬಂಧದಲ್ಲಿ ನಡೆಯುವ ಮತ್ತೊಂದು ರೀತಿಯ ಸ್ತ್ರೀ ಶೋಷಣೆಯ ಸ್ವರೂಪವನ್ನು ಕಾಣಬಹುದು.

ತಾನು ಬಯಸಿದ ಹುಡುಗಿಯನ್ನು ತನ್ನ ಕಾಮದಾಹಕ್ಕೆ ಬಳಸಿಕೊಳ್ಳಲು ವಾಸು ಮಾಡುವ ಪಿತೂರಿ ಶ್ರೀಧರನಿಗೆ ತಿಳಿಯುವುದೇ ಇಲ್ಲ. ದುರಾಲೋಚನೆಯಿಂದಲೇ ಸಂಚು ರೂಪಿಸಿ ಶ್ರೀಧರ ಮತ್ತು ಕುಸುಮಳ ಮದುವೆಯನ್ನು ಮಾಡಿಸುವ ವಾಸು ಬಡತನ ಮತ್ತು ಮುಗ್ಧತೆಯನ್ನು ಬಳಸಿಕೊಳ್ಳಲು ನಾಟಕೀಯತಂತ್ರ ರೂಪಿಸಿಕೊಳ್ಳುವುದನ್ನು ಕಾದಂಬರಿಯಲ್ಲಿ ಕಾಣಬಹುದು. ಹೆಂಡತಿಯನ್ನು ತನ್ನ ಒಡೆಯನ ಕಾಮತೃಷೆಗೆ ಬಲಿಕೊಡುವ ಶ್ರೀಧರನಂತಹ ಗಂಡಂದಿರಿಗೆ ಸ್ವಾಭಿಮಾನಕ್ಕಿಂತ ಹಣದ ಹಾಗೂ ಅಂತಸ್ತಿನ ಅಭಿಮಾನವೇ ಮುಖ್ಯವಾಗಿದೆ. ಅನುಕೂಲದ ಮುಂದೆ ದಾಂಪತ್ಯ ಸಂಬಂಧ ಪ್ರಮುಖವಾಗುವುದಿಲ್ಲ. ಈತ ಕುಸುಮಳ ದಾಂಪತ್ಯ ಜೀವನದ ಸುಂದರ ಕನಸುಗಳನ್ನು ನಿಮಿಷ ಮಾತ್ರದಲ್ಲಿ ಛಿದ್ರ ಮಾಡುತ್ತಾನೆ. ಅದಕ್ಕೆ ಸಿಕ್ಕ ಪರವಾನಿಗೆ ಗಂಡನೆಂಬುದು. ಆ ಹಕ್ಕನ್ನು ಸಾಧಿಸಿಕೊಳ್ಳುತ್ತಾನೆ. ಉಳ್ಳವರ ತೆವಲಿಗೆ ಮತ್ತು ಬಡವನ ಹಣದ ದಾಹಕ್ಕೆ ಕುಸುಮ ಗಾಳವಾಗುವುದನ್ನು ಇಲ್ಲಿ ಕಾಣಬಹುದು. ಕಾದಂಬರಿಯಲ್ಲಿ ಕಾಣುವ ನಾಟಕೀಯ ಸನ್ನಿವೇಶಕ್ಕೆ ವಾಸ್ತವದ ಪ್ರತಿರೋಧ ಕಾಣುವುದು ಕುಸುಮಳಿಂದ ಮಾತ್ರ. ಆದರೆ ಆ ಪರಿಸ್ಥಿತಿಯನ್ನೇ ಮತ್ತೆ ತಮ್ಮ ಸ್ವಾರ್ಥಕ್ಕೆ ಬಳಸಿಕೊಂಡು ಆಕೆಗೆ ಹುಚ್ಚಿ ಪಟ್ಟ ಕಟ್ಟಿ ಅವಳ ಬದುಕನ್ನೇ ಬರಿದು ಮಾಡಿದ ಇವರು ಮನುಷ್ಯ ರೂಪದ ರಾಕ್ಷಸರು. ಗಂಡಸರ ದೈಹಿಕ ತೆವಲಿಗೆ ಸರಕುಗಳಾಗಿ ಹೆಣ್ಣುಗಳು ಬಲಿಯಾಗುವ ಸ್ವರೂಪವನ್ನು ವಾಚ್ಯ ನೆಲೆಯಲ್ಲೇ ಕಾದಂಬರಿ ನಿರೂಪಿಸಿದೆ. ಇಲ್ಲಿ ಶ್ರೀಧರ ವಾಸು ರೂಪಿಸಿದ ನಾಟಕೀಯ ಸನ್ನಿವೇಶವನ್ನು ಯಾವುದೇ ಪ್ರತಿರೋಧವಿಲ್ಲದಂತೆ ಒಪ್ಪಿಕೊಳ್ಳುವುದು ಅವನ ವ್ಯಕ್ತಿತ್ವದ ಟೊಳ್ಳುತನವನ್ನು ಬಯಲು ಮಾಡಿದೆ. ದಾಂಪತ್ಯದ ಮಧ್ಯೆ ನುಸುಳುವ ವಾಸು ನಯನ ವಂಚಕ, ಸೋಗಲಾಡಿತನದ ವಿಕೃತ ವ್ಯಕ್ತಿತ್ವಕ್ಕೆ ಒಂದು ನಿದರ್ಶನ. ದಾಂಪತ್ಯದೊಳಗೆ ನಡೆಯುವ ಗಂಡಸರ ವ್ಯಭಿಚಾರಕ್ಕೆ ಹೆಂಗಸರು ಆಹಾರವಾಗುವುದನ್ನು

ನಿರೂಪಿಸುವುದರ ಮೂಲಕ ಮುಗ್ಧರ ಮೌನ ಆಕ್ರಂದನಕ್ಕೆ ಸಾರಾ ಇಲ್ಲಿ ಧ್ವನಿಯಾಗಿದ್ದಾರೆ.

ಬಡವರಿಗೆ ಬಡತನವೇ ಒಂದು ಶಾಪವಾದರೆ, ಅಲ್ಲಿ ಹೆಣ್ಣು ಮಕ್ಕಳು ಶಾಪಗ್ರಸ್ತರಂತೆ. ವ್ಯವಸ್ಥೆಯೇ ಇಂತಹ ಸಮಸ್ಯೆಗಳನ್ನು ತಂದೊಡ್ಡಿದೆ. ಹೆಣ್ಣು ಮಕ್ಕಳಿಗೆ ಮದುವೆ ಮಾಡಿ ಸಾಮಾಜಿಕ ಕರ್ತವ್ಯವನ್ನು ಈಡೇರಿಸಿಕೊಳ್ಳಲು ಹೆತ್ತವರು ತವಕಿಸುತ್ತಾರೆ. ಇಂತಹ ಸಂದರ್ಭದಲ್ಲಿ ಆರ್ಥಿಕವಾಗಿ ಅನುಕೂಲವಿರುವ ಗಂಡುಗಳು ದೊರೆತರೆಂದರೆ ಅವರಿಗೆ ಸ್ವರ್ಗದ ಬಾಗಿಲು ತೆರೆದಂತೆ. ಅವರ ಹಿಂದು-ಮುಂದಿನ ಸಮಸ್ಯೆ ಮತ್ತು ಸಂಸ್ಕಾರಗಳಿಗಿಂತ ಹೊರ ನೋಟದ ಆಕರ್ಷಣೆಗೆ ಒಳಗಾಗಿ ಹೆಣ್ಣು ಮಕ್ಕಳ ಬದುಕಿಗೆ ಕುತ್ತು ತರುತ್ತಾರೆ. ತಾವೂ ನೋವನ್ನು ಅನುಭವಿಸುತ್ತಾರೆ. 'ಸುಳಿ' ಕಾದಂಬರಿಯ ಹಮೀದ್ ಮತ್ತು ಮರಿಯಮ್ಮಳ ದಾಂಪತ್ಯ ಇದಕ್ಕೊಂದು ನಿದರ್ಶನ. ಶ್ರೀಮಂತರ ಸಂಬಂಧವನ್ನು ಬೆಳೆಸಬೇಕೆಂಬ ತಂದೆ-ತಾಯಿಯ ಮಾತನ್ನು ಕಡೆಗಣಿಸಿ, ತನಗೆ ಒಪ್ಪಿತವಾದ ಮರಿಯಮ್ಮಳನ್ನು ಮದುವೆ ಆಗುತ್ತಾನೆ. ಮರಿಯಮ್ಮ ಅತ್ತೆ-ಮಾವನ ಅನಾಧಾರಣೆಗೆ ಗುರಿಯಾಗಿರುತ್ತಾಳೆ. ಮಗ ಕಳ್ಳಸಾಗಣೆ ಮಾಡುವಾಗ ಪೊಲೀಸರ ಕೈಗೆ ಸಿಕ್ಕಿ ಬಿದ್ದದ್ದಕ್ಕೆ ಸೊಸೆಯ ಕಾಲ್ಗುಣವೇ ಕಾರಣವೆಂದು ಹಂಗಿಸುವ, ಮದುವೆಯಾಗಿ ತಿಂಗಳೊಳಗೆ ಹೆಂಡತಿ ಗರ್ಭಧರಿಸಿರುವುದಕ್ಕೆ ಅಪಾರ್ಥ ಕಲ್ಪಿಸಿಕೊಳ್ಳುವ ಅತ್ತೆ-ಮಾವ, ಅವರ ಮಾತನ್ನೇ ನಂಬುವ ಗಂಡ ಹಮೀದ್-ಇವರ ಮೌಢ್ಯದಿಂದಾಗಿ ಮರಿಯಮ್ಮಳ ದಾಂಪತ್ಯ ಸಂಬಂಧ ಶಾಶ್ವತವಾಗಿ ಮುರಿದು ಬೀಳುವುದನ್ನು ಕಾದಂಬರಿಯಲ್ಲಿ ಕಾಣಬಹುದು. ಮದುವೆ ಮತ್ತು ನಂತರದ ನೆಲೆಗಳಲ್ಲಿ ಆಗುವ ಬದಲಾವಣೆಯ ಬಗ್ಗೆ, ಹೆಣ್ಣಿನ ದೇಹ ಪ್ರಕೃತಿಯ ಬಗ್ಗೆ ಸರಿಯಾದ ತಿಳಿವಳಿಕೆ ಇಲ್ಲದ ತಾಯಿ ಮತ್ತು ಮಗನ ಕಾರಣದಿಂದ ಇಲ್ಲಿ ದಾಂಪತ್ಯ ಸಂಬಂಧ ಕುಸಿದು ಬೀಳುತ್ತದೆ. ಈ ಬಗೆಗಿನ ತಿಳಿವಳಿಕೆಯ ಅಗತ್ಯವನ್ನು ನಿರೂಪಕಿ ಒತ್ತಿ ಹೇಳುತ್ತಾರೆ.

ಬಡತನದ ಹಿನ್ನೆಲೆಯಿಂದ ರೂಪುಗೊಂಡ ದಾಂಪತ್ಯ ಸಂಬಂಧಗಳ ವಿಘಟನೆಯ ಕಾರಣಗಳು ಒಂದು ನೆಲೆಯಾದರೆ, ಸಿರಿತನದ ನೆಲೆಯಲ್ಲಿ ಕಂಡುಬರುವ ದಾಂಪತ್ಯದ ವಿಘಟನೆಗಳು ಮತ್ತೊಂದು ನೆಲೆಯನ್ನು ಬಿಚ್ಚಿಟ್ಟಿವೆ. ಬದುಕು ಕುರಿತು, ಭವಿಷ್ಯದ ಕುರಿತು ಯಾವ ಚಿಂತನೆಯೂ ಇಲ್ಲದೆ ಉಂಡು, ತಿಂದು, ಉಡುಗೆ, ತೊಡುಗೆ, ಸಿರಿವಂತಿಕೆಯಲ್ಲಿ ಸುಖಪಡುವ ಹೆಣ್ಣು-ಗಂಡುಗಳಿಗೆ ಕೊರತೆಯಿಲ್ಲ. ಕಷ್ಟಗಳ ಅರಿವಿಲ್ಲದ, ಯಾವುದೇ ಅಡೆತಡೆಯಿಲ್ಲದ ಹೆಣ್ಣು-ಗಂಡುಗಳು ಅವರ ಸ್ವೇಚ್ಛಾವೃತ್ತಿಗೆ ಒತ್ತಾಸೆ ನೀಡುವ ತಂದೆ-ತಾಯಿಗಳು; ಮಕ್ಕಳ ಬಗ್ಗೆ ಗಮನಹರಿಸಲಾಗದ ತಂದೆ-ತಾಯಿಗಳು ಇವರಿಂದಾಗಿ ಬಿಗಿತಪ್ಪಿ ಅಡ್ಡದಾರಿಗೆ ಗಂಡಸರು ನಡೆದಾಗ, ಅದರ ಪರಿಣಾಮ ಮತ್ತೆ ಹೆಣ್ಣಿಗೆ ಮೀಸಲು.

ತಂದೆಯೇ ಆರಂಭಿಸಿದ ಮಾದಕ ದ್ರವ್ಯದ ಹೊಂಡದಲ್ಲಿ ಮಗ ಜಮಾಲ ಬಿದ್ದು ಒದ್ದಾಡುವುದನ್ನು ಕಂಡ ತಂದೆ ಮುಮ್ಮಟಿ ದಿಗ್ಭ್ರಾಂತನಾಗುತ್ತಾನೆ. ಇದರಿಂದ ಮಗನನ್ನು ಹೊರತರಲು ಆತನಿಗೆ ಮುನೀರ್ ಜೊತೆ ಮದುವೆ ಮಾಡುತ್ತಾನೆ. ತಂದೆಯ ಕಳ್ಳದಂಧೆಯಲ್ಲಿ ಮಗನೂ ಒಂದಾಗುತ್ತಾನೆ. ಅಳಿಯನ ಸೋಮಾರಿತನ, ಸುಳ್ಳುತನಗಳಿಂದ, ಮಾದಕ ದ್ರವ್ಯಗಳ ವ್ಯಸನದಿಂದ ಬೇಸತ್ತ ರಫೀನಳ ತಂದೆ ಮುನೀರ್‌ನಿಂದ ಮಗಳಿಗೆ ತಲಾಕ್ ಪಡೆಯುವುದರ ಮೂಲಕ ದಾಂಪತ್ಯ ಸಂಬಂಧಕ್ಕೆ ತೆರೆ ಎಳೆಯುತ್ತಾರೆ.

ದಾಂಪತ್ಯದ ವಿಘಟನೆಗೆ ಕೆಲವು ಸಲ ಹೆಣ್ಣು ಕಾರಣಳಾಗುತ್ತಾಳೆ. ತಿಳಿವಳಿಕೆ, ವಿದ್ಯೆ ಮತ್ತು ಸಂಸ್ಕೃತಿಯ ಗಂಧವಿಲ್ಲದ ಹಾಜಿರಾ ಅಜ್ಜಿ ಮತ್ತು ತಾಯಿಯ ಸತ್ವವಿಲ್ಲದ ಮಾತುಗಳಿಗೆ ಮರುಳಾಗಿ, ಸಿರಿವಂತ ಗಂಡನ

ಶಕ್ತಿಯನ್ನು ತೋರಿದ್ದಾಳೆ. ಇಲ್ಲಿ 'ಜೊಹರಾ' ಇಂಥ ವ್ಯವಸ್ಥೆಗೆ ಬಲಿಯಾದರೆ, ಮರಿಯಮ್ಮ ಅದನ್ನು ಮೀರುವ ಮನೋಭಾವವನ್ನು ತೋರಿದ್ದಾಳೆ. ಇದು ನಿರೂಪಕಿಯ ಆಶಯವೂ ಆಗಿದೆ.

ಮುಸ್ಲಿಂ ಸಮುದಾಯದ ದಾಂಪತ್ಯದ ನಿಯಮಗಳು ಬಡವರ ಮೇಲೆ ಬಲವಾಗಿರುತ್ತವೆ. ಉಳ್ಳವರಿಗೆ ಅನುಕೂಲವಾಗಿರುತ್ತವೆ. ಇಲ್ಲಿ ಹೆಣ್ಣುಗಳ ಕಡೆಯಿಂದಲೇ ತಲಾಖ್ ಬೇಡಿಕೆ ಬಂದಿದ್ದು, ಅದು ಸಾಧ್ಯವಾಗುವುದು ಸಿರಿತನದ ಹಿನ್ನೆಲೆಯಿಂದ. ಸಾಮಾಜಿಕ ಒಪ್ಪಿತ ನೆಲೆಯಲ್ಲಿ ಹೆಣ್ಣು-ಗಂಡಿನ ಸಂಬಂಧಗಳು ವಿವಾಹದ ಮೂಲಕ ಭದ್ರ ನೆಲೆ ಪಡೆಯುತ್ತವೆ. ಹೆಣ್ಣಿನ ನೆಲೆಯಲ್ಲಿ ರಕ್ಷಣೆಯ ಭದ್ರಕೋಟೆಯಾಗಬೇಕಿದ್ದ ಕೌಟುಂಬಿಕ ಆವರಣ ಅವಳ ಶೋಷಣೆಯ ಕೇಂದ್ರವಾಗಿರುವುದು ಆತಂಕದ ಸಂಗತಿಯಾಗಿದೆ. ಹೆಣ್ಣು ಮದುವೆ ಎಂಬ ವ್ಯವಸ್ಥೆಯಿಂದ ಬಿಡಿಸಿಕೊಳ್ಳಲಾರದೆ, ಮದುವೆ ಆಗಿಯೂ ಆ ವ್ಯವಸ್ಥೆಯೊಳಗೆ ನೆಮ್ಮದಿಯಿಂದ ಬದುಕಲಾರದೆ ಪರಿತಪಿಸುತ್ತಾಳೆ. ಸಾರಾ ಅವರು ಬದುಕಿನಲ್ಲಿ ಗಂಡು-ಹೆಣ್ಣಿನ ಸಂಬಂಧಗಳು ಮಾನವೀಯವಾಗಿ ಅರಳಲು ಇರುವ ಅಡ್ಡಿ-ಆತಂಕಗಳನ್ನು ಹೊರಗೆಳೆಯಲು ತಮ್ಮ ಸಾಹಿತ್ಯದ ಮೂಲಕ ಪ್ರಯತ್ನಿಸಿರುವುದು ಅರ್ಥಪೂರ್ಣವಾಗಿದೆ.

## ಅಧ್ಯಾಯ-೧೦

# ಕಾದಂಬರಿ ಮತ್ತು ಕಥೆಗಳಲ್ಲಿ ಹೆಣ್ಣಿನ ಕೌಟುಂಬಿಕ ಬದ್ಧತೆ

ವಿವಾಹದ ಅಡಿಪಾಯದ ಮೇಲೆ ನಿರ್ಮಾಣಗೊಂಡಿರುವ ಕೌಟುಂಬಿಕ ವ್ಯವಸ್ಥೆಯಲ್ಲಿ ಮಹಿಳೆ ನಿರ್ವಹಿಸುವ ವಿವಿಧ ಆಯಾಮಗಳನ್ನು ಈ ಅಧ್ಯಾಯದಲ್ಲಿ ಗುರುತಿಸಲಾಗಿದೆ. ಸಮಾಜದ ಪೂರ್ವ ಯೋಜಿತ ನಿರ್ಧಾರಗಳ ಹಿಂದೆ ಬಹುಪಾಲು ಅಂಶಗಳು ಪುರುಷರಿಗೆ ಭದ್ರತೆ ಒದಗಿಸುವ ಉದ್ದೇಶಗಳಿಂದ ರೂಪಿತವಾಗಿವೆ. ಹೊರ ನೋಟಕ್ಕೆ ಅವೆಲ್ಲವೂ ಸ್ತ್ರೀಯರ ರಕ್ಷಣೆಗಾಗಿ ಎಂಬ ಲೇಬಲನ್ನು ಅಂಟಿಸಿಕೊಂಡಿವೆ. ಗಂಡು-ಹೆಣ್ಣಿನ ಸಂಬಂಧದ ಆರೋಗ್ಯಕರ ಸಂಸ್ಥೆಯಾಗಬೇಕಾದ ಕುಟುಂಬ ಆಕೆಯ ಶೋಷಣೆಯ ಕೇಂದ್ರವಾಗಿರುವುದು ಶೋಚನೀಯ ಸಂಗತಿ. ವಿವಾಹ ಸಂಬಂಧಿಯಾದ ಸಮಸ್ಯೆಗಳ ಮೂಲಬೇರು ಇರುವುದು ಸಮಾಜದ ಧೋರಣೆಯಲ್ಲಿ. ಕುಟುಂಬದಲ್ಲಿ ಹೆಣ್ಣು ಗಂಡುಗಳ ಬದುಕು ಪರಸ್ಪರ ಪೂರಕವಾಗಿದ್ದು ಸಾಮರಸ್ಯದಿಂದ ಕೂಡಿರಬೇಕು. ಸೋಲು-ಗೆಲುವುಗಳ ಜಗ್ಗಾಟಕ್ಕಿಂತ ಇಲ್ಲಿ ಸಾರ್ಥಕತೆಯೇ ಮುಖ್ಯವಾಗಬೇಕು. ಆದರೆ ಸಾರ್ಥಕತೆ ಹೊಂದಲು ಎಲ್ಲಾ ಹಂತದಲ್ಲೂ ಹೆಣ್ಣಿನ ಸೋಲು ಅನಿವಾರ್ಯವೆಂಬ ಸ್ಥಿತಿಯನ್ನು ಲೇಖಕಿ ಭಿನ್ನವಾಗಿ ಗಮನಿಸುತ್ತಾರೆ. ಹುಟ್ಟಿದ ಮನೆಗಿಂತ ಕೊಟ್ಟ ಮನೆಯಲ್ಲಿ ಆಕೆ ಎದುರಿಸಬೇಕಾದ ವೈರುಧ್ಯಗಳು ಅವಳ ನವಿರಾದ ಬದುಕಿಗೆ ಮಾರಕವೇ ಆಗಿವೆ. ಗಂಡಿನ ಸಾಮಾಜಿಕ ಹೊಣೆಗಾರಿಕೆ, ಹೆಣ್ಣಿನ ಕೌಟುಂಬಿಕ ಹೊಣೆಗಾರಿಕೆ ಎರಡೂ ಪೂರಕವಾಗಿರಬೇಕು. ಆದರೆ ಲಿಂಗ ಪ್ರಧಾನ ವ್ಯವಸ್ಥೆಯಲ್ಲಿ ಹೆಣ್ಣು ತೀರಾ ಕೆಳಹಂತದಲ್ಲಿ ಜೀವಿಸುತ್ತಾಳೆ. ಗಂಡು ಸಮಾನ ಸ್ಥರದಲ್ಲಿ ಇರುವನಾದರೂ, ಅವನಿಗೆ ಪುರುಷ ಪ್ರಧಾನ ಸಮಾಜ ದೌರ್ಜನ್ಯ ವೆಸಗಲು ಎಲ್ಲಾ ಅವಕಾಶಗಳನ್ನೂ ಮಾಡಿಕೊಟ್ಟಿರುವುದನ್ನು ಸಾರಾ ಅವರ ಕಥಾಸಾಹಿತ್ಯದಲ್ಲಿ ಗುರುತಿಸಬಹುದು.

ಸಾಂಪ್ರದಾಯಿಕವಾಗಿ ಹೆಣ್ಣಿನ ಹುಟ್ಟನ್ನು ನಿರಾಕರಣೆಯ ನೆಲೆಯಲ್ಲಿ ಸಮಾಜ ಗಮನಿಸುತ್ತದೆ. ಮನುಷ್ಯನ ಬದುಕಿನ ಸ್ಥಿತಿಗೆ ಸಂಬಂಧಿಸಿದ ಎಲ್ಲಾ ಆಶಯಗಳನ್ನೂ ಗಂಡಿನಮೂಲಕವೇ ಗುರುತಿಸಿಕೊಳ್ಳಬೇಕಾಗಿರುವುದು ಸಾಮಾಜಿಕ ಅಧೋಗತಿಯನ್ನು ಸೂಚಿಸುತ್ತದೆ. ಇಲ್ಲಿ ಹೆಣ್ಣು ಕೇವಲ ಅವನನ್ನು ಅನುಸರಿಸಿ ತನ್ನ ಜೀವನ ಸಾರ್ಥಕ ಮಾಡಿಕೊಳ್ಳಬೇಕು. ತನ್ನದು ಎಂದು ಹೇಳಿಕೊಳ್ಳಲಾಗದ ಸ್ಥಿತಿ ಅವಳದ್ದಾಗಿದ್ದರಿಂದ ಇರುವುದರ ಆಶ್ರಯದಲ್ಲೇ ಬದುಕನ್ನರಸುತ್ತಾಳೆ. ಗಂಡು-ಹೆಣ್ಣಿನ ಬದುಕಿನ ಸಂದರ್ಭದಲ್ಲಿ ಹೆಣ್ಣಿನ ಆಶ್ರಯದ ತಾಣ ಕುಟುಂಬವಾಗಿದೆ.

ಸಾರಾ ಅವರ ಕಥೆ ಕಾದಂಬರಿಗಳಲ್ಲಿ ಹೆಣ್ಣು ಗಂಡುಗಳ ಕೌಟುಂಬಿಕ ಆವರಣದೊಳಗೆ ನಾನಾ ಬಗೆಯ ವಿವರಗಳು ಕಾಣಸಿಗುತ್ತವೆ. ಇಲ್ಲಿ ಪ್ರಧಾನವಾಗಿ ಹೆಣ್ಣು ಹೆಂಡತಿಯಾಗಿ, ತಾಯಿಯಾಗಿ, ಕುಟುಂಬದಲ್ಲಿ ತನ್ನನ್ನು ಗುರುತಿಸಿಕೊಳ್ಳುವ ರೀತಿ, ಜವಾಬ್ದಾರಿಯನ್ನು ನಿರ್ವಹಿಸುವ ಬಗೆ, ಆ ಮೂಲಕ ಆಕೆ ತೋರುವ ಕೌಟುಂಬಿಕ ಬದ್ಧತೆ ಯಾವ ರೀತಿಯದೆಂದು ಗುರುತಿಸುವ ಪ್ರಯತ್ನ ಮಾಡಲಾಗಿದೆ.

ಇಲ್ಲಿ 'ಬದ್ಧತೆ' ಎಂದರೆ ದಾಂಪತ್ಯ ಸಂಬಂಧದೊಳಗೆ ಮತ್ತು ಅದರಿಂದ ಹೊರತಾದ ಸಂದರ್ಭದಲ್ಲೂ, ನಂಬಿದ ಮೌಲ್ಯಗಳಿಂದ ದೂರ ಸರಿಯದಿರುವುದು. ಬಡತನ, ಅಜ್ಞಾನ, ಅಂಧಶ್ರದ್ಧೆಯಿಂದ

ಕೂಡಿರುವ ಹೆಣ್ಣು ಸಂಪ್ರದಾಯ ವ್ಯವಸ್ಥೆಯ ಬಿಗಿ ರಕ್ಷಣೆಯಲ್ಲಿ ಮೂಕಳಾಗಿ ಬದುಕಬೇಕಾಗಿದೆ. ಚಿಕ್ಕ ವಯಸ್ಸಿಗೆ ಮದುವೆಯಾಗಿ ಗಂಡ ಮತ್ತು ಗಂಡನ ಮನೆಯ ಆಶ್ರಯ ಪಡೆಯುವ ಹೆಣ್ಣು, ಈ ಎಲ್ಲಾ ಸಂಬಂಧಗಳನ್ನು ಅರಿಯುವುದರೊಳಗೆ ಅದರ ವಿಘಟನೆಯ ಸುಳಿಯಲ್ಲಿ ಸಿಕ್ಕಿ ಒದ್ದಾಡುತ್ತಾಳೆ. ಗಂಡನ ಅಧಿಕಾರಕ್ಕೆ ಬಲಿಪಶುವಾಗುವ 'ನಿಯಮ ನಿಯಮಗಳ ನಡುವೆ' ಕತೆಯ ಜೊಹರಾ, 'ಗೋಡೆ' ಕತೆಯ ಫರೀದಾ, ಹುಟ್ಟು ಕತೆಯ ಖದೀಜಾ, 'ಬಂದಣಿಗೆ' ಕತೆಯ ಜರೀನಾ, ಸಹನಾ ಕಾದಂಬರಿಯ ಸಕೀನಾ ಮತ್ತು ನಸೀಮಾ, ಪಂಜರ ಕಾದಂಬರಿಯ ನಿರ್ಮಲ, ಎಲ್ಲರೂ ಇದ್ದು ಅನಾಥಳಾಗುವ, ವಜ್ರಗಳು ಕಾದಂಬರಿ ನಫೀಸಾ, ಕೌಟುಂಬಿಕ ಆವರಣದಲ್ಲಿ ಗಂಡಿನಿಂದ ಮಾನಸಿಕ ವೇದನೆಗೆ ಒಳಗಾಗುವರು. ಕೌಟುಂಬಿಕ ಬದ್ಧತೆಯಲ್ಲಿ ತಮ್ಮನ್ನು ಒಂದಾಗಿಸಿಕೊಂಡ ಈ ಪಾತ್ರಗಳು ತಮ್ಮ ಗಂಡಂದಿರಿಂದಾಗಿ ಕೌಟುಂಬಿಕ ವಿಘಟನೆಯ ಸುಳಿಗೆ ಸಿಕ್ಕಿ ನರಳುತ್ತವೆ.

'ಒಂದು ಬದುಕಿನ ಕೆಲವು ಪುಟಗಳು' ಕತೆಯ ಖದೀಜಾ, 'ಚಪ್ಪಲಿಗಳು' ಕಥೆಯ ಸಮೀರ, ಚಂದ್ರಗಿರಿ ತೀರದಲ್ಲಿ ಕಾದಂಬರಿಯ ನಾದಿರಾ 'ಸುಳಿ' ಕಾದಂಬರಿಯ ಮರಿಯಮ್ಮ, ಆಚುಮ್ಮ, ಮೊದಲಾದ ಪಾತ್ರಗಳು ಭಿನ್ನ ಭಿನ್ನ ನೆಲೆಯಲ್ಲಿಗಂಡಿನ ಕ್ರೌರ್ಯಕ್ಕೆ ಒಳಗಾಗಿ ಕೌಟುಂಬಿಕ ವಿಘಟನೆಯಲ್ಲಿ ಪರಿತಪಿಸುತ್ತವೆ. ಗಂಡನಲ್ಲದೆ, ತಂದೆಯಿಂದ, ಅತ್ತೆ ಮಾವನಿಂದ, ಬಾವನಿಂದ, ಇತರ ಗಂಡಸರ ಕುತಂತ್ರದಿಂದ, ಮಕ್ಕಳಿಂದ, ಹೀಗೆ ನಾನಾ ವ್ಯಕ್ತಿಗಳಿಂದ ಹಲವು ಹಿಂಸೆಗಳನ್ನನುಭವಿಸುತ್ತಿದ್ದರೂ ಕೌಟುಂಬಿಕ ಬದುಕಿಗಾಗಿ ಹೋರಾಡುತ್ತವೆ.

ಮದುವೆಯಾದ ಹೆಂಡತಿ ಗರ್ಭಿಣಿ ಎಂದು ತಿಳಿದಿದ್ದರೂ, ತನ್ನ ಮೌಢ್ಯ ಮತ್ತು ಸ್ವಾರ್ಥವನ್ನು ಮುಂದಾಗಿಸಿಕೊಂಡು ನಿರ್ದಾಕ್ಷಿಣ್ಯವಾಗಿ ತೊರೆಯುವ ಗಂಡಿನ ಕ್ರೌರ್ಯ, ಬದುಕು ಮತ್ತು ಸಂಬಂಧಗಳನ್ನು ವ್ಯವಹಾರಿಕ ದೃಷ್ಟಿಯಲ್ಲಿ ಕಾಣುವ ಮಹಮದ್ ಖಾನ್, ಕರೀಂ, ಮುಸ್ತಾಫ, ಖಾದರ್, 'ಸುಣ್ಣ' ಕಥೆಯ ಮುದುಕ ತಂದೆಯಂಥ ಪಾತ್ರಗಳು ಹೆಣ್ಣಿನ ಬದುಕಿಗಿಂತ ತಮ್ಮ ಲಾಭನಷ್ಟದ ಲೆಕ್ಕಾಚಾರದಲ್ಲೇ ಕುಟುಂಬಗಳನ್ನು ಬೀದಿಗೆ ತರುತ್ತವೆ.

ಕೌಟುಂಬಿಕವಾಗಿ ಹೆಣ್ಣು ತನ್ನದೇ ಆದ ಕೌಟುಂಬಿಕ ಹಿನ್ನೆಲೆಯಿಂದ ಬಂದು ಮತ್ತೊಂದು ಕೌಟುಂಬಿಕ ಹಿನ್ನೆಲೆಗೆ ಅನ್ಯವಾಗಿ ನಿಂತುಬಿಡುವುದರಿಂದ ಯಾವ ಅವಗಡಗಳು ನಡೆದರೂ ತನ್ನ ಅಸ್ತಿತ್ವಕ್ಕಾಗಿ ಅವೆಲ್ಲವನ್ನೂ ಸಹಿಸಿಕೊಳ್ಳಬೇಕಾದ ಅನಿವಾರ್ಯತೆ ಏರ್ಪಡುತ್ತದೆ, 'ಅಂಕುರ' ಕಥೆಯ ಶಕೀಲಾ ಇಂಥ ಸ್ಥಿತಿಯನ್ನು ಎದುರುಗೊಳ್ಳುತ್ತಾಳೆ. ಅತ್ತೆಯ ಸಂಬಂಧಗಳು ಮಾನವೀಯಗೊಳ್ಳದೆ, ಅಧಿಕಾರಯುಕ್ತವಾದಾಗ, ವ್ಯಾವಹಾರಿಕವಾದಾಗ ಮತ್ತು ಯಾಂತ್ರಿಕವಾದಾಗ ಸಂಬಂಧಗಳು ಶಿಥಿಲಗೊಂಡು ತನ್ನ ಅಧೀನವಾದವರ ಮೇಲೆ ಅಧಿಕಾರ ನಡೆಸುತ್ತವೆ. ಕುಟುಂಬದ ಆಪ್ತತೆ ಮಾಯವಾಗಿ ಉಸಿರುಕಟ್ಟುವ ವಾತಾವರಣ ನಿರ್ಮಾಣವಾಗುತ್ತದೆ. ಕೌಟುಂಬಿಕವಾಗಿ ಒಳಗಿನ ಸಂಬಂಧಗಳು ಸಮತೋಲನ ಕಳೆದುಕೊಂಡು ಮಾನಸಿಕ ನೆಮ್ಮದಿ ಹಾಳಾಗಿ ಮನೆ ಎಂದರೆ ತನ್ನದಲ್ಲದ ವಾತಾವರಣ ಎಂಬ ಭಾವನೆ ಮೂಡಿಬಿಡುತ್ತದೆ.

ಈ ಹಿನ್ನೆಲೆಯಲ್ಲಿ 'ಸಹನಾ' ಕಾದಂಬರಿಯ ನಸೀಮಾಳ ಅತ್ತೆ ಖತೀಜಮ್ಮ, 'ಅಂಕುರ' ಕಥೆಯ ಆಸ್ಯಮ್ಮ, 'ಉರಿಬಿಸಿಲು' ಕತೆಯ ಅಮೀನಳ ಅತ್ತೆ, 'ನಿಯಮ ನಿಯಮಗಳ ನಡುವೆ' ಕತೆಯ ಜೊಹರಾಳ ಅತ್ತೆ 'ಗೋಡೆ' ಕಥೆಯ ಫರಿದಾಳ ಅತ್ತೆ 'ಸುಳಿ' ಕಾದಂಬರಿಯ ಮರಿಯಮ್ಮನ ಅತ್ತೆ ಮತ್ತು ಮಾವ, ತಮ್ಮ

ಹಿರಿಯ ಸ್ಥಾನ, ಗತ್ತು ಅಧಿಕಾರಗಳನ್ನು ಸಡಿಲಿಸಿ ಪ್ರೀತಿಯಿಂದ ಒತ್ತಾಸೆ ನೀಡಿದ್ದರೆ ಕೌಟುಂಬಿಕ ವಿಘಟನೆಗೆ ಅವಕಾಶವಾಗುತ್ತಿರಲಿಲ್ಲ. ಹೀಗೆ ನಾನಾ ಕಾರಣಗಳಿಂದ ಹೆಣ್ಣು ಮನುಷ್ಯಳಾಗಿ ಬಾಳುವುದು ಕೂಡ ದುಸ್ತರವಾಗಿರುವುದನ್ನು ಅನಾವರಣ ಮಾಡಿದೆ.

ಸಾಮಾಜಿಕವಾಗಿ, ಧಾರ್ಮಿಕವಾಗಿ ಕೌಟುಂಬಿಕವಾಗಿ, ನಾನಾ ನೆಲೆಯಲ್ಲಿ ಹೆಣ್ಣು ಶೋಷಣೆಗೆ ಗುರಿಯಾಗುತ್ತಾಳೆ. ಆದರೆ ಬದುಕಿನಲ್ಲಿ ಗಂಡು ಹೆಣ್ಣುಗಳ ಕಾಮದ ನೀತಿಯನ್ನು ಮೀರಿ ಬದುಕಿನ ಹೊಸ ಸಾಧ್ಯತೆಗಳತ್ತ ಆಲೋಚಿಸುವ 'ಸಹನಾ' ಕಾದಂಬರಿಯ 'ನಸೀನೀ', 'ಸುಳಿ' ಕಾದಂಬರಿ 'ಮರಿಯಮ್ಮ', 'ಖತೀಜಮ್ಮ', ವ್ಯವಸ್ಥೆಯ ಸ್ವೀಕೃತ ಮೌಲ್ಯಗಳನ್ನು ತಿರಸ್ಕರಿಸುವದರ ಮೂಲಕ ಬಂಡಾಯವನ್ನು ತೋರುತ್ತಾರೆ. ಇಲ್ಲಿ ಸ್ತ್ರೀ ಪಾತ್ರಗಳು ವ್ಯವಸ್ಥೆಯಲ್ಲಿ ನಡೆಯುವ ಅನ್ಯಾಯವನ್ನು ಮೌನವಾಗಿಯೇ ಪ್ರತಿಭಟಿಸುತ್ತವೆ. ಬದುಕುವ ಕ್ರಿಯೆಯಲ್ಲೇ ಬದುಕಿನ ಅರ್ಥವನ್ನು ಕಟ್ಟಿಕೊಡುತ್ತವೆ. ವಿಧವೆಯರಾಗಲಿ, ಗಂಡ ದೇಶಾಂತರ ಹೋಗಿರಲಿ, ಬಿಟ್ಟು ಹೋಗಿರಲಿ, ಗಂಡನಿದ್ದೂ ಕೌಟುಂಬಿಕ ಬದ್ಧತೆಯಿಲ್ಲದ ಸ್ಥಿತಿಯಲ್ಲಿ ಇರಲಿ ತಮ್ಮ ಬದುಕನ್ನು, ಮಕ್ಕಳನ್ನು ಆಪ್ತತೆಯಲ್ಲಿ ಬೆಳೆಸುವ, ಮಕ್ಕಳ ಬದುಕು ರೂಪಿಸುವ ಜವಾಬ್ದಾರಿಯನ್ನು ಅವರ ಬದುಕು ರೂಪಿಸುವ ಜವಾಬ್ಧಾರಿಯನ್ನು ತನಗೆ ಸಾಧ್ಯವಾದ ನೆಲೆಯಲ್ಲಿ ನಿರ್ವಹಿಸುತ್ತವೆ. ಆದರೆ ಸಮಾಜದಲ್ಲಿ ತನಗೆ ಆಗುವ ಅನ್ಯಾಯವನ್ನು, ಶೋಷಣೆಯನ್ನು ಪ್ರಶ್ನಿಸುವುದಿಲ್ಲ. ಸಮಾಜದ ಬಗೆಗಿನ ಅಂಜಿಕೆಯನ್ನು ತೊರೆದು ಸಂಘರ್ಷವಿಲ್ಲದೆ, ಸಂಪ್ರದಾಯ ನಿರ್ಮಿಸಿದ ವ್ಯವಸ್ಥೆಯ ನಿಯಮಗಳನ್ನು ಒಪ್ಪಿಕೊಂಡು ಬದುಕಿಗೆ ಬಂಬಲಿಸುತ್ತವೆ.

ಕತೆ ಕಾದಂಬರಿಗಳಲ್ಲಿ ಕಂಡು ಬರುವ ಉಮ್ಮಾಲಿ, ರುಖ್ಯಾಬಿ, ಸಕೀನಾ, ಮರಿಯಮ್ಮ, ಫಾತಿಮಾ, ಹಲೀಮ, ಆಸ್ಮ, ಕಂಜಮ್ಮ, ಕೈಜಮ್ಮ ಆಮೀನಾ, ಕಜ್ಜಮ್ಮ ಮೊದಲಾದ ಪಾತ್ರಗಳು ತಮಗಿರುವ ಬಡತನ, ಸಮಸ್ಯೆ, ಕಷ್ಟ ಪರಂಪರೆಯ ನಡುವೆಯೂ ಕೌಟುಂಬಿಕ ನೆಲೆಯಲ್ಲಿ ತೋರುವ ತಾಳ್ಮೆ ಅಪಾರವಾದುದು. ಬದುಕಿಗಾಗಿ ತುಡಿಯುವ ಈ ಹೆಣ್ಣು ಜೀವಗಳು ಜೀವನಮುಖಿಯಾಗಿ, ಒಂದು ನೆಲೆಯಲ್ಲಿ ಬದುಕನ್ನು ಸಮರ್ಥವಾಗಿಯೇ ಕಟ್ಟಿಕೊಂಡು ಓದುಗರ ನೆಲೆಯಲ್ಲಿ ಗಂಡಿಗಿಂತ ಗಟ್ಟಿ ಪಾತ್ರಗಳಾಗಿಯೇ ಗೋಚರಿಸುತ್ತವೆ. ಅಂದರೆ ಬದುಕಿನಿಂದ ಪಲಾಯನ ಮಾಡದೆ, ತನ್ನಿಂದ ಸಾಧ್ಯವಾದ ಬದುಕನ್ನು ರೂಪಿಸಿಕೊಳ್ಳುವುದರ ಮೂಲಕ ಜೀವ ಸಂಬಂಧಿಯಾಗಿವೆ.

ಗಂಡನ ಮನೆಯ ಅಗತ್ಯಗಳಿಗೆ ಸ್ಪಂದಿಸುವ, ತನ್ನದು ಎಂಬುದನ್ನು ಹಿಂದು-ಮುಂದು ನೋಡದೆ ಧಾರೆ ಎರೆಯಬೇಕಾದ ಸ್ಥಿತಿ ಹೆಣ್ಣಿನದಾಗಿದೆ. ಅವಳಿಗೆ ಸ್ವಂತದ್ದು ಎಂಬುದು ಯಾವುದೂ ಇಲ್ಲ. ಗಂಡ ಮನೆ ಮಕ್ಕಳನ್ನು ಕೂಡ ತನ್ನದಲ್ಲದ ಆತಂಕದಲ್ಲಿ ಕಾಣಬೇಕಾಗುತ್ತದೆ. ಮುಸ್ಲಿಂ ವ್ಯಕ್ತಿ ನಿಯಮಗಳು ಸ್ತ್ರೀಯರಿಗೆ ಮಾರಕವೇ ಆಗಿರುವುದರಿಂದ ಕೌಟುಂಬಿಕ ಬದ್ಧತೆಯಲ್ಲಿ ಪುರುಷನಿಗಿಂತ ಹೆಚ್ಚು ಆಪ್ತತೆಗೆ ಒಳಗಾಗಬೇಕಾದ ಸ್ಥಿತಿ ಎದುರಾಗುವುದನ್ನು ಕಾಣಬಹುದು. 'ಚಂದ್ರಗಿರಿ ತೀರದಲ್ಲಿ' ಕಾದಂಬರಿಯ ಜಮೀಲ, 'ಸಹನಾ'ದ ನಸೀಮಾ, 'ಉರಿಬಿಸಿಲು' ಕಥೆಯ ಜೊಹರಾ, 'ಧ್ವನಿಯಿಲ್ಲದ ನೋವುಗಳು' ಕಥೆಯ ಜುಬೈದಾ ಇಂತಹ ಬದ್ಧತೆಗಾಗಿಯೇ ತಮ್ಮ ಒಡವೆಗಳನ್ನು ನೋವಿನಿಂದಲೇ ಗಂಡಂದಿರಿಗೆ ಒಪ್ಪಿಸುತ್ತಾರೆ.

ಕುಟುಂಬದ ಆರ್ಥಿಕ ಸ್ಥಿತಿಯ ಸುಧಾರಣೆಯಲ್ಲಿ ಹೆಣ್ಣಿನ ದುಡಿಮೆಯೂ ಪೂರಕವಾದುದು

ಕುಟುಂಬದ ಆವರಣದ ಮಿತಿಯೊಳಗೆ ಸಾರ್ಥಕ ಬದುಕನ್ನು ಬಯಸುತ್ತದೆ. ಕುಟುಂಬದ ನೆಮ್ಮದಿಗಾಗಿ ತಮ್ಮ ಕರುಳ ಕುಡಿಗಳ ನೆಮ್ಮದಿಗಾಗಿ ಸದಾ ಕಣ್ತೆರೆದು ಕಾಯುವ ತವಕವಿದೆ. ತನ್ನ ಯಾಂತ್ರಿಕವಾದ ಬದುಕಿನಲ್ಲಿಯೇ ಜೀವಸಂಬಂಧಿಯಾದ ತುಡಿತವಿದೆ. ಈ ಹಿನ್ನೆಲೆಯಲ್ಲಿ ಅವರ ಕಾದಂಬರಿಗಳನ್ನು ನೋಡುವುದಾದರೆ, 'ಚಂದ್ರಗಿರಿ ತೀರದಲ್ಲಿ ಕಾದಂಬರಿಯ ನಾದಿರಾಳ ತಾಯಿ ಫಾತಿಮ ಆ ಮನೆಯ ಆಧಾರ. ಒರಟು ಸ್ವಭಾವದ, ಸರ್ವಾಧಿಕಾರಿ ಮನೋಭಾವದ ಮುಂಗೋಪಿ, ಹಠವಾದಿಯಾಗಿದ್ದ ಗಂಡ ಮಹಮ್ಮದ್‌ಖಾನ್ ಮೂಲಭೂತವಾಗಿ ಸೋಮಾರಿ, ಹೆಂಡತಿಯ ನಿರಂತರ ದುಡಿಮೆಯಲ್ಲಿ, ಹಣಕಾಸಿನ ವ್ಯವಹಾರ ನಿರ್ವಹಿಸುತ್ತಾ, ಮನಸಿಗೆ ಬಂದಷ್ಟು ನಿರ್ದಿಷ್ಟ ಕೆಲಸ ಮಾಡಿಕೊಂಡು ಗೆಳೆಯರೊಡನೆ ಸೇರಿ ಹರಟೆ ಹೊಡೆಯುತ್ತಾ ಕಾಲ ಕಳೆಯುವ ಸ್ವಭಾವದವನು. ಇಬ್ಬರೂ ಹೆಣ್ಣುಮಕ್ಕಳಿದ್ದ ಕುಟುಂಬದಲ್ಲಿ ಹೆಚ್ಚಿನ ಜವಾಬ್ದಾರಿ ಫಾತಿಮಾಳದ್ದೆ ಆಗಿತ್ತು. ಕಾದಂಬರಿಯ ಉದ್ದಕ್ಕೂ ಬದುಕಿನ ಎಲ್ಲಾ ಸಂದರ್ಭಗಳಲ್ಲಿಯೂ ಆಕೆಯ ದುಡಿಮೆಗೆ ಬಿಡುಗಡೆ ದೊರೆತದ್ದೇ ಇಲ್ಲ. ಗಂಡ ಮಕ್ಕಳ ಶ್ರೇಯಸ್ಸಿಗಾಗಿ ನಿರಂತರ ಆಶಿಸುವ ಆ ಜೀವ ತನಗಾಗಿ ಯೋಚಿಸಿದ್ದು ತೀರಾ ಕಡಿಮೆ. ಕೌಟುಂಬಿಕ ಸಂಬಂಧದ ಬಗ್ಗೆ ಆಕೆಗಿದ್ದ ನಿಲುವು "ಸಂಸಾರ ಸಾಯುವವರೆಗೆ ಅದು ಸಮನಾಗಿದ್ದರೆ ಸೈ" ಎಂದು ಗಂಡ ಹಾಕಿದ ಗೆರೆಯನ್ನು ದಾಟುವ ಯೋಚನೆಯನ್ನು ಮಾಡದವಳು. ಜೊತೆಗೆ ತನಗೆ ಗಂಡುಮಕ್ಕಳಿಲ್ಲದಿದ್ದರೂ, ಆಕಾರಣಕ್ಕಾಗಿ ಹಿಂಸಿಸದ, ಇನ್ನೊಂದು ಮದುವೆಯನ್ನು ಆಗದ, ಗಂಡನಿಗೆ ಕೃತಜ್ಞಳಾಗಿದ್ದಾಳೆ. ಇಲ್ಲಿ ಕೂಡ ದಾಂಪತ್ಯ ಸಂಬಂಧವನ್ನು ತನ್ನ ನೆಲೆಯಲ್ಲಿಯೇ ಉಳಿಸಿಕೊಳ್ಳಲು ಹೆಣ್ಣು ಜೀವ ಹಾತೊರೆಯುವುದನ್ನು ಸಹನೆ ಕಟ್ಟಿಕೊಳ್ಳುವುದನ್ನು ಕಾದಂಬರಿಯಲ್ಲಿ ಕಾಣಬಹುದಾಗಿದೆ.

ಆದರೆ ಗಂಡನ ಕೋಪ, ಹಠ, ಮಗಳ ಬದುಕಿಗೆ ಮಾರಕವಾದಾಗ ಫಾತಿಮ ಕಂಗಾಲಾಗುತ್ತಾಳೆ. ಆರ್ಥಿಕ ಕಾರಣಕ್ಕಾಗಿ ಕೌಟುಂಬಿಕ ಸ್ತರದಲ್ಲಿ ಬಿರುಕು ಮೂಡುವುದು ಆಕೆಗೆ ಇಷ್ಟವಿಲ್ಲ. ಹೀಗಾಗಿ ಹಿರಿಯ ಮಗಳು ನಾದಿರಾಳ ಒಡವೆಗಳನ್ನು ಕಿರಿಯ ಮಗಳ ಮದುವೆಗೆ ಬಳಸಿಕೊಳ್ಳುವುದನ್ನು ವಿರೋಧಿಸುತ್ತಾಳೆ. ಕುಟುಂಬದಲ್ಲಿ ಸ್ಥಿರತೆಯನ್ನು ಕಾಪಾಡಿಕೊಳ್ಳುವಲ್ಲಿ ಹೆಣ್ಣಿನ ಮನಸ್ಥಿತಿಯನ್ನು ಈ ಸಂದರ್ಭ ವಿಶ್ಲೇಷಿಸಿದೆ. ಸಂಪ್ರದಾಯದ ಚೌಕಟ್ಟಿನಲ್ಲಿ ಕುಟುಂಬಕ್ಕೆ ಬದ್ಧಳಾಗಿ ದುಡಿಯುವ ಫಾತಿಮ ಮಗಳ ಸಮಸ್ಯೆಗೆ ಉತ್ತರ ಹುಡುಕುವಲ್ಲಿ ವಿಫಲಳಾಗುತ್ತಾಳೆ.

ಕೌಟುಂಬಿವಾಗಿ ಹೆಣ್ಣಿನ ಮನೋಧರ್ಮವನ್ನು ಕುರಿತು ಚಿಂತಿಸಿದಾಗ 'ತನ್ನ ಸಂಸಾರ ಭದ್ರವಾಗಿರಬೇಕು, ಹೆಂಗಸರು ಕೈ ಬಿಗಿ ಹಿಡಿಯಬೇಕು. ಗಂಡಸರಿಗೇನು? ಕೈಯಲ್ಲಿ ಹಣವಿದ್ದರೆ ಹೇಗೆ ಬೇಕಾದರೂ ಖರ್ಚು ಮಾಡುತ್ತಾರೆ! ಆದರೆ ಹೆಂಡತಿ? ಕೇವಲ ಪತ್ನಿ ಮಾತ್ರವಲ್ಲ, ತಾಯಿಯಾಗಿರುವವಳು. ಕುಟುಂಬದ ಪ್ರಧಾನ ಕಂಬ. ಅದು ಕೊಂಚ ಅಲುಗಿದರೂ ಸಂಸಾರದ ಭದ್ರತೆ ಕಮ್ಮಿಯಾದೀತು. ನಿನಗಾಗಿ ಬರಲಿರುವ ಪುಟ್ಟ ಅತಿಥಿಗಾಗಿ, ಈ ಮನೆಗಾಗಿ ಎಲ್ಲವನ್ನೂ ತ್ಯಾಗ ಮಾಡಲು ಆಕೆ ಸಿದ್ಧಳಾದರೆ ಮಾತ್ರ ಈ ಮನೆ ಸಂಸಾರ ಉಳಿದೀತು ಅಲ್ಲವಾ?' ಎಂದು ನಾದಿರಾಳ ಅತ್ತೆ ಆಮೀನಮ್ಮಳ ಮಾತು ಹೆಣ್ಣಿನ ಕುಟುಂಬದೊಂದಿಗಿನ ಬಿಡಿಲಾಗದ ಸಂಬಂಧವನ್ನು ಚಿತ್ರಿಸುತ್ತದೆ. ಬದುಕಿನ ಬಗೆಗೆ ಬದ್ಧತೆ ಇರುವ ಹೆಣ್ಣಾಗಲಿ ಅಥವಾ ಗಂಡಾಗಲಿ ಸಾರ್ಥಕವಾದ ಜೀವನಕ್ಕೆ ಈ ಮುನ್ನೆಚ್ಚರಿಕೆ ಅಗತ್ಯವೇ ಸರಿ. ದುಡಿಮೆ ಮತ್ತು ಕನಿಷ್ಠ

ಉಳಿತಾಯ ಬದುಕಿನ ಅಗತ್ಯವಾದ ಬೇಡಿಕೆ ಕೂಡ. ಆರ್ಥಿಕ ನೆಲೆಯ ಹಕ್ಕು ಮತ್ತು ಸ್ವಾತಂತ್ರ್ಯವನ್ನು ಹೊಂದಿರುವ ಪುರುಷ ಕೂಡ ಎಚ್ಚರಿಕೆ ವಹಿಸಬೇಕಾದುದು ಬದುಕಿನ ಸಂದರ್ಭದಲ್ಲಿ ಅನಿವಾರ್ಯ. ಹೆಣ್ಣು ಮಕ್ಕಳು ಅನಿವಾರ್ಯವಾಗಿ ಇಂತಹ ಸ್ಥಿತಿಯನ್ನು ಒಪ್ಪಿಕೊಂಡೇ ಇರುತ್ತಾರೆ. ಕಾರಣ ಮನೆಯ ಒಳಗಿನ ದುಡಿಮೆಗೆ ಸಂಬಳ ಇಲ್ಲವಲ್ಲ. ಒಟ್ಟಾರೆಯಾಗಿ ಕುಟುಂಬದ ಸ್ಥಿರತೆಯನ್ನು ಕಾಪಾಡಿಕೊಳ್ಳುವಲ್ಲಿ ಹೆಣ್ಣು ಹೆಚ್ಚು ಆಸಕ್ತಿ ಹೊಂದಿರುವುದು ಗೋಚರಿಸುತ್ತದೆ. ಹಾಗೆ ನೋಡಿದರೆ ಇಲ್ಲಿನ ಸ್ತ್ರೀಯರ ಆಶಯಗಳು ಕೌಟುಂಬಿಕ ಒತ್ತಡಗಳಿಂದ ನಿರ್ಮಾಣವಾಗಿದ್ದು ಕುಟುಂಬವೊಂದನ್ನು ಸರಿದೂಗಿಸಿಕೊಂಡು ಹೋಗುವಲ್ಲಿ ಅವಳ ಒತ್ತಾಸೆಗಳು ಬಿಂಬಿತವಾಗಿವೆ.

ಅಧ್ಯಾಯ-೧೧

# ಕಥಾ ಸಾಹಿತ್ಯದಲ್ಲಿ ವೈಯಕ್ತಿಕ, ಕೌಟುಂಬಿಕ, ಸಾಮಾಜಿಕ ಸ್ಥಿತಿ

ಸಾರಾ ಅವರು ತಮ್ಮ ಕತೆ ಕಾದಂಬರಿಗಳಲ್ಲಿ ಮುಸ್ಲಿಂ ಸಮಾಜದ ಮಧ್ಯಮ ಮತ್ತು ಬಡವರ್ಗದ ಜೀವನ ಹೇಗೆ ರೂಪುಗೊಂಡಿದೆ ಎಂಬುದನ್ನು ದಾಖಲಿಸಿದ್ದಾರೆ. ಅದನ್ನು ಕಟ್ಟಿಕೊಳ್ಳಬೇಕಾಗುವಲ್ಲಿ ಆಕೆ ಎದುರಿಸುವ ಸಮಸ್ಯೆಗಳು, ಬಿಡಿಸಿಕೊಳ್ಳಬೇಕಾದ ತೊಡಕುಗಳನ್ನು ಇಲ್ಲಿ ವಿವೇಚಿಸುತ್ತಾರೆ. ಹೀಗೆ ಅಭಿವ್ಯಕ್ತಿಸುವಾಗ ಲೇಖಕಿಯ ಗಮನವಿರುವುದು ಮುಸ್ಲಿಂ ಸಮುದಾಯದಲ್ಲಿರುವ ಕೆಡಕುಗಳ ಕಡೆಗೆ. ಆದ್ದರಿಂದ ಅವರ ಸಾಹಿತ್ಯದಲ್ಲಿ ವಿರೋಧದ ಧ್ವನಿ ಕೇಳಿಸುತ್ತದೆ. ಮಹಿಳೆಯೇ ಅವರ ಸಾಹಿತ್ಯದ ಕೇಂದ್ರ ಘಟಕವಾಗಿರುವುದರಿಂದ 'ದುರಂತ' ಸ್ಥಾಯಿಯಾಗಿದೆ. ಮಹಿಳೆಯ ವೈಯಕ್ತಿಕ ಬದುಕಿನಲ್ಲಿ ಕುಟುಂಬ ಮತ್ತು ಸಮಾಜದ ಮನೋಧರ್ಮ ಹೇಗೆ ಸಂಕೀರ್ಣತೆಯನ್ನು ಸೃಷ್ಟಿಸಿಬಿಡುತ್ತವೆ ಎಂಬುದನ್ನು ಸೆರೆಹಿಡಿದಿದ್ದಾರೆ. ಇಲ್ಲಿನ ಮಹಿಳೆಯರು ಮತೀಯ ಚೌಕಟ್ಟನ್ನು ಮೀರಲಾಗದೆ ಸಂಪ್ರದಾಯವನ್ನು ಮುರಿಯಲಾಗದೆ, ಮೌಢ್ಯದ ಸುಳಿಯಿಂದ ಪುರುಷ ಸಮಾಜದ ಒತ್ತಡಗಳಿಗೆ ಒಳಗಾಗುತ್ತಿರುವುದನ್ನು ನೋವಿನಿಂದ ಕಟ್ಟಿಕೊಟ್ಟಿದ್ದಾರೆ.

'ಚಂದ್ರಗಿರಿ ತೀರದಲ್ಲಿ' ಕಾದಂಬರಿಯ ನಾದಿರಾ ತಂದೆ ಹಾಗೂ ಗಂಡ (ಮಹಮದ್ ಖಾನ್ ಮತ್ತು ರಶೀದ್) ಈ ಇಬ್ಬರೂ ಪುರುಷರು ಮಾಡಿದ ತಪ್ಪಿಗಾಗಿ ತನ್ನ ಬದುಕಿನಲ್ಲಿ ಅತೀವ ನೋವು ಅನುಭವಿಸುತ್ತಾಳೆ. ಇಲ್ಲಿ ತಂದೆಯ ಸ್ವಾರ್ಥ, ಸಣ್ಣತನ, ಅಹಂಕಾರ ಮೂಲ ಕಾರಣವಾಗಿ ನಾದಿರಾ ತನ್ನ ಗಂಡ ರಶೀದ್‌ನಿಂದ 'ತಲಾಖ್'ಗೆ ಒಳಗಾಗುತ್ತಾಳೆ.

ಮುಂದಿನ ಬೆಳವಣಿಗೆಯಲ್ಲಿ ಗಂಡನನ್ನು ಪುನಃ ಪಡೆಯುವುದಕ್ಕಾಗಿ 'ಒಜ್ಜತ್'ಗೆ ಒಪ್ಪಿಗೆ ನೀಡಿ ನಂತರ ಅವಳು ಸಂಪ್ರದಾಯ ಸೃಷ್ಟಿಯ ಪಾವಿತ್ರಾಪವಿತ್ರತೆಯ ನಡುವೆ ಸಿಕ್ಕು ವ್ಯವಸ್ಥೆಯ ಬೀಸು ಬಲೆಗೆ ಬೀಳುತ್ತಾಳೆ. ಅಂದರೆ ಮಸೀದಿಯ ಕೊಳಕ್ಕೆ ಹಾರಿ ಪ್ರಾಣ ಬಿಡುತ್ತಾಳೆ. ಇಲ್ಲಿ ಸಂಪ್ರದಾಯ, ಧರ್ಮದ ಹಿಡಿತ ಇಂಥ ದುರಂತಕ್ಕೆ ಕಾರಣವಾದದು ಒಂದು ಮುಖವಾದರೆ, ಅದರ ಒಳಹೊಕ್ಕು ನೋಡಿದರೆ ಆರ್ಥಿಕ ಸಮಸ್ಯೆ ಕಣ್ಣಮುಂದೆ ನಿಲ್ಲುತ್ತದೆ. ನಾದಿರಾಳ ತಂದೆ ಮಹಮ್ಮದ್ ಖಾನ್‌ರ ಆರ್ಥಿಕ ಸ್ಥಿತಿ ಚನ್ನಾಗಿದ್ದರೆ ರಶೀದ್‌ನ ಬಳಿ ಹಣ ಕೇಳುವ ಪ್ರಮೇಯವೇ ಬರುತ್ತಿರಲಿಲ್ಲ. ಆ ಕಾರಣಕ್ಕಾಗಿ ಮನಸ್ತಾಪವೂ ಉಂಟಾಗುತ್ತಿರಲಿಲ್ಲ. ಪರಿಣಾಮವಾಗಿ ರಶೀದ್ ವಿಷಯದಲ್ಲಿ ಸೇಡಿನ ಮನೋಭಾವ ಮೂಡಲು ಸಾಧ್ಯವಾಗುತ್ತಿರಲಿಲ್ಲ. ಆಗ ಕಥೆಯಲ್ಲಿ ನಾದಿರಾಳ ಬದುಕು ದುರಂತವಾಗುವ ಯಾವ ಸಾಧ್ಯತೆಯೂ ಇರುತ್ತಿರಲಿಲ್ಲ. ಆದರೆ ಆರ್ಥಿಕ ಸಮಸ್ಯೆ ಹಾಗೂ ಗಂಡಿನ ಅಹಂಕಾರ ಅದನ್ನು ಪೋಷಿಸಿದ ವ್ಯವಸ್ಥೆ ನಾದಿರಾಳ ಬದುಕನ್ನು ಬಲಿತೆಗೆದುಕೊಳ್ಳುತ್ತದೆ. ಇಲ್ಲಿ ವೈಯಕ್ತಿಕ, ಕೌಟುಂಬಿಕ, ಸಾಮಾಜಿಕ ಈ ಮೂರೂ ನೆಲೆಯಲ್ಲಿ ನಾದಿರಾಳ ಬದುಕು ಮುರುಟಿ ಹೋಗುವುದನ್ನು ಕಾಣುತ್ತೇವೆ. ತಂದೆಗೆ ಅಳಿಯನ ಬಗೆಗಿನ ದ್ವೇಷ ಮಗಳ ಬದುಕಿನ ನೆಮ್ಮದಿಯನ್ನೇ ಬಲಿತೆಗೆದುಕೊಳ್ಳುತ್ತಿರುವುದರ ಸತ್ಯ ಗೋಚರಿಸುವುದಿಲ್ಲ. ಇದಕ್ಕೆ ಧರ್ಮಸಮ್ಮತವಾದ ಮತ್ತೊಂದು ಮದುವೆ ಮಾಡಬಹುದೆಂಬ ಸಾಧ್ಯತೆ ಇದ್ದದ್ದರಿಂದಲೇ ಇಂಥ ನಿರ್ಧಾರಗಳನ್ನು ತೆಗೆದುಕೊಳ್ಳಲು ತಂದೆಗೆ ಪ್ರೇರಣೆ ಸಿಕ್ಕಂತಾಯಿತು.

ತನ್ನ ಹಠ ಮತ್ತು ಉತ್ಸಾಹದಲ್ಲಿ ಕಾಲ ಸರಿದು ತಮ್ಮ ಆರೋಗ್ಯ ಹದಗೆಟ್ಟಾಗ ಮುಪ್ಪು ಅಪ್ಪಿಕೊಳ್ಳಲು ಆರಂಭಿಸಿದಾಗ ದೇಹದ ಶಕ್ತಿಯ ಜೊತೆಯಲ್ಲೇ ಅಹಂಕಾರ ಕರಗಿದಂತೆ ವಿವೇಕ ಎಚ್ಚರಗೊಳ್ಳುತ್ತದೆ. ಮಗಳ ಬಗೆಗೆ ಆತಂಕದ ಸುಳಿವು ಕಾಣುತ್ತದೆ. ಹಾಗಾಗಿ ಯಾವ ರೀತಿಯಲ್ಲಾದರೂ ಮಗಳ ಬದುಕಿಗೆ ಒಂದು ನೆಲೆ ಕಾಣಿಸಬೇಕೆಂದು ಪ್ರಯತ್ನ ಮಾಡುತ್ತಾನೆ ಹಾಗೂ ಸೋಲುತ್ತಾನೆ. ಕೋಪದಲ್ಲಿ ಕೊಯ್ದ ಮೂಗು ಶಾಂತವಾದಾಗ ಬಂದೀತೆ? ಬದುಕಿನ ನೆಲೆಯಲ್ಲಿ ಬೇಕಾಗುವ ಸಂಯಮದ ಅಗತ್ಯ ಬದಲಾಗಬೇಕಾದ ಸಾಮಾಜಿಕ ಮನೋಧರ್ಮವನ್ನು ಕಾದಂಬರಿ ಬಿಂಬಿಸುತ್ತದೆ.

ನಾದಿರಾ ಮತ್ತು ನಫೀಸಾ (ವಜ್ರಗಳು) ತಂದೆ ತಾಯಿಯ ಆಶ್ರಯದಲ್ಲಿ ತಕ್ಕ ಮಟ್ಟಿಗೆ ನೆಮ್ಮದಿಯ ಬದುಕನ್ನೇ ಸವಿದರು. ಆದರೆ ಇವರಿಬ್ಬರಿಗಿಂತ ಭಿನ್ನವಾದ ಪರಿಸ್ಥಿತಿಯಲ್ಲಿ ಬೆಳೆದವಳು 'ಸಹನಾ' ಕಾದಂಬರಿಯ ನಸೀಮಾ. ತಂದೆಯ ಮುಖವನ್ನೇ ಕಾಣದೆ ಸಂತೋಷ ತೃಪ್ತಿಯ ಬದುಕನ್ನು ನೋಡದೆ ಅತೀವ ಬಡತನದಲ್ಲಿ ಪ್ರೀತಿ ಸುಖಗಳಿಗಿಂತ ದುಃಖ ನೋವುಗಳನ್ನೇ ಉಂಡು ಬೆಳೆದವಳು. ಅಪರೂಪಕ್ಕೊಮ್ಮೆ ತಾಯಿ ಹಾಗೂ ಸೋದರ ಮಾವನ ವಾತ್ಸಲ್ಯದ ಸವಿಯುಂಡವಳು. ಮದುವೆಯಾದ ನಂತರ ಗಂಡನ ಮನೆಯ ಆರ್ಥಿಕ ಸಮಸ್ಯೆಯನ್ನು ಕಡಿಮೆ ಮಾಡಲುಗಂಡನಿಗೆ ಹೆಗಲು ಕೊಟ್ಟು ನಿಂತವಳು. ಅತ್ತೆ ನಾದಿನಿ ಮತ್ತು ಅವಳ ಮಕ್ಕಳೊಡನೆ ಒಂದಾಗಿ ಬೆರೆತವಳು. ಬಾಲ್ಯದಿಂದಲೇ ಕಷ್ಟಗಳನ್ನು ಅರಗಿಸಿಕೊಂಡು ಯಾವುದೇ ಮಹತ್ವಾಕಾಂಕ್ಷೆಗಳಿಲ್ಲದೆ ಸಹಜವಾದ ಬದುಕಿಗೆ ಹಂಬಲಿಸಿದವಳು. ಗಂಡನಲ್ಲಿ ವಿಶ್ವಾಸವಿಟ್ಟವಳು. ಈಕೆ ತನಗೆ ಒದಗಿದ ಸಂಕಷ್ಟಗಳನ್ನು ಅರಗಿಸಿಕೊಂಡು ದಿಟ್ಟವಾಗಿಯೇ ಎದುರಿಸಿ ನಾದಿರಾ ಮತ್ತು ನಫೀಸಾಳಿಗಿಂತ ಭಿನ್ನವಾದ ಬದುಕನ್ನು ಆಯ್ಕೆ ಮಾಡಿಕೊಂಡವಳು. ತನ್ನೆದುರಿಗೆ ತನ್ನ ಗಂಡ ಬೇರೊಬ್ಬಾಕೆಯನ್ನು ನಿಖಾ ಆಗಿ ಕರೆತಂದಾಗ ನಸೀಮಾಳ ಮನಸ್ಸು ಅಗ್ನಿಕುಂಡವಾಗುತ್ತದೆ. ಅಲ್ಲಿಂದ ಈಕೆ ತನ್ನ ಗಂಡನ ಬಗೆಗಿನ ನಿರ್ಧಾರವನ್ನೇ ಬದಲಿಸಿಕೊಳ್ಳುತ್ತಾಳೆ.

ತನ್ನ ಸಹನೆಯ ಮುಸುಕನ್ನು ತೆರೆದು ತನ್ನ ಸ್ವಂತದ ಬದುಕಿಗಾಗಿ ಹಂಬಲವಿಟ್ಟುಕೊಂಡು ಆ ದಾರಿಯೆಡೆಗೆ ಯೋಚಿಸತೊಡಗುತ್ತಾಳೆ. ಇಲ್ಲಿ ಆಕೆ ನಂಬಿಕೆಗೆ ಅನರ್ಹನಾದ ಗಂಡನನ್ನು ಮನಸ್ಸಿನಿಂದ ಕಿತ್ತೊಗೆದು 'ಒಲಿದರೆ ನಾರಿ ಮುನಿದರೆ ಮಾರಿ' ಎಂಬಂತೆ ಪುರುಷ ಪ್ರಧಾನ ವ್ಯವಸ್ಥೆಯ ಕ್ರೌರ್ಯ ಮತ್ತು ಸ್ವಾರ್ಥಗಳನ್ನು ಮೆಟ್ಟಿ ನಿಂತು ಬದುಕಿನ ಹೋರಾಟದಲ್ಲಿ ತನ್ನನ್ನು ತಾನು ಗುರುತಿಸಿಕೊಂಡು ಒಂದು ವ್ಯಕ್ತಿತ್ವವಾಗಿ ರೂಪುತಳೆಯುತ್ತಾಳೆ. ಈ ಸಂದರ್ಭದಲ್ಲಿ ಎದುರಾದ ಸಂಪ್ರದಾಯ ಮತ್ತು ವ್ಯವಸ್ಥೆಯ ಅನಿಷ್ಟಗಳಿಗೆ ಕುಗ್ಗದೆ ಅದರ ಗಡಿಗಳನ್ನು ದಾಟುವ ನಿರ್ಧಾರ ಮಾಡುತ್ತಾಳೆ. ಪಾಷನ ಬೆದರಿಕೆಯ ಮಾತುಗಳಿಗೆ ಸೊಪ್ಪುಹಾಕದೆ ಆತನನ್ನು ಎದುರಿಸಿ ಮುಂದೆ ಸಾಗುವ ಅವಳ ಜೀವ ಪ್ರೀತಿ, ಬದುಕಿನ ಬಗೆಗಿನ ಮನೋಧರ್ಮ, ಹೆಣ್ಣನ್ನು ವೈಯಕ್ತಿಕ ನೆಲೆಯಲ್ಲಿ ಪ್ರಧಾನವಾಗಿ ನೋಡುವ ಆಶಯ ಇಲ್ಲಿ ವ್ಯಕ್ತವಾಗಿದೆ. ಬದುಕಿನ ಜಂಜಾಟಗಳನ್ನು ಒಪ್ಪಿ ಅಪ್ಪಿಕೊಂಡು ಅದರೊಳಗಿನಿಂದಲೇ ತನಗೆ ಅಂಟಿದ ಸಂಪ್ರದಾಯ, ಮೌಢ್ಯ, ಅಜ್ಞಾನಗಳನ್ನು ನಿವಾರಿಸಿಕೊಂಡು ಬದುಕಲು ಉತ್ಸಾಹ ತೋರುವುದು ದಿನ ನಿತ್ಯ ಕೊಂದು ತಿನ್ನುವ ವ್ಯವಸ್ಥೆಯ ವರ್ತುಲದಿಂದ ದೂರ ಸರಿದು ಆತ್ಮಾಭಿಮಾನದಿಂದ ತಲೆ ಎತ್ತಿ ಬದುಕುವ ಆಕೆಯ ವ್ಯಕ್ತಿತ್ವವೇ 'ಸಹನಾ' ಕಾದಂಬರಿಯನ್ನು ಇಂದಿಗೂ ಜೀವಂತವಾಗಿರಿಸಿದೆ.

ಕಾದಂಬರಿಯಲ್ಲಿ ನಸೀಮಾಳ ತಾಯಿ ಸಕೀನಾ ಬಿಟ್ಟುಹೋದ ಗಂಡನಿಗಾಗಿ ಕೊರಗುತ್ತಾ ಕೂರದೆ, ತನ್ನ ಮುಂದಿರುವ ಮಗಳಿಗಾಗಿ ಬದುಕನ್ನು ಆಪ್ತತೆಯಿಂದಲೇ ಒಪ್ಪಿಕೊಂಡವಳು. ಸಂಪ್ರದಾಯ ಬದ್ಧ ಸಾಮಾಜಿಕ ವ್ಯವಸ್ಥೆಯನ್ನು ಸ್ವೀಕರಿಸಿ, ಅದಕ್ಕೆ ಬದ್ಧಳಾಗಿ ಬದುಕನ್ನು ರೂಪಿಸಿಕೊಂಡವಳು. ಆದರೆ ಮಗಳು ನಸೀಮಾಳ ನಿರ್ಧಾರಗಳಿಗೆ ಬೆಂಬಲವನ್ನು ನೀಡುವುದರ ಮೂಲಕ ಅವಳ ನೈತಿಕ ಸಂಘರ್ಷಕ್ಕೆ ಬೆಂಬಲವಾಗಿ ನಿಂತದ್ದು. ತವರಿನಿಂದ ಹೆಣ್ಣಿಗೆ ಸಿಗಬೇಕಾದ ಪ್ರೀತ್ಯಾದರಗಳು, ಭರವಸೆಗಳು ತವರಿನ ಮೌಲ್ಯಗಳಾಗಿ ಮೂಡಿ ಬಂದಿವೆ.

ನಸೀಮಾಳಿಗೆ ಗಂಡನ ಬಗ್ಗೆ ನಂಬಿಕೆಯು ಕುಸಿದಾಗ ಅಧೀರಳಾಗದೆ ತನ್ನ ಬದುಕಿನ ಹಾದಿಯನ್ನು ಕಂಡುಕೊಳ್ಳುತ್ತಾಳೆ. ಹೆಣ್ಣು ಮಗುವನ್ನೇ ಸಾಕಿ ಶಿಕ್ಷಣ ಕೊಡಿಸಿ ತಮ್ಮ ಸಮಾಜದ ಮಹಿಳೆಯರ ಸಮಸ್ಯೆಗಳನ್ನು ಬಗೆಹರಿಸುವ ಆಲೋಚನೆ ಮಾಡುತ್ತಾಳೆ. ನಸೀಮಾ ತನ್ನ ಬದುಕಿನ ಬಗೆಗೆ ನಿರ್ದಿಷ್ಟ ಉದ್ದೇಶವನ್ನು ಹೊಂದಿ, ಸ್ಪಷ್ಟವಾದ ನಿರ್ಧಾರಗಳಲ್ಲಿ ಬದುಕನ್ನು ಕಂಡುಕೊಳ್ಳುತ್ತಾಳೆ. ತನಗೆ ಗೌರವ ಕೊಡದ ವ್ಯಕ್ತಿ ಮತ್ತು ವ್ಯವಸ್ಥೆಯನ್ನು ತಿರಸ್ಕರಿಸಿ ತನ್ನ ಬದುಕುವ ಹಕ್ಕನ್ನು ವೈಯಕ್ತಿಕ ಘನತೆಯನ್ನು ಉಳಿಸಿಕೊಳ್ಳುತ್ತಾಳೆ. ಇದು ಲೇಖಕಿಯ ಆಶಯವೂ ಆಗಿದೆ. ಇಂಥಾ ಸಾಹಿತ್ಯ ತನ್ನ ಚೌಕಟ್ಟಿನೊಳಗೆ ಮುನ್ನಡೆಯುವುದರ ಮೂಲಕ ಓದುಗರ ಅರಿವನ್ನು ಹಿಗ್ಗಿಸುತ್ತದೆ. ಜೊತೆಗೆ ಸಾಹಿತ್ಯದ ಅಗತ್ಯವನ್ನು ಮನವರಿಕೆ ಮಾಡುತ್ತದೆ.

ಹೀಗೆ 'ವಜ್ರಗಳು' ಕಾದಂಬರಿಯ ನಫೀಸಾ ಗಂಡನ ಸ್ವಾರ್ಥ ಮತ್ತು ಸಂಪ್ರದಾಯದ ಕಾರಣದಿಂದಾಗಿ ಸಂಬಂಧಗಳಿಂದ ತಿರಸ್ಕೃತಳಾಗಿ ಪರಕೀಯಳಂತೆ ಬಾಳುತ್ತಾಳೆ. ಇಲ್ಲಿ ಇದೇ ಬದುಕು ನೋವು ಮತ್ತು ಹಿಂಸೆಗೆ ಆಹುತಿಯಾಗಿದೆ. ನಫೀಸಾಳ ತಂದೆ ಮಹಮದ್ ಹಾಜಿ ವಿನೀತ ಭಾವದ ವ್ಯಕ್ತಿ, ಸಂಬಂಧಗಳ ಬಗ್ಗೆ ಗೌರವ ಭಾವನೆ ಹೊಂದಿದ್ದ ಇವರಿಗೆ ಮಗಳ ಬಗ್ಗೆ ಅತೀವ ಪ್ರೀತಿ. ತಂದೆ-ತಾಯಿ ಪ್ರೀತಿಯಲ್ಲೇ ಬೆಳೆದವಳು ನಫೀಸಾ. ಮಗಳ ಬಗ್ಗೆ ಕಾಳಜಿ ಇರುವ ತಂದೆ-ತಾಯಿಗಳು ಅವಳ ಬದುಕಿನಲ್ಲಿ ಸುಖವನ್ನು ಆಶಿಸುವುದು ಸಹಜವಾದುದು. ಅದೇ ರೀತಿಯಲ್ಲಿ ಬದ್ರುದ್ದೀನನ ತಂದೆ-ತಾಯಿಗಳು ಹೆಣ್ಣಿನ ಮನೆತನ, ಗುಣ-ನಡತೆಗಳನ್ನು ಪ್ರಧಾನವಾಗಿರಿಸಿಕೊಂಡು ಉತ್ತಮವಾದ ಹುಡುಗಿಯನ್ನೇ ಆರಿಸಿದ್ದಾರೆ.

ಈ ಸಂಬಧದಲ್ಲಿ ಆರ್ಥಿಕ ಸಮಸ್ಯೆ ಎದುರಾಗದೆ ಸಂಪ್ರದಾಯ ಮತ್ತು ಗಂಡಿನ ಮನೋಧರ್ಮ ಹಾಗೂ ಆಸೆ ಆಕಾಂಕ್ಷೆಗಳು ಮುಖ್ಯವಾಗುತ್ತದೆ. ಈ ಸಮಸ್ಯೆ ಇಲ್ಲದಿದ್ದರೆ ನಫೀಸಾಳ ಬದುಕು ಅತಂತ್ರವಾಗುತ್ತಿರಲಿಲ್ಲ ಹಾಗೂ ಆಕೆಯ ಕೌಟುಂಬಿಕ ಜೀವನದ ವಿಘಟನೆಗೆ ಅವಕಾಶವಾಗುತ್ತಿರಲಿಲ್ಲ. ಹುಟ್ಟಿದ್ದು ಹೆಣ್ಣು ಮಗು ಎಂಬುದೇ ತಾತ್ಸಾರಕ್ಕೆ ಕಾರಣವಾಗಿರುವಾಗ ಅದು ತೆಳ್ಳಗಿಲ್ಲ, ಬೆಳ್ಳಗಿಲ್ಲ, ಸುದಂರವಾಗಿಲ್ಲ ಎಂದು ಶೈಶವಾವಸ್ಥೆಯಿಂದಲೇ ಅವಳ ನೆಮ್ಮದಿಗೆ ಸಂಚಕಾರ ಒಡ್ಡುವ ವ್ಯವಸ್ಥೆಯಲ್ಲಿ ಇದ್ಯಾವುದೂ ಇಲ್ಲದ ನಫೀಸಾಳ ಸ್ಥಿತಿ ಹೇಗೆ? ಮೂಲಭೂತವಾಗಿ ಗಂಡಿನ ಹಿರಿಮೆಯನ್ನೇ ಪ್ರತಿಪಾದಿಸುವುದರಿಂದ ಸಹಜವಾಗಿ ಗಂಡಿನ ಆಶಯಗಳು ಚಾಲನೆಗೊಂಡು ಹೆಣ್ಣಿನ ಅಸ್ತಿತ್ವ ಮೂಲೆಗುಂಪಾಗುತ್ತದೆ. ಇಲ್ಲಿ ವೈಯಕ್ತಿಕ, ಕೌಟುಂಬಿಕ ಮತ್ತು ಸಮೂಹ ನೆಲೆಯ ಮೂರೂ ಗ್ರಹಿಕೆಗಳು ಗಂಡಿನ ಇಚ್ಛೆಯನ್ನೇ ಆಧರಿಸಿ ರಚನೆಯಾಗಿವೆ. ಆದ್ದರಿಂದ ಪತಿಪತ್ನಿ ಸಂಬಂಧದ ಸಾಂಸ್ಕೃತಿಕ ಚಿಂತನೆಯು ಹೆಣ್ಣನ್ನು ವೈಭವೀಕರಿಸಿ, ಗಂಡಿಗೆ ಅನುಕೂಲವಾಗಿ ಪರಿಣಮಿಸುವಂತೆ ಮಾಡಿದೆ. ಸಾಮಾಜಿಕ ನಿಯಮಗಳು

ಹೆಣ್ಣಿನ ಕ್ರಿಯಾ ಕೇಂದ್ರವನ್ನು ದೃಷ್ಟಿಯಲ್ಲಿಟ್ಟುಕೊಂಡೇ ರಚನೆಗೊಂಡಿವೆ. ಆಕೆಯನ್ನು ಸೌಂದರ್ಯದ ಅಧಿದೇವತೆಯಂತೆ ವೈಭವೀಕರಿಸಿ, ಅವಳ ಚಿಂತನೆಯ ವ್ಯಾಪ್ತಿಯನ್ನು ಸೌಂದರ್ಯವನ್ನು ಕಾಪಾಡಿಕೊಳ್ಳುವ ಷ್ಟರಮಟ್ಟಕ್ಕೇ ಸೀಮಿತಗೊಳಿಸಿಕೊಂಡು ಬರಲಾಗಿದೆ.ಇದನ್ನೇ ಒಪ್ಪಿಕೊಂಡು ಬರಬೇಕಾದ ವ್ಯವಸ್ಥೆಯನ್ನು ಪುರುಷ ಸೃಷ್ಟಿಸಿಕೊಂಡಿದ್ದಾನೆ. ಆದ್ದರಿಂದ ಬದ್ರುದ್ದೀನ್ ಮತ್ತು ನಫೀಸಾ ಇಬ್ಬರೂ ನಿರಪರಾಧಿಗಳಂತೆ ಕಾಣುತ್ತಾರೆ.

ಆದರೆ ಬದ್ರುದ್ದೀನ್ ತನ್ನ ಹೆಂಡತಿಯ ಮೇಲೆ ನಡೆಸುವ ಲೈಂಗಿಕ ದೌರ್ಜನ್ಯ ಗಂಡಿನ ಕ್ರೌರ್ಯವನ್ನು ಅನಾವರಣಮಾಡಿದೆ. ಹೆಂಡತಿ ಎಂಬ ಹಕ್ಕನ್ನು ಸ್ಥಾಪಿಸುವ ಸಂದರ್ಭದಲ್ಲಿ ಹೆಣ್ಣಿನ ಬಣ್ಣ-ಸೌಂದರ್ಯ ಮುಖ್ಯವಾಗುವುದಿಲ್ಲ. ಮುಂದೆ ಅವಳಿಂದ ತನ್ನ ಮಗುವನ್ನು ಪಡೆಯುವಾಗಲೂ ಈ ಸಮಸ್ಯೆ ಕಾಡುವುದಿಲ್ಲ. ತಂದೆ ಅಬ್ದುಲ್ ಸಾಹೇಬರ ಮಾತುಗಳನ್ನು ನಿರ್ಲಕ್ಷಿಸಿ, ತನ್ನ ಕಾಮಾಕಾಂಕ್ಷೆ ಈಡೇರಿದ ನಂತರ 'ತಲಾಖ್' ಕೊಡುವ ಮೂಲಕ ಸಂಬಂಧಕ್ಕೆ ತೆರೆ ಎಳೆಯುತ್ತಾನೆ. ಹೆಣ್ಣನ್ನು ತನ್ನ ಆಟಿಕೆಯಂತೆ ಬಳಸಿಕೊಳ್ಳುವ ಗಂಡು ವೈಯಕ್ತಿಕವಾಗಿ ಸ್ವಾರ್ಥಪರನಾದರೆ ಕೌಟುಂಬಿಕ ವಿಘಟನೆಗೂ ಅದು ಕಾರಣವಾಗುತ್ತದೆ. ತಲಾಖ್ ನೀಡುವ ಮೂಲಕ ಗಂಡು ತನ್ನ ಹಕ್ಕನ್ನು ಚಲಾಯಿಸಿ ಮತ್ತೊಂದು ಮದುವೆ ಆಗುವುದರ ಮೂಲಕ ಹೊಸ ಸಂಬಂಧನ್ನು ಸ್ಥಾಪಿಸಿಕೊಳ್ಳುತ್ತಾನೆ. ಆದರೆ ನಫೀಸಾ ತನ್ನದಲ್ಲದ ಸಮಸ್ಯೆಯಲ್ಲಿ ಸಿಕ್ಕಿ ವೈಯಕ್ತಿಕವಾಗಿ ಜರ್ಜರಿತಳಾಗುತ್ತಾಳೆ.

ನಫೀಸಾ ಮಾನಸಿಕ ಒತ್ತಡಕ್ಕೆ ಒಳಗಾಗುವುದು ಆಕೆಯ ಆಂತರ್ಯದ ತುಡಿತವನ್ನು ಧ್ವನಿಸಿದರೆ ಮಗುವಿನ ತಬ್ಬಲಿತನಕ್ಕೆ ಹೆದರಿ ಇನ್ನೊಂದು ಮದುವೆಯನ್ನು ನಿರಾಕರಿಸುವುದು ಅವಳ ಮಾತೃವಾತ್ಸಲ್ಯದ ಸಂಕೇತವಾಗಿದೆ. ಗಂಡು-ಹೆಣ್ಣಿನ ಲೈಂಗಿಕ ಸಂಬಂಧಕ್ಕಿಂತ ಕರುಳ ಕುಡಿಯ ತಾಯ್ತನದ ಸಂಬಂಧಕ್ಕೆ ಒತ್ತು ನೀಡುತ್ತಾಳೆ. ಅಷ್ಟರೊಳಗೆ ಬಿಟ್ಟ ಗಂಡನ ಸ್ವಾರ್ಥದ ಸರ್ಪ ಸೆಡೆ ಎತ್ತುತ್ತಿದೆ. ಮಗುವನ್ನು ಕಸಿದುಕೊಳ್ಳುವುದರ ಮೂಲಕ ವಿಷಕಾರುತ್ತದೆ. ಮೌನಿಯಾಗಿ ನೋವನ್ನು ಅನುಭವಿಸುವ ನಫೀಸಾ ಮತ್ತೆ ಮತ್ತೆ ತಿರಸ್ಕಾರಕ್ಕೆ ಒಳಗಾಗುವುದನ್ನು ಗಮನಿಸಿದಾಗ ಸಮಾಜದ ಅಮಾನವೀಯ ನಡವಳಿಕೆ ಬೆಚ್ಚಿ ಬೀಳಿಸುತ್ತದೆ. ವ್ಯವಸ್ಥೆಯ ಹಿಡಿತದಲ್ಲಿ ತವರವರೂ ಕೈಚೆಲ್ಲಿಕೂರುವುದು ಅವರ ಅಸಹಾಯಕತೆಯನ್ನು ಬಿಂಬಿಸಿದೆ. ನಫೀಸಾಳ ಬಗೆಗಿನ ಆರಂಭದ ಪ್ರೀತಿ ಕ್ರಮೇಣ ಅನಾದರದೆಡೆಗೆ ತಿರುಗಿದಾಗ ತಂದೆ ತಾಯಿ ಸೂಚಿಸಿದಂತೆ ಮತ್ತೊಂದು ಮದುವೆಯಲ್ಲಿ ದಾರಿ ಕಂಡುಕೊಳ್ಳುತ್ತಾಳೆ. ಆದರೆ ಈ ರೀತಿಯ ಪರ್ಯಾಯ ದಾರಿಗಳು ಹೆಣ್ಣು ಮಕ್ಕಳ ಬದುಕಿಗೆ ಹೂವಿನಹಾಸಿಗೆ ಅಲ್ಲವೆಂಬುದು ಗಮನಾರ್ಹ.

ಸಾಮಾನ್ಯವಾಗಿ ಹೆಣ್ಣು ಮಕ್ಕಳು ಪುನರ್ವಿವಾಹವಾಗುವ ಸಂದರ್ಭಗಳನ್ನು ಗಮನಿಸಿದಾಗ ಅವು ಹೆಚ್ಚು ಅಸಮ ವಿವಾಹದಲ್ಲಿ ಕೊನೆಗೊಳ್ಳುವುದನ್ನು ಗಮನಿಸಬಹುದು. ಧ್ವನಿಯೇ ಇಲ್ಲದ ನಫೀಸಾ ಬದುಕುವುದಕ್ಕೆ ಬೇಕಾದ ಜೀವ ಸಂಬಂಧಿಯಾದ ಆಶಯವನ್ನು ತೋರುತ್ತಾಳೆ. ತಾಯಿ ಇಲ್ಲದ ಮಕ್ಕಳಿಗೆ ತಾಯಿಯಾಗಿ, ನೆಲೆ ನಿಲ್ಲುವ ವೇಳೆಗೆ ಮತ್ತೆ ಗಂಡಿನ ಕ್ರೌರ್ಯ ತಲೆಎತ್ತಿ ಅಟ್ಟಹಾಸಗೈಯುತ್ತದೆ. ಇಲ್ಲಿ ತನ್ನ ವಯಸ್ಸಿಗೆ ಅನುರೂಪಳಾದ  ಜೋಡಿಯಲ್ಲ ಎಂದು ಭಾವಿಸಿದ ಉಸ್ಮಾನರು  ನಫೀಸಾಳ ವಿಚಾರದಲ್ಲಿ ಔದಾರ್ಯವನ್ನು ತೋರುತ್ತಾನೆ. ಆದರೆ ಇವನ ಹಿರಿಯ ಮಗ ಹುಸೈನ್ ನಫೀಸಾಳ ಪಾಲಿಗೆ ಯಮನಾಗಿ ಬರುತ್ತಾನೆ. ತಂದೆಯ ಆಸ್ತಿಯಲ್ಲಿ ನಫೀಸಾ ಹಕ್ಕುದಾರಳಾಗುತ್ತಾಳೆಂಬ ಸತ್ಯವನ್ನು ಮೊದಲೇ ಊಹಿಸಿದ

ಮಗ ಹಣ-ಆಸ್ತಿಯನ್ನು ಕಸಿದುಕೊಳ್ಳುವ ಉದ್ದೇಶದಿಂದ ಸಂಚುಹೂಡಿ ನಫೀಸಾಳನ್ನು ತವರಿಗೆ ಕಳುಹಿಸುತ್ತಾನೆ. ಪಕ್ಷವಾತರೋಗಕ್ಕೆ ತುತ್ತಾಗಿ ಸಾವು ಬದುಕಿನ ನಡುವೆ ಸಿಕ್ಕು ನರಳುತ್ತಿದ್ದ ತಂದೆಯ ಹೆಬ್ಬೆಟ್ಟು ಮುದ್ರೆ ಹಾಕಿಸಿ ನಫೀಸಾಳಿಗೆ ತಲಾಖ್ ಕಳುಹಿಸುತ್ತಾನೆ. ಮೂಡೂರಿನ ಜಮೀನ್ದಾರರ ಪತ್ನಿ, ಆ ಕುಟುಂಬದ ಭಾಗವೇ ಆಗಿದ್ದ ನಫೀಸಾಳನ್ನು ಉಟ್ಟ ಬಟ್ಟೆಯಲ್ಲಿ ಹೊರಹಾಕುವ ತಂತ್ರದಲ್ಲಿ ಯಶಸ್ವಿಯಾಗುತ್ತಾನೆ. ಹೀಗೆ ತನಗೆ ವೈಯಕ್ತಿಕವಲ್ಲದ ಮತ್ತೊಬ್ಬ ಗಂಡಸಿನ ಕ್ರೌರ್ಯಕ್ಕೆ ಅಮಾಯಕ ಹೆಣ್ಣು ಸಿಕ್ಕಿಕೊಳ್ಳುತ್ತಾಳೆ. ಇಲ್ಲಿ ನಫೀಸಾಳಿಗಿದ್ದ ಗೌಟುಂಬಿಕ ಭದ್ರತೆಯನ್ನು ಹುಸೈನ್ ನಾಶಪಡಿಸುತ್ತಾನೆ. ಮತ್ತೆ ನಾದಿರಾ ತವರಿನ ಆಶ್ರಯ ಪಡೆಯಬೇಕಾದ ಸ್ಥಿತಿ ನಿರ್ಮಾಣವಾಗುತ್ತದೆ. ಈ ಹಂತದಲ್ಲಿ ನಫೀಸಳ ಬದುಕು ಅತಂತ್ರವಾಗಲು ಆಸ್ತಿ ಮೂಲ ಕಾರಣವಾಯಿತು. ಹಣ, ಆಸ್ತಿ, ಅಧಿಕಾರದ ನಿಶೆಯಲ್ಲಿ ಮುಳುಗಿರುವ ಸರಕುಸಂಸ್ಕೃತಿಯ ಸುಳಿಗೆ ಸಿಕ್ಕ ಗಂಡಿಗೆ ಹೆಣ್ಣಿನ ಹೃದಯದ ಮಿಡಿತ ಕೇಳಿಸುವುದಿಲ್ಲ.

ಇಲ್ಲಿ ತಂದೆಯ ಅಸಹಾಯಕ ಸ್ಥಿತಿಯನ್ನು ಮಗ ಹುಸೈನ್ ದುರುಪಯೋಗಪಡಿಸಿಕೊಂಡಿದ್ದು, ತನ್ನ ಮಲತಾಯಿಯನ್ನು ಉಟ್ಟ ಬಟ್ಟೆಯಲ್ಲಿ ಹೊರ ಹಾಕುವ ತಂತ್ರ ಹೂಡಿ ಆಕೆಯನ್ನು ನಿರ್ಗತಿಕಳನ್ನಾಗಿ ಮಾಡುವಲ್ಲಿ ಯಶಸ್ವಿಯಾಗಿದ್ದಾನೆ. ಆ ಮೂಲಕ ತನ್ನ ಅಧಿಕಾರವನ್ನು ಹುಸೈನ್ ಸ್ಥಾಪಿಸಿಕೊಂಡ ಅದೇ ವೇಳೆ ನಫೀಸಾಳ ತವರಿನ ಆರ್ಥಿಕ ಸ್ಥಿತಿ ಹದಗೆಟ್ಟಿದ್ದರಿಂದ ಅವಳ ಹಿಂದಿನ ದಿನಗಳ ಜೀವನಕ್ಕಿಂತ ಭಿನ್ನವಾದ ಪರಿಸ್ಥಿತಿಯನ್ನು ಎದುರಿಸಬೇಕಾಯಿತು. ಬಡತನದ ಹೊರೆ ಅವಳ ತಾಳ್ಮೆಗೆ ಮತ್ತೊಂದು ಪರೀಕ್ಷೆಯಾಗುತ್ತದೆ. ತಲಾಖ್‌ನೊಡನೆ ಕೊಟ್ಟ ನೂರೈದು ರೂಪಾಯಿ 'ಮೆಹರ್'ಹಣ ಅವಳು ಹತ್ತು ವರ್ಷ ಜೀತ ಮಾಡಿದ್ದಕ್ಕೆ ತೆತ್ತ ಬೆಲೆಯಾಗಿತ್ತು.

'ಚಂದ್ರಗಿರಿ ತೀರದಲ್ಲಿ'ಯ ನಾದಿರಾ ಸಾವಿನಲ್ಲಿ ಉತ್ತರ ಕಂಡುಕೊಂಡರೆ, ನಫೀಸಾ ಪುರುಷ ಮತ್ತು ವ್ಯವಸ್ಥೆಯನ್ನು ಮೌನವಾಗಿ ವಿರೋಧಿಸಿ ಬದುಕುವ ಮನೋಧರ್ಮ ತೋರುತ್ತಾಳೆ. ಗಂಡಿನ ಲೈಂಗಿಕ ದೌರ್ಜನ್ಯಕ್ಕೆ ಒಳಗಾಗಿ ಹುಟ್ಟಿದ ಅನಾಥ ಮಗುವಿನ ತಾಯಿಯಾಗಲು ನಿರ್ಧರಿಸಿ ಗೆಳತಿ ಫಾತಿಮಾಳಿಗೆ ಹೇಳುವ ಮಾತು "ಅಣ್ಣ ಅತ್ತಿಗೆಯ ಮಾತು ಹಾಗಿರಲಿ ಅದು ನನ್ನ ಬಳಿ ಬೆಳೆಯುತ್ತಿದೆ ಎಂದು ಅದನ್ನು ಹುಟ್ಟಿಸಿದಾತನಿಗೆ ತಿಳಿದು ಅವನಿಗೆ ಮುಜುಗರ ಆಗಿಯೇ ಆಗುತ್ತದೆ. ಹಾಗೆಯೇ 'ನನ್ನ ಮಗಳು' ಎಂದು ಹೇಳಿ ಅದನ್ನು ಎತ್ತಿಕೊಂಡು ಹೋಗಲು ಆತನು ಬರುವಂತೆಯೂ ಇಲ್ಲ. ನಾನು ಅದಕ್ಕೆ ತಾಯಿಯಾದರೆ, ಅದು ನನಗೆ ಮಗಳೂ ಆಗಬಹುದೇನೋ ನೋಡೋಣ ಅದನ್ನು ತಂದುಕೊಡು" ಈ ಮಾತು ಗಂಡಿನ ಕ್ರೌರ್ಯ ಮತ್ತು ಸಮಾಜದ ಕ್ರೌರ್ಯವನ್ನು ಅನಾವರಣ ಮಾಡಿದೆ. ತನ್ನ ದುಡಿಮೆಯ ಗಳಿಕೆಯಲ್ಲೇ ಆ ಅನಾಥ ಮಗುವನ್ನು ಸಾಕುವ ನಿರ್ಧಾರ ಮಾಡುತ್ತಾಳೆ. ಕಲ್ಮಶಗಳಿಂದ ಕೂಡಿದ ವಿಕೃತ ಮನಸ್ಸುಗಳಿಗಿಂತ ಮುಗ್ಧವಾದ ನಿರ್ಮಲ ನಮುಸ್ಸಿನ ಮಗುವಿಗೆ ಪ್ರೀತಿಯ ಧಾರೆ ಎರೆದು ತನ್ನ ಬದುಕಿಗೆ ಸಮತೋಲನವನ್ನು ಆಕೆ ತಂದುಕೊಳ್ಳುತ್ತಾಳೆ.

ಇಲ್ಲಿ ನಫೀಸಾ ಕೌಟುಂಬಿಕ ಮತ್ತು ಸಮೂಹಗಳಿಂದ ವಂಚಿತಳಾಗಿ ವೈಯಕ್ತಿಕವಾಗಿ ಬೆಳೆದು ನಿಲ್ಲುತ್ತಾಳೆ.

ಸಮಾಜದ ಇಂಥ ಅಮಾನವೀಯ ಕೃತ್ಯಗಳು, ನಿಯಮಗಳು ಹೆಣ್ಣಿನ ವೈಯಕ್ತಿಕ ಬದುಕಿನ ಬಗೆಗೆ

ಪದೇ ಪದೇ ಪ್ರಶ್ನೆ ಎತ್ತುವಂತೆ ಮಾಡುತ್ತದೆ. ಇಷ್ಟೆಲ್ಲಾ ಅನ್ಯಾಯ, ಅಧರ್ಮ ಕಣ್ಣೆದುರಿಗೆ ನಡೆಯುತ್ತಿದ್ದರೂ, ಲೇಖಕಿಯ ಆಕ್ರೋಶ ಇರುವುದು ಇವುಗಳನ್ನು ಮೌನವಾಗಿಯೇ ಒಪ್ಪುವ ವ್ಯವಸ್ಥೆಯ ವಿರುದ್ಧ. 'ಗಾಣಗಿತ್ತಿ ಅಯ್ಯೋ ಎಂದರೆ ನೆತ್ತಿ ತಣ್ಣಾಗುತ್ತಾ' ಎಂಬಂತೆ ಮೊಸಳೆ ಕಣ್ಣೀರು ಸುರಿಸುವ ವ್ಯವಸ್ಥೆಯ ಹುನ್ನಾರಗಳನ್ನು ಓದುಗರ ಮುಂದಿಟ್ಟಿದ್ದಾರೆ. ಮಗಳ ಬದುಕಿನ ಸುಖದ ಕನಸನ್ನು ಕಂಡ ತಂದೆ ತಾಯಿಗಳು ಮಗಳಿಗೆ ಒದಗಿದ ಸ್ಥಿತಿಯಿಂದಾಗಿ ದುಃಖಿತರಾಗುತ್ತಾರೆ. ಯಾವ ತಪ್ಪೂ ಮಾಡದ ನಫೀಸ ವಿಚಿತ್ರ ಮಾನಸಿಕ ಯಾತನೆಗೆ ಗುರಿಯಾಗುತ್ತಾಳೆ. ಸಮಾಜ ಪುರುಷ ಪರವಾಗಿ, ಸ್ತ್ರೀಗೆ ವಿರೋಧಿಯಾಗಿರುವುದನ್ನು ಧ್ವನಿಸುವುದರ ಮೂಲಕ ಲೇಖಕಿ ಓದುಗರಲ್ಲಿ ವ್ಯವಸ್ಥೆಯ ಬಗ್ಗೆ ವಿರೋಧದ ಭಾವ ಮೂಡಬೇಕೆಂಬ ಆಶಯವನ್ನು ವ್ಯಕ್ತಪಡಿಸಿದಂತಿದೆ.

ಅಧ್ಯಾಯ-೧೨

# ಕನ್ನಡ ಸಾಹಿತ್ಯದ ಮೇಲೆ ಸಾರಾ ಅವರ ಪ್ರಭಾವ

ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಸ್ತ್ರೀಪರವಾದ ಆಶಯಗಳು ಕಾಣಿಸಿಕೊಂಡಿದ್ದು ಹನ್ನೆರಡನೆಯ ಶತಮಾನದ ವಚನ ಸಾಹಿತ್ಯಯುಗದಲ್ಲಿ. ಅನಂತರ ಸ್ತ್ರೀಪರವಾದ ಆಶಗಳನ್ನು ಕಾಣಲು ಆಧುನಿಕ ಕಾಲಕ್ಕೆ ಬರಬೇಕು. ಈ ಕಾಲಘಟ್ಟದ ಎಂಬತ್ತರ ದಶಕದಲ್ಲಿ ವಿನೂತನವಾದ ಸಂವೇದನೆಗಳು ಮಹಿಳಾ ಸಾಹಿತ್ಯದ ಮೂಲಕ ಕನ್ನಡ ಸಾಹಿತ್ಯ ಲೋಕವನ್ನು ಪ್ರವೇಶಿಸಿದವು. ಈ ದಶಕ ಮಹಿಳಾ ಸಾಹಿತ್ಯದ ಪಾಲಿಗೆ ವೈಶಿಷ್ಟ್ಯಪೂರ್ಣವಾದ ಕಾಲಘಟ್ಟವಾಗಿದೆ. ಈ ಸಂದರ್ಭದಲ್ಲಿ ಬರೆದ ಲೇಖಕಿಯರು ಪರಂಪರಾಗತ ಮೌಲ್ಯಗಳನ್ನು ಪ್ರಶ್ನಿಸುತ್ತಾ, ಬದುಕಿನ ತಲ್ಲಣಗಳನ್ನು, ಒಳ-ಹೊರಗುಗಳನ್ನು ಮುಕ್ತವಾಗಿ ಬಿಚ್ಚಿಡುತ್ತಾ ಹೊಸ ಸಾಧ್ಯತೆಗಳ ಕಡೆಗೆ ಹುಡುಕಾಟ ನಡೆಸಿದರು. ಈ ಹುಡುಕಾಟ ಮಹಿಳಾ ಸಾಹಿತ್ಯಕ್ಕೆ ಹೊಸದಿಕ್ಕನ್ನು ದೊರಕಿಸಿ ಕೊಟ್ಟಿತು.

ಈ ಕಾಲಘಟ್ಟದ ಸಾಹಿತ್ಯದಲ್ಲಿ ಸಂವೇದನಾಪೂರ್ಣ ಸಂಚಲನವನ್ನು ಉಂಟುಮಾಡಿದ ಲೇಖಕಿಯರಲ್ಲಿ ಸಾರಾ ಅಬೂಬಕ್ಕರ್ ಒಬ್ಬರು. ಭಿನ್ನ ಧರ್ಮ, ಭಿನ್ನ ಭಾಷಿಕ ನೆಲೆಯಿಂದ ಬಂದ ಮುಸ್ಲಿಂ ಮಹಿಳೆಯೊಬ್ಬರು ದೇಶೀಯ ಭಾಷೆಯಲ್ಲಿ ಬರೆಯತೊಡಗಿ, ಅದರಲ್ಲಿಯೂ ಮೊಟ್ಟಮೊದಲ ಬಾರಿಗೆ ತಮ್ಮ ಸಮುದಾಯದ ಸಾಮಾಜಿಕ, ಸಾಂಸ್ಕೃತಿಕ ಬದುಕಿನ ಬಳನೋಟಗಳನ್ನು ಮುಕ್ತವಾಗಿ ತೆರೆದಿಟ್ಟು ಸಾರ್ವತ್ರಿಕ ಬದುಕಿನೊಳಗೆ ಒಂದಾಗಲು ಮುಂದಾದವರು. ಮುಸ್ಲಿಂ ಸಮಾಜದ ಪ್ರಗತಿಪರ ಬದಲಾವಣೆಗೆ ಆಶಿಸಿ, ಆ ಹಿನ್ನೆಲೆಯಲ್ಲಿ ತಮ್ಮ ಸಮಾಜವನ್ನು ಸ್ವವಿಮರ್ಶೆಗೆ ಒಳಗು ಮಾಡಿದ್ದು ನಿಜಕ್ಕೂ ಒಂದು ಗುರುತರವಾದ ಸಾಧನೆಯೇ ಆಗಿದೆ. ಈ ಸಂದರ್ಭದಲ್ಲಿ ಸಾರಾ ಅವರು ಮುಸ್ಲಿಂ ಸಮುದಾಯದ ಜ್ವಲಂತ ಸಮಸ್ಯೆಗಳನ್ನು ಅದರ ದುರಂತದೊಂದಿಗೆ ಕಟ್ಟಿಕೊಡಲು ಏಕಾಂಗಿಯಾಗಿ ಶ್ರಮಿಸಿದರು.

ಧರ್ಮ ಹಾಗೂ ಧರ್ಮದಿಂದ ರೂಪಿತವಾದ ನೀತಿ-ನಿಯಮಗಳು ಪ್ರಶ್ನಾತೀತವಾಗಿರುವಾಗ, ಹೆಂಗಸರನ್ನು ಚಪ್ಪಲಿಗಳಂತೆ ಬಳಸಿಕೊಳ್ಳಬೇಕೆಂಬ ಧೋರಣೆ ಹೊಂದಿರುವಂತಹ ಪರಿಸ್ಥಿತಿಯಲ್ಲಿ ಸ್ತ್ರೀಯರು ಧರ್ಮವನ್ನು ಕುರಿತು ಮಾತನಾಡುವುದೂ ಕೂಡ ಅಸಾಧ್ಯವಾಗಿರುವ ವ್ಯವಸ್ಥೆಯಲ್ಲಿ, ಅದೇ ಧರ್ಮಕ್ಕೆ, ಸಮಾಜಕ್ಕೆ ಸೇರಿದ ಮಹಿಳೆಯೊಬ್ಬರು ಧರ್ಮ, ವ್ಯವಸ್ಥೆ, ಅದನ್ನು ತನ್ನಿಷ್ಟದಂತೆ ಪೋಷಿಸಿಕೊಂಡು ಬರುತ್ತಿರುವ ಮೂಲಭೂತವಾದಿಗಳು ಮತ್ತು ಅವರನ್ನು ಬೆಂಬಲಿಸುತ್ತಿರುವ ಸಮಾಜ, ಮತ್ತದರ ದೋಷಗಳ ಕಡೆಗೆ ಬೆರಳು ಮಾಡಿ ತೋರಿಸಿದ್ದು ಗಮನಾರ್ಹ ಸಂಗತಿ. ಅತ್ಯಂತ ಬಿಕ್ಕಟ್ಟಿನ ಹಾಗೂ ಅಪಾಯದ ಸಂದರ್ಭದಲ್ಲಿ ತಮ್ಮ ಬದುಕನ್ನು ಸಂಘರ್ಷಕ್ಕೆ ಒಡ್ಡಿಕೊಂಡು, ಸಾಹಿತ್ಯದಂತಹ ವೇದಿಕೆಯನ್ನು ಬಳಸಿಕೊಂಡು ದಿಟ್ಟವಾಗಿಯೇ ತಮ್ಮ ಉದ್ದೇಶದ ಸಾಧನೆಯ ಕಡೆ ಮುನ್ನಡೆದರು. ಇಂತಹ ಒಂದು ಪ್ರಯತ್ನ ಬೇರೆ ಬೇರೆ ಬರಹಗಾರರ ಮೇಲೂ ಸಕಾರಾತ್ಮಕ ಪ್ರಭಾವವನ್ನು ಬೀರಲು ಸಾಧ್ಯವಿರುವುದನ್ನು ಅಲ್ಲಗಳೆಯಲಾಗುವುದಿಲ್ಲ. ಆದರೆ ಆ ಪ್ರಭಾವ ನಿಚ್ಚಳವಾಗಿ ಇಂತಹವರ ಮೇಲೆ, ಹೀಗೆಯೇ ಆಗಿದೆ ಎಂದು ಹೇಳಲೂ ಆಗುವುದಿಲ್ಲ.

ಮುಸ್ಲಿಂ ಲೇಖಕಿ ಕನ್ನಡ ಸಾಹಿತ್ಯದಲ್ಲಿ ಬರೆಯತೊಡಗಿದ್ದರಿಂದ ಕನ್ನಡ ಸಾಹಿತ್ಯಕ್ಕೆ ಅನ್ಯವಾಗಿದ್ದ

ಮುಸ್ಲಿಂ ಸಂವೇದನೆ ಪರಿಚಯವಾದಂತಾಯಿತು. ನಿಖಾ, ಆಲಿಕತ್, ಮೆಹರ್, ಅಬ್ಬಾ, ಜಮಾನ್, ಯಾ ಅಲ್ಲಾಹ್, ಉಮ್ಮಾ, ಅಲ್ಲಾಹ್‌ನ ಖುದ್‌ರತ್, ದುವಾ ಮಾಡು, ಮೋಳೇ, ಸೈತಾನ್, ಜಿನ್, ಅತ್ತರ್, ಹರಾಂ, ಜನತುಲ್‌ಪಿರ್‌ದೌಸ್, ಜಮಾ ಅತ್, ಮೌಲವಿ, ಸಲಾಂ, ಹಜ್, ಜಕಾತ್, ಶರಿಯತ್, ಫಾತಿಹ, ಖತೀಜರು, ಇದ್ದತ್, ನಮಾಜ್, ಬಾಂಗ್, ಇಶಾನಮಾಜ್, ಅಸರ್‌ನಮಾಜ್, ಮಗ್ರಿಬ್‌ನಮಾಜ್, ಜಹನ್ನು, ಮೌಲೂದ್, ಮೈಲಿಯಾರ, 'ಎಲ್ಲಾ ಅಲ್ಲಾಹ್‌ನ ಖುದ್‌ರತ್' 'ಅಲ್ ಹಮದು ಲಿಲ್ಲಾಹ' ಇವೇ ಮೊದಲಾದ ಇಸ್ಲಾಂ ಸಂಸ್ಕೃತಿಯ ಪಾರಿಭಾಷಿಕ ಪದಗಳು ಕನ್ನಡ ಪದಗಳೊಂದಿಗೆ ಬೆರೆತುಕೊಂಡು ಓದುಗರಲ್ಲಿ ಮತ್ತೊಂದು ಭಾಷೆ ಸಂಸ್ಕೃತಿ ಮತ್ತು ಬದುಕಿನ ಬಗೆಗೆ ಕುತೂಹಲ ಮೂಡಿಸುತ್ತವೆ. ಜೊತೆಗೆ ಸೌಹಾರ್ದ ಬದುಕಿಗೆ ಪ್ರೇರೇಪಿಸುತ್ತವೆ. ಈ ಪದಗಳು ಕೇವಲ ಪದಗಳಾಗಿ ಉಳಿಯದೆ, ಮುಸ್ಲಿಮರ ಬದುಕಿನ ವಿವಿಧ ನೆಲೆಯನ್ನು ತೆರೆದಿಡುತ್ತವೆ. ತಮ್ಮ ಜನಾಂಗದ ಬದುಕಿನ ನೋವು ನಲಿವುಗಳನ್ನು ಸಾಹಿತ್ಯವಾಗಿಸಿರುವುದರಿಂದ ಸಹಜವಾಗಿ ಭಾಷೆ ಮತ್ತು ಸಂಸ್ಕೃತಿ ಇಲ್ಲಿ ದಾಖಲಾಗಿದೆ. ಇನ್ನೊಂದು ಸಂಸ್ಕೃತಿ, ಸಮುದಾಯದ ಒಳನೋಟಗಳನ್ನು ಕನ್ನಡದಲ್ಲಿಚಿತ್ರಿಸುವಾಗ ಭಾಷಾ ಬಳಕೆಯ ದೃಷ್ಟಿಯಿಂದ ಹೊಸತೊಂದು ಅನುಭವವನ್ನು ಓದುಗರಿಗೆ ತಂದುಕೊಡುತ್ತದೆ. ಇಸ್ಲಾಂ ಸಂವೇದನೆ ಕನ್ನಡದಲ್ಲಿ ಅಭಿವ್ಯಕ್ತಿಗೊಂಡಿದ್ದರಿಂದ ಕನ್ನಡ ಸಾಹಿತ್ಯವೂ ಶ್ರೀಮಂತಗೊಂಡಂತಾಗಿದ್ದು, ಒಂದು ವಿಶಿಷ್ಟ ಆಯಾಮವನ್ನು ದೊರಕಿಸಿಕೊಟ್ಟಂತಾಗಿದೆ.

ಸಾರಾ ಅವರ ಈ ದಿಟ್ಟ ಹೆಜ್ಜೆ ಮುಂದಿನ ಮುಸ್ಲಿಂ ಬರಹಗಾರರಿಗೆ ದಾರಿ ತೋರಿಸಿತಲ್ಲದೆ, ಸಾಹಿತ್ಯಿಕವಾಗಿ ಆರೋಗ್ಯಕರ ರೀತಿಯಲ್ಲಿ ಬೆಳೆಯಲು ಸಾಧ್ಯವಾಯಿತು. ಮುಸ್ಲಿಂ ಸಮಾಜದ ಸಮಗ್ರ ಬದುಕಿನ ಕಡೆಗೂ ಕುತೂಹಲ ಮೂಡಿಸಿತು. ನಮ್ಮೊಂದಿಗೆ ಇದ್ದೂ ನಮ್ಮ ಕಣ್ಣಿಗೆ ಕಾಣದಂತಿದ್ದ ಸಹ ಮಾನವರ ಅಂತರಂಗದ ಲೋಕ ನಮ್ಮ ಕಣ್ಣೆದುರಿಗೆ ಬಂದಿತು. ಈ ಜನಾಗಂದ ಬಗ್ಗೆ ಇದ್ದ ಕೆಲವು ತಪ್ಪು ತಿಳುವಳಿಕೆಗಳನ್ನು ಸರಿಪಡಿಸುವಲ್ಲಿ, ತಿಳಿವಳಿಕೆ ಕೊರತೆಗಳನ್ನು ತುಂಬಿಕೊಡುವಲ್ಲಿ ಗಮನಾರ್ಹ ಪಾತ್ರ ವಹಿಸಿತು. ಅಲ್ಲದೆ ಮಹಿಳಾ ಸಾಹಿತ್ಯಕ್ಕೆ ಮುಸ್ಲಿಂ ಸಂವೇದನೆ ಎಂಬ ಹೊಸ ಆಯಾಮವನ್ನೇ ದೊರಕಿಸಿ ಕೊಟ್ಟಿತು. ಹೀಗಾಗಿ ನಂತರದ ಬರಹಗಾರರು ಮುಸ್ಲಿಂ ಸಮಾಜಿಕ ಮತ್ತು ಸಾಂಸ್ಕತಿಕ ಬದುಕಿನ ವಿಭಿನ್ನ ಮುಖಗಳನ್ನು ಇನ್ನೂ ಗಟ್ಟಿಯಾಗಿ, ಕಲಾತ್ಮಕವಾಗಿ ವೈಚಾರಿಕವಾಗಿ, ವಿಶ್ಲೇಷಿಸಲು ಸಾಧ್ಯವಾಯಿತು.

ಸಾರಾ ಅವರ ಸಮಕಾಲೀನರಲ್ಲಿ ಫಕೀರ್ ಮಹಮ್ಮದ್ ಕಟ್ಪಾಡಿ, ಬೊಳುವಾರು ಹಾಗೂ ಬಾನುಮುಷ್ತಾಕ್ ಅವರು ಕೂಡ ಪುರುಷ ಪ್ರಧಾನ ಸಂಸ್ಕೃತಿಯನ್ನು ತಿರಸ್ಕರಿಸುತ್ತಲೇ ಸ್ತ್ರೀ ಪುರುಷರ ಸಮಾನ ಸಂಸ್ಕೃತಿಗಾಗಿ ಆಶಿಸಿರುತ್ತಾರೆ. ಸಾರಾ ಮತ್ತು ಮಹಮದ್ ಕಟ್ಪಾಡಿಯವರು ಕೇವಲ ಮುಸ್ಲಿಂ ಜನಾಂಗದ ಬದುಕನ್ನು ತಮ್ಮ ಕಥೆ-ಕಾದಂಬರಿಗಳಲ್ಲಿ ವಿಶ್ಲೇಷಿಸಿದರೆ, ಬೋಳುವಾರ ಅವರು ಮುಸ್ಲಿಂ ಬದುಕನ್ನು ಬೇರೆ ಸಂಸ್ಕೃತಿಗಳ ಮುಖಾಂತರ ಗುರುತಿಸಲು ಪ್ರಯತ್ನಿಸಿರುವುದನ್ನು ಕಾಣಬಹುದು. ಅವರ ಕಥೆ-ಕಾದಂಬರಿಗಳಲ್ಲಿ ಮುಸ್ಲಿಂ-ಕ್ರಿಶ್ಚಿಯನ್-ಹಿಂದೂ ಜನಾಂಗದ ಬದುಕಿನ ನಡೆವೆ ಇರುವ ಸಂಬಂಧ, ಸಂಘರ್ಷವನ್ನು ಗುರುತಿಸಬಹುದಾಗಿದೆ. ಸಂಕೀರ್ಣ ವಸ್ತುಗಳನ್ನು ಸಲೀಸಾಗಿ ಹೇಳುತ್ತಾ ವೈಚಾರಿಕ ವಿಶ್ಲೇಷಣೆಯಲ್ಲಿ ಪ್ರಶ್ನೆಗಳ ಮೂಲಕ ಮೌಲ್ಯ ಹುಡುಕುವ ಇವರ ಬರಹದಲ್ಲಿ ಕೌಶಲ್ಯವಿದೆ, ಮಾನವೀಯ ಕಳಕಳಿಯ ತೀವ್ರತೆಯಲ್ಲಿ ಅವರ ಶ್ರೇಷ್ಠ ಕತೆಗಳು ಮೂಡಿ ಬಂದಿವೆ.

ಫಕೀರ್ ಮಹಮದ್ ಕಟ್ಪಾಡಿಯವರು ಸಾರಾ ಅವರಿಗಿಂತ ಸ್ವಲ್ಪ ಭಿನ್ನವಾದ ಮನೋಭಾವದವರು. ಸಾರಾ ಅವರು ತಮ್ಮ ಕಾದಂಬರಿಗಳಲ್ಲಿ ಮುಸ್ಲಿಂ ಜನಾಂಗದ ಸಂಪ್ರದಾಯಸ್ಥರ ಸ್ವಾರ್ಥ, ಸೇಡಿನಿಂದಾಗಿ ಇಡೀ ಸಮುದಾಯ ತೆರಬೇಕಾದ ಬೆಲೆ ಏನೆಂಬುದನ್ನು ತಮ್ಮ ಬರವಣಿಗೆಯಲ್ಲಿ ತೆರಿದಿಡುತ್ತಾರೆ. ಕಟ್ಪಾಡಿಯವರು ಇವುಗಳೆಲ್ಲವನ್ನು ದಾಖಲಿಸುತ್ತಲೇ ಮುಸ್ಲಿಂ ಸಂಮಾಜದಲ್ಲಿರುವ ವರ್ಗ ತಾರತಮ್ಯವನ್ನು ಗುರುತಿಸಿ, ಜಾತಿಗಿಂತ ಈ ದೇಶದಲ್ಲಿ ಆರ್ಥಿಕ ಅಸಮತೋಲನ ಸೃಷ್ಟಿಸಿರುವ ಸಮಸ್ಯೆ ಎಷ್ಟು ತೀವ್ರವಾದದ್ದು ಎಂಬುದನ್ನು ಸೂಕ್ಷ್ಮವಾಗಿ ಅಭಿವ್ಯಕ್ತಿಸಿದ್ದಾರೆ.

ಕಟ್ಪಾಡಿಯವರ ವಿಶೇಷತೆಯೆಂದರೆ ಅವರು ಅಭಿವ್ಯಕ್ತಪಡಿಸುವ ವಿಚಾರದಲ್ಲಿ ಸಾರಾ ಅವರ ವಾಚ್ಯತೆಯನ್ನು ಮೀರಿದ ಒಂದು ರೀತಿಯ ಸಂಕೇತ ಭಾಷಾಶೈಲೆಯಲ್ಲಿ ಇಸ್ಲಾಂ ಸಾಂಸ್ಕೃತಿಕ ಲೋಕದ ಒಳಗನ್ನು ಅನಾವರಣಗೊಳಿಸುತ್ತಾರೆ. ಕಟ್ಪಾಡಿಯವರು ಹೀಗೆ ನಮ್ಮ ಮುಂದೆ ಸಂಸ್ಕೃತಿಯೊಂದನ್ನು ಅನಾವರಣಗೊಳಿಸುವಾಗ ಅದು ಸಮಾಜದೊಂದಿಗೆ ಹೊಂದಿರುವ ಅವಿನಾಭಾವ ಸಂಬಂಧ ಹಾಗೂ ಅದು ಸಮಾಜವನ್ನು ಎಷ್ಟರ ಮಟ್ಟಿಗೆ ನಾಗರಿಕವನ್ನಾಗಿಸಿದೆ ಎನ್ನುವುದರಕಡೆ ಅವರು ಗಮನಿಸುವ ರೀತಿ ಅಚ್ಚರಿ ಮೂಡಿಸುತ್ತದೆ. ಅವರು ಕಟ್ಟಿಕೊಡುವ ತಾತ್ವಿಕ ಚೌಕಟ್ಟು ಜನಪದ ಮೂಲಭೂತ ತತ್ವಗಳಿಗೆ ಬದ್ಧವಾಗಿರುವುದನ್ನು ಗಮನಿಸಬಹುದು. ತಮ್ಮ ತಾತ್ವಿಕ ಸಿಟ್ಟಿನ ಮೂಲಕವೇ ವ್ಯವಸ್ಥೆಯನ್ನು ಅಲುಗಾಡಿಸುತ್ತಾರೆ. ಅವರು ಚಿತ್ರಿಸುವ ಮುಸ್ಲಿಂ ಬದುಕಿನ ವೈರುಧ್ಯಗಳು ಓದುಗನ ಮುಂದೆ ಜೀವಪಡೆದುಕೊಂಡು ಜೀವಪರ ಕಾಳಜಿಯುಳ್ಳವರ ಬರುವಿಗಾಗಿ ಕಾಯುತ್ತಿರುವಂತೆ ಗೋಚರಿಸಿಬಿಡುತ್ತದೆ.

ಸಾರಾ ಅವರ ನಂತರ ಹೆಸರಿಸಬೇಕಾದ ಲೇಖಕಿ ಬಾನು ಮುಷ್ತಾಕ್ ಅವರು ಕಾವ್ಯ ಮತ್ತು ಕತೆ ಈ ಎರಡೂ ಪ್ರಕಾರಗಳಲ್ಲಿ ಬರೆಯುತ್ತಿರುವವರು. ಹಾಸ್ಯ ವೈಚಾರಿಕತೆಗೆ ಇವರ ಬರಹಗಳು ಒತ್ತು ಕೊಡುತ್ತವೆ. ಸಾರಾ ಅವರಿಗಿಂತ ಭಿನ್ನ ನೆಲೆಯಲ್ಲಿ ಬರೆಯುವ ಇವರು ಮಧ್ಯಮವರ್ಗ ಮತ್ತು ಶ್ರೀಮಂತ ವರ್ಗದಕಡೆ ಗಮನಹರಿಸಿದವರು. ಇವರೂ ಸಹ ಪುರುಷರು ತಮಗೆ ದೊರೆತ ಧಾರ್ಮಿಕ ಸವಲತ್ತುಗಳನ್ನು ಹೇಗೆ ಸ್ತ್ರೀಯರ ಶೋಷಣೆಗೆ ಬಳಸಿಕೊಳ್ಳುತ್ತಾರೆ, ಪುರುಷರ ಮತ್ತು ಮಹಿಳೆಯರ ಚಿಂತನಾ ಕ್ರಮಗಳು ಹೇಗೆ ಯಾವ ಯಾವ ಸ್ತರಗಳಲ್ಲಿ ಭಿನ್ನವಾಗಿರುತ್ತವೆ ಎಂಬುದನ್ನು ತಮ್ಮ ಕಥೆಗಳ ಮೂಲಕವೇ ಪ್ರತಿಪಾದಿಸಲು ಪ್ರಯತ್ನಿಸುತ್ತಾರೆ. ಇಲ್ಲಿ ಹಿಂದೂ ಮುಸ್ಲಿಂ ಬದುಕಿನ ನಡುವಿನ ಸಂಬಂಧದ ಚಿತ್ರಣಳಿವೆ. ತಮ್ಮ ಅನುಭವಗಳನ್ನು ಕಲೆಯಾಗಿಸಿ ಅಲ್ಲಿಂದ ಬದುಕನ್ನು ಗಮನಿಸುವ ಭಾನುರವರು ಮುಸ್ಲಿಂ ಜಗತ್ತಿನ ಹಿಂಸೆ, ನೋವುಗಳ ಜೊತೆಯಲ್ಲಿ ಹೃದಯಶ್ರೀಮಂತಿಕೆಯನ್ನು ಮೆರೆಯುವ ಸ್ತ್ರೀಪಾತ್ರಗಳನ್ನು ಸೃಷ್ಟಿಸಿದ್ದಾರೆ. ಸ್ತ್ರೀ ವಾದಿ ಚಿಂತನೆಯ ಸ್ಪಷ್ಟ ಗ್ರಹಿಕೆಗಳಿರುವ ಇವರು ತನ್ನ ಸಮುದಾಯವನ್ನು ಇರುವ ಹಾಗೆಯೇ ಚಿತ್ರಿಸುತ್ತಲೇ, ಇರಬೇಕಾದುದರ ಕಡೆಗೆ ಸದ್ದಿಲ್ಲದೆ ಬೆರಳು ಮಾಡಿ ತೋರಿಸುತ್ತಾರೆ. ಇವರ ನಂತರವೂ ಯುವ ಮುಸ್ಲಿಂ ಬರಹಗಾರರು ತಮ್ಮದೇ ಆದ ವಿಶಿಷ್ಟ ಶೈಲಿಯಲ್ಲಿ ತಮ್ಮ ಸಮುದಾಯವನ್ನು ಮತ್ತು ಸಾಹಿತ್ಯವನ್ನು ಸೃಜಿಸುತ್ತಿರುವುದು ವೈಚಾರಿಕ ಬೆಳವಣಿಗೆಯ ಸಂಕೇತವಾಗಿದೆ.

# ಉಪಸಂಹಾರ

ಮುಸ್ಲಿಂ ಜಗತ್ತಿನ ಆಂತರಿಕ ಹಾಗೂ ಬಾಹ್ಯ ನೆಲೆಯ ವಿಚಾರಗಳು ಮುಕ್ತ ಅಭಿವ್ಯಕ್ತಿಯನ್ನು ಕಂಡುಕೊಂಡದ್ದು ಅನುಭಾವ ಹಾಗೂ ನವ್ಯೋತ್ತರದ ಸಂದರ್ಭದಲ್ಲಿ. ಅನುಭಾವದ ಸಂದರ್ಭದಲ್ಲಿ ಆಧ್ಯಾತ್ಮಿಕ ಕ್ರಾಂತಿ ಸಾರಿದರೆ, ನವ್ಯೋತ್ತರದ ಸಂದರ್ಭದಲ್ಲಿ ಸಾಮಾಜಿಕ ಸಮಾನತೆಯನ್ನು ಸಾರಿದರು. ಈ ತಲೆಮಾರಿನ ಬರಹಗಾರರು ಮೂಲಭೂತ ಶಕ್ತಿಗಳ ಸ್ವರೂಪವನ್ನು ಬಯಲಿಗೆಳೆಯುತ್ತಲೇ ದುರ್ಬಲರ ಪರವಾದ ಬರವಣಿಗೆಗೆ ಕೈಹಾಕುತ್ತಾರೆ. ಈ ಹಿನ್ನೆಲೆಯಲ್ಲಿ ಮಹಿಳೆಯರ ಧ್ವನಿಯಾಗಿ ಬಂಡಾಯ ಸಾಹಿತ್ಯಕ್ಕೆ ಹೊಸ ಅರ್ಥವನ್ನು ಕೊಟ್ಟು, ಕನ್ನಡ ಸಾಹಿತ್ಯಕ್ಕೆ ಮತ್ತೊಂದು ಹೊಸ ಲೋಕವನ್ನೇ ಪರಿಚಯಿಸಿದವರು.

ಕಾಲಧರ್ಮದ ಒತ್ತಡಗಳಿಂದ ಪ್ರೇರೇಪಿತವಾಗಿ, ತಮ್ಮ ಸಮುದಾಯದ ಆಂತರ್ಯದ ತುಡಿತ ಮತ್ತು ಅಗತ್ಯಗಳಿಗೆ ಮನ ತೆರೆದ ಸಾರಾ ಅವರು ಬರೆಯತೊಡಗಿದ್ದು ಮಹಿಳಾ ಸಾಹಿತ್ಯಕ್ಕೆ ಮಾತ್ರವಲ್ಲ, ಕನ್ನಡ ಸಾಹಿತ್ಯಕ್ಕೂ ಒಂದು ವಿಶಿಷ್ಟ ಕೊಡುಗೆಯಾಗಿದೆ. ನಿಜವಾದ ಬಂಡಾಯ ಸಾಹಿತ್ಯವೆಂದರೆ ಮುಸ್ಲಿಂ ಮಹಿಳೆಯರು ಬರೆದದ್ದೆಂದರೆ ತಪ್ಪಾಗಲಾರದು. ಏಕೆಂದರೆ ಇತರ ಬಂಡಾಯ ಸಾಹಿತಿಗಳಲ್ಲಿ ಬಂಡಾಯವಿರುವುದು ಬರವಣಿಗೆಯಲ್ಲಿ ಮಾತ್ರ. ಇಲ್ಲಿ ಅವರ ಏನೇ ಬರೆದರೂ ನಿರ್ಭಯವಾಗಿ ಬರೆಯಬಹುದಾಗಿತ್ತು. ವೈಯಕ್ತಿಕವಾದ ಯಾವುದೇ ಒತ್ತಡ, ಅಪಾಯಗಳಿಗೆ ಅವರು ತುತ್ತಾಗುವುದಿಲ್ಲ ಆದರೆ ಮುಸ್ಲಿಂ ಸಾಹಿತಿಗಳು ಅದರಲ್ಲೂ ಲೇಖಕಿಯರು ಇಂಥ ಸಂದಿಗ್ಧತೆಯಲ್ಲಿ ಸಿಲುಕಬೇಕಾದ ಅಪಾಯವಿದೆ. ಏಕೆಂದರೆ ಅವರು ಆಯ್ಕೆಮಾಡಿಕೊಳ್ಳುವ ವಿಷಯವಸ್ತು ಧರ್ಮದ ಸುತ್ತಾ ಹೆಣೆದುಕೊಂಡದ್ದಾಗಿರುತ್ತದೆ. ಸಹಮಾನವರನ್ನ ಮನುಷ್ಯನನ್ನಾಗಿ ಮಾಡದ ಧರ್ಮವೊಂದು ಸೃಷ್ಟಿಸುವ ಅವಾಂತರಗಳ ಸುತ್ತ ಬರೆಯಬೇಕಾದ ಅನಿವಾರ್ಯತೆ ಎದುರಾಗುವುದರಿಂದ ಆ ಕಾರಣಕ್ಕಾಗಿಮೂಲಭೂತವಾದಿಗಳನ್ನು ಎದುರುಹಾಕಿಕೊಳ್ಳಬೇಕಾದ ಸಂದರ್ಭಗಳು ಏರ್ಪಡುವುದರಿಂದ ಇವೆಲ್ಲಾ ಬರವಣಿಗೆಗೆ ತೊಡಕಾಗುತ್ತವೆ.

ವಸಾಹತು ಶಾಹಿಯ ತಂತ್ರ ಹಾಗೂ ಮತೀಯ ರಾಜಕಾರಣಗಳ ದುರಾಸೆ, ಒತ್ತಡಗಳ ಫಲವಾಗಿ ಎರಡೂ ಸಮುದಾಯಗಳಲ್ಲಿ ಒಡಕುಂಟಾಗಿ, ಒಳಗೊಳಗೆ ಪರಸ್ಪರ ಅಪನಂಬಿಕೆ, ಅನುಮಾನ, ಆತಂಕಗಳನ್ನು ಹುಟ್ಟಿಸಿಕೊಂಡು, ಮನಸು ಮನಸುಗಳ ನಡುವೆ ಅಡ್ಡಗೋಡೆಗಳನ್ನು ನಿರ್ಮಿಸಿಕೊಂಡು ತಮ್ಮ ಸಮುದಾಯದ ಸ್ವರಕ್ಷಣೆಯಲ್ಲಿ ನಿರತರಾಗಿ ಆತ್ಮಶೋಧವನ್ನು ಮಾಡಿಕೊಳ್ಳಲಾಗದ ಮೂಲಭೂತವಾದಿಗಳ ಸೆರೆಯಲ್ಲಿ, ವ್ಯಕ್ತಿ ನಿಯಮಗಳ ಹಿಡಿತದಲ್ಲಿ ಸಿಕ್ಕಿ ನಲಗುತ್ತಿದ್ದ ಮುಸ್ಲಿಂ ಸಮಾಜವನ್ನು, ಅದರಲ್ಲೂ ಮುಸ್ಲಿಂ ಮಹಿಳೆಯರನ್ನು ಹೊರತರಲು ಮೊಟ್ಟ ಮೊದಲು ಬಂಡಾಯದ ಹೆಜ್ಜೆಯನ್ನಿಟ್ಟವರು ಸಾರಾ ಅವರು ಈ ಬಂಡಾಯದ ದನಿಗೆ ಅವರು ಆರಿಸಿಕೊಂಡ ಮಾಧ್ಯಮ ಒಂದು ಚಳವಳಿಯಾದರೆ ಇನ್ನೊಂದು ಸಾಹಿತ್ಯವಾಯಿತು. ಮೊಂದಲ ಮುಸ್ಲಿಂ ಲೇಖಕಿಯಾಗಿ, ಒಟ್ಟು ಸಾಹಿತ್ಯದ ನೆಲೆಯಲ್ಲಿ ಬಂಡಾಯದ ಲೇಖಕಿಯಾಗಿ ತಮ್ಮ ಕತೆ ಕಾದಂಬರಿಗಳ ಮೂಲಕ ಬಂಡಾಯದ ಹೆಜ್ಜೆಗಳನ್ನಿಟ್ಟರು. ಇದಕ್ಕಾಗಿ ಅವರು ಸಾಹಿತ್ಯ ರಚನೆಗೆ ತೊಡಗುವಾಗ ಆರಿಸಿಕೊಂಡದ್ದು ಬಂಡಾಯ ಸಾಹಿತ್ಯದ ಮಾದರಿಗಳನ್ನ. ಸಾರಾ ಅವರನ್ನು

ಈ ದೃಷ್ಟಿಯಿಂದ ಹೆದ್ದಾರಿ ನಿರ್ಮಾತೃವೆಂದೇ ಹೇಳಬೇಕು.

ನಿಷಿದ್ಧವಾದ ಪರಿಸರದಲ್ಲೇ ಇದ್ದುಕೊಂಡು ಆ ಪರಿಸರದ ಸಮುದಾಯದ ಒಳಿತು ಕೆಡಕುಗಳನ್ನು, ನೋವು-ನಲಿವುಗಳನ್ನು ಕಥಾ ಸಾಹಿತ್ಯದಲ್ಲಿ ಹಿಡಿದಿಡಲು ಪ್ರಯತ್ನಿಸಿದ್ದಾರೆ. ಈ ಹಿಂದೆ ಬಂದ ಮುಸ್ಲಿಂ ಬರಹಗಾರರು ಬೆಳೆಸಿಕೊಂಡಿದ್ದ ಸಂಕೋಚದಿಂದ ಆಗದ ಕೆಲಸವನ್ನು ಆಪ್ತತೆಯಿಂದಲೇ ಮಾಡಹೊರಟಿದ್ದಲ್ಲದೆ ಆ ಸಮುದಾಯವನ್ನು ಬಿಡುಗಡೆಯೆಡೆಗೆ ಆಕರ್ಷಿಸುತ್ತಾ ಹೊಸ ಚಿಂತನೆಯೆಡೆಗೆ ನಾಂದಿ ಹಾಡಿದರು. ಮೈಚಳಿ ಬಿಟ್ಟು ಬರೆಯುವ ಮೂಲಕ ಮುಂದಿನ ತರುಣ ಬರಹಗಾರರಿಗೆ ದಾರಿಯನ್ನು ಸುಗಮಗೊಳಿಸಿದರು.

ಮುಸ್ಲಿಂ ಸಮುದಾಯದ ಮಹಿಳೆಯರ ಸಮಸ್ಯೆಗಳ ಕಡೆಗೆ ಲೇಖಕಿಗೆ ಹೆಚ್ಚು ಗಮನವಿರುವುದರಿಂದ, ಅವರ ಕಥೆ-ಕಾದಂಬರಿಗಳಲ್ಲಿ ಶೋಷಿತ ಹೆಣ್ಣಿನ ಬದುಕಿನ ಬಿಚ್ಚು ನೋಟಗಳಿವೆ. ಮುಸ್ಲಿಂ ಸಮಾಜ ಹಲವಾರು ಸಮಸ್ಯೆಗಳಿಂದ ತುಂಬಿರುವುದನ್ನು ಈ ಸಮಸ್ಯೆಗಳ ಮೂಲಬೇರುಗಳ ಎಲ್ಲಿಗೆ ಅಡಗಿವೆ ಎಂಬುದನ್ನು, ಎಳೆಎಳೆಯಾಗಿ ತಮ್ಮ ಕಥೆ-ಕಾದಂಬರಿಗಳಲ್ಲಿ ಬಿಡಿಸಿಟ್ಟಿದ್ದಾರೆ. ಮುಸ್ಲಿಂ ಮೂಲಭೂತವಾದಿಗಳು ಇಸ್ಲಾಂ ಧರ್ಮ ಗ್ರಂಥ ಪವಿತ್ರ ಕುರಾನನ್ನು ತಮ್ಮ ಸ್ವಾರ್ಥಕ್ಕೆ ಬಳಸಿಕೊಂಡಿರುವ ರೀತಿಯನ್ನು ವ್ಯಕ್ತಿ ನಿಯಮಗಳು ಯಾವ ರೀತಿಯಲ್ಲಿ ಹಿಡಿತ ಸಾಧಿಸಿವೆ ಎಂಬುದನ್ನು ವಿಶ್ಲೇಷಿಸಿದೆ.

ಈ ಹಿನ್ನೆಲೆಯಲ್ಲಿ ಸಾಮಾಜಿಕ ಮತ್ತು ಧಾರ್ಮಿಕವಾಗಿ ಕಾಡಿದ ಸಮಸ್ಯೆಗಳೆಂದರೆ ತಲಾಖ್ ಮತ್ತು ಪರ್ದಾ ನಿಯಮ ಮುಂತಾದವುಗಳಾಗಿವೆ. ಸಾಮಾಜಿಕ ಚೌಕಟ್ಟಿನಲ್ಲಿ ಬಡತನ, ಹಸಿವು, ಅನಕ್ಷರತೆ, ನಿರುದ್ಯೋಗ ವರ್ಗಸಮಾಜದ ಸಮಸ್ಯೆಗಳಿಂದ ಕೂಡಿದ ಸಾಂಸ್ಕೃತಿಕ ಬದುಕಿನ ಚಿತ್ರಣಗಳನ್ನು ಮನಸ್ಸಿಗೆ ತಟ್ಟುವಂತೆ ಚಿತ್ರಿಸಿದ್ದಾರೆ. ಮನುಷ್ಯನ ಸ್ವಾರ್ಥ, ಸಣ್ಣತನ ಅವುಗಳಿಂದ ಉಂಟಾಗುವ ಕ್ರೌರ್ಯ, ದಬ್ಬಾಳಿಕೆ, ಬದುಕಿನ ಬೆಳವಣಿಗೆಗೆ ಮಾರಕವಾಗುವ ಜಾತಿ, ಮತ, ಸಂಪ್ರದಾಯ, ಮೌಢ್ಯ ಮುಂತಾದವುಗಳ ಬಗೆಗೂ ಗಂಭೀರವಾದ ಚಿಂತನೆಗಳಿರುವುದನ್ನು ಗುರುತಿಸಲಾಗಿದೆ. ಇವುಗಳನ್ನು ಸಾರಾ ಅವರು ಪ್ರಮುಖವಾಗಿ ಹೆಣ್ಣಿನ ನೆಲೆಯಿಂದಲೇ ತೆರೆದಿಡುತ್ತಾರೆ. ಅವರ ಕಥೆ-ಕಾದಂಬರಿಗಳಲ್ಲಿ ಪೂರ್ಣ ನೆಲೆಯಲ್ಲಿ ಮಹಿಳೆಯರೇ ಕಾಣಿಸಿಕೊಳ್ಳುವುದರಿಂದ ಬದುಕಿನ ಇತರ ಘಟಕಗಳನ್ನು ಮಹಿಳೆಯ ಹಿನ್ನೆಲೆಯಲ್ಲಿಯೇ ಗ್ರಹಿಸಲಾಗಿದೆ. ಹೀಗಾಗಿ ಸಾರಾ ಅವರ ಸಾಹಿತ್ಯ ಸ್ತ್ರೀವಾದಿ ಧೋರಣೆಯನ್ನು ಪ್ರಬಲವಾಗಿಯೆ ಬಿಂಬಿಸಲು ಸಾಧ್ಯವಾಗಿದೆ. ಹೀಗೆ ಬಿಂಬಿಸುವಾಗ ಯಾವುದೇ ಆದರ್ಶ, ತತ್ವ, ಸಿದ್ಧಾಂತಗಳನ್ನು ಒತ್ತಾಯದಿಂದ ತುರುಕದೆ ಬದುಕನ್ನು ನೈಜವಾಗಿ ನೋಡುವುದರಿಂದ ಇವರ ಸಾಹಿತ್ಯದಲ್ಲಿ ಬದುಕಿನಲ್ಲಿ ತಾಜಾತನವನ್ನು ಕಾಣಬಹುದು.

ಸಾರಾ ಅವರು ಚಿತ್ರಿಸುವ ಹೆಣ್ಣುಗಳು ತಮ್ಮ ಅಸ್ತಿತ್ವವನ್ನು ಜೀವನ್ಮುಖಿಯಾಗಿ ಇರಿಸಿಕೊಳ್ಳುವುದರತ್ತ ಆಸ್ತೆ ವಹಿಸುವುದನ್ನುಕಾಣಬಹುದು. ಇವರ ಸಾಹಿತ್ಯದಲ್ಲಿ ಸಾವು ಕೂಡ ಪ್ರತಿಭಟನೆಯ ಒಂದು ಭಾಗವಾಗಿ ಕಂಡುಬರುತ್ತದೆಯೇ ಹೊರತು ನಿರಾಸೆಯಿಂದಾಗಿ ಅಲ್ಲ. ಇಲ್ಲೆಲ್ಲಾ ಲೇಖಕಿಯ ಕಳಕಳಿ ಸ್ತ್ರೀಪರವಾಗಿಯೇ ಕಾಣುತ್ತದೆಯಾದರೂ ಅದು ಪುರುಷ ವಿರೋಧಿಯಾಗಿ ಅಲ್ಲ. ಧರ್ಮದ ಹೆಸರಿನಲ್ಲಿ ನಡೆಯುತ್ತಿರುವ ವೈಯಕ್ತಿಕ ನಿಯಮಗಳ, ಪ್ರತಿಗಾಮಿ ವ್ಯಕ್ತಿಗಳ, ಸ್ವಾರ್ಥ ಪುರುಷರ ಮೇಲಾಟವನ್ನು ಇತಿ ಮಿತಿಗಳಲ್ಲಿ ನಮ್ಮ ಮುಂದಿಡುತ್ತಾರೆ. ಅವರು ಕಟ್ಟಿಕೊಡುವ, ಬದುಕು ಕಳೆದುಕೊಂಡವರ ಜೀವನ್ಮುಖಿ

ಆಲೋಚನೆಯ ಒಳ ತಲ್ಲಣಗಳನ್ನು, ಕುಟುಂಬದ ನಿಯಮಕ್ಕೆ ಕೊನೆಯತನಕ ಬದ್ಧರಾಗಿಯೇ ಉಳಿಯುವ ಸದಾಶಯವನ್ನು ಇಟ್ಟುಕೊಂಡ ಪಾತ್ರ ಚಿತ್ರಣಗಳನ್ನು, ಗಂಡು ಹೆಣ್ಣಿನ ಸುತ್ತ ಕಟ್ಟಿಕೊಳ್ಳಲು ಬಯಸುವ ಕೌಟುಂಬಕ ಸಂಬಂಧಗಳ ಒಳಸುಳಿಗಳ ನಾಡಿ ಮಿಡಿತಗಳನ್ನು, ನೋವು-ಆಕ್ರಂದನಗಳನ್ನು, ನಿರಾಶೆ-ಹತಾಶೆಗಳನ್ನು ಮನೋಜ್ಞವಾಗಿ ಅಕ್ಷರಗಳಲ್ಲಿ ಸೆರೆ ಹಿಡಿಯುವಲ್ಲಿ ಯಶಸ್ವಿಯಾಗಿದ್ದಾರೆ.

ಸಾರಾ ಅವರ ಸಾಹಿತ್ಯದಲ್ಲಿ ವಸ್ತುನಿಷ್ಠತೆ ಮತ್ತು ವಿಚಾರಪರತೆ ಇದೆ. ಮುಸ್ಲಿಂ ಸಮುದಾಯದ ಬಗೆಗಿನ ಅನುಭವಗಳು, ಮತಧರ್ಮಗಳಾಚೆಗೆ ಸಾಧ್ಯವಾಗುವ ಮಾನವೀಯ ಸಂಬಂಧಗಳೆಡೆಗೆ ನಮ್ಮನ್ನು ಆಲೋಚಿಸುವಂತೆ ಮಾಡುತ್ತವೆ. ಅವರ ಸಣ್ಣ ಕತಾ ಲೋಕಕ್ಕೆ ನಾವು ಪ್ರವೇಶಿಸುತ್ತಿದ್ದಂತೆ ತಮ್ಮ ಸಮುದಾಯದ ಸಾಮಾಜಿಕ, ಸಾಂಸ್ಕೃತಿಕ ಸ್ಥಿತಿಯನ್ನು ತೆರೆದಿಡುತ್ತಾ ಸ್ತ್ರೀ ಸಮುದಾಯ ಆಲೋಚಿಸಬೇಕಾದ ಹೊಸ ದಿಕ್ಕನತ್ತ ಬೆಳಕುಚಲ್ಲಿರುವುದು ನಮ್ಮ ಗಮನಕ್ಕೆಬಾರದಿರದು.ಆ ಮೂಲಕ ಸಾರಾ ಅವರಿಗೆಸ್ತ್ರೀ ಆಲೋಚನೆಗಳಿಗೆ ಒಂದು ಗಟ್ಟಿ ನೆಲೆಗಟ್ಟನ್ನು ಒದಗಿಸಲು ಸಾಧ್ಯವಾಗಿದೆ. ಮುಸ್ಲಿಂ ಸಮಾಜ ಸುಧಾರಣೆ ಆಗಬೇಕು, ಗಂಡು-ಹೆಣ್ಣು ಭೇದವಿಲ್ಲದೆ ಶಿಕ್ಷಣ ದೊರೆಯಬೇಕು, ಆ ಶಿಕ್ಷಣ ಸಾರ್ವತ್ರಿಕ ರೂಪದ್ದಾಗಿರಬೇಕು. ಸ್ತ್ರೀಯರೂ ವೈಚಾರಿಕವಾಗಿ ಆಲೋಚಿಸಲು ಅವಕಾಶವಿರಬೇಕು, ಅವರ ಶಕ್ತಿ ಮತ್ತು ಪ್ರತಿಭೆಯನ್ನು ಹತ್ತಿಕ್ಕುವ ಪ್ರಯತ್ನವಾಗಬಾರದು ಎಂಬ ಕಳಕಳಿ ಅವರ ಬರವಣಿಗೆಯ ಉದ್ದಕ್ಕೂ ಆಶಯವಾಗಿ ಮೂಡಿಬಂದಿರುವುದನ್ನು ಗುರುತಿಸಲಾಗಿದೆ.

ತಮ್ಮ ಬರವಣಿಗೆಯ ಮೂಲಕ ಸದಾ ಸಾಮಾಜಿಕ ಪ್ರಜ್ಞೆಯನ್ನು ಜಾಗೃತಗೊಳಿಸುತ್ತಾ ಬಂಡಾಯದ ಆಶಯಗಳನ್ನು ಹುಟ್ಟುಹಾಕುತ್ತಾ ಹೊಸದೊಂದು ವ್ಯವಸ್ಥೆಯನ್ನು ಬಯಸುತ್ತಾರೆ. ಸ್ಥಳೀಯ ಬದುಕಿನ ವಿವರಗಳನ್ನು ಕಟ್ಟಿಕೊಡುವ ಇವರ ಸಾಹಿತ್ಯದಲ್ಲಿ ದಕ್ಷಿಣ ಕರಾವಳಿಯ ಸಮುದ್ರ, ಮಳೆ, ಬಿರುಗಾಳಿ, ಪ್ರವಾಹಗಳ ಏರಿಳಿತಗಳ ಜೊತೆಗೆ ಅಲ್ಲಿನ ಜನರ ಬದುಕಿನ ಏರಿಳಿತಗಳೂ ಬೆಸೆದುಕೊಂಡಿವೆ. ಹೆಣ್ಣಿನ ಭಾವಕೋಶದೊಳಗೆ ಪ್ರವೇಶಿಸಿದಾಗ ಸಿಗುವ ತಾಜಾ ಬದುಕಿನ ಚಿತ್ರಣಗಳು ಇಲ್ಲಿ ಕಾಣಸಿಗುತ್ತವೆ. ತಾಯ್ತನದ ಬಿಸಿಯಪ್ಪುಗೆಯ ಪರಿಧಿಯೊಳಗೆ ತನ್ನ ಒಟ್ಟಾರೆ ಸಮುದಾಯವನ್ನು ತರಬಯಸುವ ಅವರ ಮಹದಾಸೆಯನ್ನು ಅವರ ಆರಂಭದ ಬರಹದಿಂದ ಹಿಡಿದು ಇತ್ತೀಚಿನ ಬರಹದವರೆಗೂ ಕಾಣಬಹುದು.

ಒಟ್ಟಾರೆ ಸಾರಾ ಅವರ ಕೃತಿಗಳ ಮೂಲಕ ಈ ಧರ್ಮದ ಸ್ತ್ರೀ ವಿರೋಧಿ ನೀತಿಗಳು, ಮಾನವ ವಿರೋಧಿ ನೀತಿಗಳು, ಸಂಪ್ರದಾಯ ಮತ್ತು ಆಚರಣೆಯ ಅರ್ಥಹೀನತೆ, ಅವುಗಳ ವೈರುಧ್ಯತೆ, ಅಮಾನವೀಯತೆ, ಬಡವರು, ದುಡಿಯುವ ವರ್ಗದ ಶೋಷಣೆಯ ಒಳ ನೋಟಗಳನ್ನು ಈ ಸಂಪ್ರಬಂಧದಲ್ಲಿ ಚರ್ಚಿಸಲಾಗಿದೆ. ಸಾರಾ ಅವರ ತಂತ್ರ, ಶೈಲಿ, ಕಥನಗಾರಿಕೆ ಎಲ್ಲವೂ ನಿಂತಂತಿರುವ ಸಾಮಾಜಿಕ ಪರಿಸರವೊಂದನ್ನು ಚಲನಶೀಲಗೊಳಿಸುವತ್ತ ತುಡಿಯುವುದನ್ನು ಕಾಣುತ್ತೇವೆ. ಸಾರಾ ಅವರಿಗಿರುವ ಸಾಮಾಜಿಕ ಕಾಳಜಿ, ಪ್ರಾಮಾಣಿಕತೆ ಮತ್ತು ಜೀವನ ಶ್ರದ್ಧೆ ಇವು ಅವರ ಬರಹಕ್ಕೆ ಬೆಲೆಯನ್ನು ತಂದುಕೊಟ್ಟಿವೆ.

# ಕೊನೆ ಟಿಪ್ಪಣಿ

1. ಸಂ.ಡಾ. ಎಚ್.ಎಸ್. ಶ್ರೀಮತಿ: ಕನ್ನಡ ಸಾಹಿತ್ಯ ಚರಿತ್ರೆ: ಪು.39 ಪ್ರಸಾರಾಂಗ, ಕ.ವಿ.ವಿ. ಹಂಪಿ-2006
2. ಡಾ. ಬಸವರಾಜದ ಸಬರದ ಹೊಸದಿಕ್ಕು: ಪು.: 39: ಪಲ್ಲವಿ ಪ್ರಕಾಶನ - 1990
3. ಇಬ್ರಾಹಿಂ ಸಈದ್: ತಪ್ಪುಕಲ್ಪನೆಗಳು: ಪು. 73: ಶಾಂತಿ ಪ್ರಕಾಶನ, ಮಂಗಳೂರು - 1993
4. ಅನು: 1950 - 1. ಆರ್. ಎ. ಕೇಸರಿ, ನಿ. ಮೊಹಮ್ಮದ್ ವಲೀಯುಲ್ಲಾ, 3. ಸೈಯದ್ ಗೌಸ್ ಮೊಹಿಯುದ್ದೀನ್: ಪವಿತ್ರ ಕುರಾನ್ ಮತ್ತು ಮಹಮದ್ ಪೈಗಂಬರರ ದಿವ್ಯ ಜೀವನ ಚರಿತ್ರೆ: ಪು. 51 ರಿಂದ 55: ದಿ ಅಕಾಡೆಮಿ ಆಫ್ ಹೊಲಿ ಪಬ್ಲಿಕೇಷನ್, ಆಲ್ ಕಲಾಂ ಪವರ್ ಪ್ರೆಸ್, ಬೆಂಗಳೂರು
5. ಎನ್. ಗಾಯತ್ರಿ: ಮಹಿಳಾ ಬಿಡುಗಡೆಯ ಹಾದಿಯಲ್ಲಿ : ಪು: 56: ನವಕರ್ನಾಟಕ ಪ್ರಕಾಶನ, ಬೆಂಗಳೂರು: 1991
6. ಡಾ. ರಹಮತ್ ತರಿಕೆರೆ: ಕರ್ನಾಟಕದ ಸೂಫಿಗಳು: ಪು. 117: ಕನ್ನಡ ವಿಶ್ವವಿದ್ಯಾನಿಲಯ, ಕಮಲಾಪುರ: 1998
7. ಡಾ. ರಹಮತ್ ತರಿಕೆರೆ: ಮರದೊಳಗಣ ಕಿಚ್ಚು: ಪು. 16: ಪ್ರಸಾರಾಂಗ, ಕ.ವಿ.ವಿ. ಹಂಪಿ. : 1996
8. ಸಾರಾ ಅಬೂಬಕ್ಕರ್: ಸಹನಾ: ಪು. 4: ಚಂದ್ರಗಿರಿ ಪ್ರಕಾಶನ, ಮಂಗಳೂರು: 2002.
9. ಸಾರಾ ಅಬೂಬಕ್ಕರ್: ಚಂದ್ರಗಿರಿ ತೀರದಲ್ಲಿ: ಪು. 88: ಚಂದ್ರಗಿರಿ ಪ್ರಕಾಶನ, ಮಂಗಳೂರು: 2006
10. ಸಾರಾ ಅಬೂಬಕ್ಕರ್: ಚಂದ್ರಗಿರಿ ತೀರದಲ್ಲಿ: ಪು.102: ಚಂದ್ರಗಿರಿ ಪ್ರಕಾಶನ, ಮಂಗಳೂರು 2002
11. ಸಾರಾ ಅಬೂಬಕ್ಕರ್: ಅನಾವರಣ: ಪು. 25: ಚಂದ್ರಗಿರಿ ಪ್ರಕಾಶನ, ಮಂಗಳೂರು - 2002
12. ಡಾ. ಬಸವರಾಜ ಸಬರದ: ಹೊಸದಿಕ್ಕು: ಪು. 45: ಪಲ್ಲವಿ ಪ್ರಕಾಶನ ಬೀದರ್: 1990
13. ಸಾರಾ ಅಬೂಬಕ್ಕರ್: ಸಹನಾ: ಪು. 167: ಚಂದ್ರಗಿರಿ ಪ್ರಕಾಶನ, ಮಂಗಳೂರು: 2002
14 ಸಾರಾ ಅಬೂಬಕ್ಕರ್: ಸಹನಾ: ಪು. 175: ಚಂದ್ರಗಿರಿ ಪ್ರಕಾಶನ, ಮಂಗಳೂರು: 2002
15. ಸಾರಾ ಅಬೂಬಕ್ಕರ್: ಸಹನಾ : ಪು. 169: ಚಂದ್ರಗಿರಿ ಪ್ರಕಾಶನ, ಮಂಗಳೂರು: 2002
16. ಸಾರಾ ಅಬೂಬಕ್ಕರ್: ಸಹನಾ : ಪು. 177: ಚಂದ್ರಗಿರಿ ಪ್ರಕಾಶನ, ಮಂಗಳೂರು: 2002
17. ಸಾರಾ ಬೂಬಕ್ಕರ್: ಪಯಣ ಮತ್ತು ಇತರ ಕಥೆಗಳು: ಪು. 27: ಪುಸ್ತಕ ಪ್ರಕಾಶನ, ಮೈಸೂರು 1992
18. ಸಾರಾ ಅಬೂಬಕ್ಕರ್: ಅರ್ಧರಾತ್ರಿಯಲ್ಲಿ ಹುಟ್ಟಿದ ಕೂಸು: ಪು. 87: ಚಂದ್ರ ಗಿರಿ ಪ್ರಕಾಶನ, ಮಂಗಳೂರು 1996
19. ಸಾರಾ ಅಬೂಬಕ್ಕರ್: ಪಯಣ ಮತ್ತು ಇತರ ಕತೆಗಳು: ಪು. 76: ಪುಸ್ತಕ ಪ್ರಕಾಶನ, ಮೈಸೂರು, 1992
20. ಸಾರಾ ಅಬೂಬಕ್ಕರ್: ಪಯಣ ಮತ್ತು ಇತರ ಕತೆಗಳು: ಪು. 80: ಪುಸ್ತಕ ಪ್ರಕಾಶನ, ಮೈಸೂರು, ೧೯೯೨
21. ಬಿ.ಎಂ. ಶ್ರೀಕಂಠಯ್ಯ (ಅನು.): ಕೆ.ವಿ. ಪುಟ್ಟಪ್ಪ (ಪ್ರ.ಸಂ.): ಇಸ್ಲಾಂಸಂಸ್ಕೃತಿ: ಪು. 356 ಮತ್ತು 357.
22. ಸಾರಾ ಅಬೂಬಕ್ಕರ್: ವಜ್ರಗಳು: ಪು. 130: ನವಕರ್ನಾಟಕ ಪ್ರಕಾಶನ, ಬೆಂಗಳೂರು, 1988.
23. ಸಾರಾ ಅಬೂಬಕ್ಕರ್: ವಜ್ರಗಳು: ಪು. 121: ನವಕರ್ನಾಟಕ ಪ್ರಕಾಶನ, ಬೆಂಗಳೂರು, 1988
24. ಸಾರಾ ಅಬೂಬಕ್ಕರ್: ವಜ್ರಗಳು: ಪು. 141: ನವಕರ್ನಾಟಕ ಪ್ರಕಾಶನ, ಬೆಂಗಳೂರು 1888
25. ಸಾರಾ ಅಬೂಬಕ್ಕರ್ : ಖೆಡ್ಡಾ ಕಥಾ ಸಂಕಲನ: ಪು. 106: ಚಂದ್ರಗಿರಿ ಪ್ರಕಾಶನ, ಮಂಗಳೂರು, 1999
26. ಸಾರಾ ಅಬೂಬಕ್ಕರ್: ಸುಳಿ: ಪು. 89: ಚಂದ್ರಗಿರಿ ಪ್ರಕಾಶನ, 2006

27. ಸಾರಾ ಅಬೂಬಕ್ಕರ್: ಪಯಣ ಮತ್ತು ಇತರ ಕತೆಗಳು: ಪು. 52: ಪುಸ್ತಕ ಪ್ರಕಾಶನ, ಮೈಸೂರು 1992
28. ಸಾರಾ ಅಬೂಬಕ್ಕರ್: ಚಪ್ಪಲಿಗಳು: ಪು. 50: ಚಂದ್ರಗಿರಿ ಪ್ರಕಾಶನ, ಮಂಗಳೂರು, 1989
29. ಸಾರಾ ಅಬೂಬಕ್ಕರ್ : ಪಯಣ ಮತ್ತು ಇತರ ಕತೆಗಳು: ಪು. 34: ಪುಸ್ತಕ ಪ್ರಕಾಶನ, ಮೈಸೂರು-1992
30. ಸಾರಾ ಅಬೂಬಕ್ಕರ್ : ಪಯಣ ಮತ್ತು ಇತರ ಕತೆಗಳು: ಪು. 42: ಪುಸ್ತಕ ಪ್ರಕಾಶನ, ಮೈಸೂರು-1992
31. ಸಾರಾ ಅಬೂಬಕ್ಕರ್: ಚಪ್ಪಲಿಗಳು: ಪು. 88: ನವಕರ್ನಾಟಕ ಪ್ರಕಾಶನ, ಬೆಂಗಳೂರು 1989
32. ಸಾರಾ ಅಬೂಬಕ್ಕರ್: ಚಪ್ಪಲಿಗಳು: ಪು. 91: ನವಕರ್ನಾಟಕ ಪ್ರಕಾಶನ, ಬೆಂಗಳೂರು 1989
33. ನೇಮಿಚಂದ್ರ: ಮಹಿಳಾ ಅಧ್ಯಯನ: ಪು. 92: ಅಂಕಿತ ಪ್ರಕಾಶನ, ಬೆಂಗಳೂರು, 2001
34. ಸಾರಾ ಅಬೂಬಕ್ಕರ್: ಪಯಣ ಮತ್ತು ಇತರ ಕತೆಗಳು: ಪು. 89. ಪುಸ್ತಕ ಪ್ರಕಾಶನ ಮೈಸೂರು
35. ಸಾರಾ ಅಬೂಬಕ್ಕರ್ : ಚಪ್ಪಲಿಗಳು: ಪು. 66 ನವಕರ್ನಾಟಕ ಪ್ರಕಾಶನ, ಬೆಂಗಳೂರು 1989
36. ಸಾರಾ ಅಬೂಬಕ್ಕರ್: ಅರ್ಧರಾತ್ರಿಯಲ್ಲಿ ಹುಟ್ಟಿದ ಕೂಸು: ಪು. 60: ಚಂದ್ರಗಿರಿ ಪ್ರಕಾಶನ, ಮಂಗಳೂರು 1996
37. ಸಾರಾ ಅಬೂಬಕ್ಕರ್: ಅರ್ಧರಾತ್ರಿಯಲ್ಲಿ ಹುಟ್ಟಿದ ಕೂಸು: ಪು. 57: ಚಂದ್ರಗಿರಿ ಪ್ರಕಾಶನ, ಮಂಗಳೂರು 1996
38. ಸಾರಾ ಅಬೂಬಕ್ಕರ್ : ಚಪ್ಪಲಿಗಳು: ಪು. 75: ನವಕರ್ನಾಟಕ ಪ್ರಕಾಶನ, ಬೆಂಗಳೂರು 1989
39. ಸಾರಾ ಅಬೂಬಕ್ಕರ್: ಚಪ್ಪಲಿಗಳು: ಪು. 126: ನವಕರ್ನಾಟಕ ಪ್ರಕಾಶನ, ಬೆಂಗಳೂರು 1989
40. ಸಾರಾ ಅಬೂಬಕ್ಕರ್: ಸಹನ: ಪು. 135: ಚಂದ್ರಗಿರಿ ಪ್ರಕಾಶನ: ಮಂಗಳೂರು 2002
41. ಸಾರಾ ಅಬೂಬಕ್ಕರ್: ಕದನ ವಿರಾಮ: ಪು. 28. ಸ್ನೇಹ ಪ್ರಕಾಶನ, ಬೆಂಗಳೂರು 1991
42. ಸಾರಾ ಅಬೂಬಕ್ಕರ್: ಚಂದ್ರಗಿರಿ ತೀರದಲ್ಲಿ: ಪುಟ 86: ಚಂದ್ರಗಿರಿ ಪ್ರಕಾಶನ, ಮಂಗಳೂರು 2002
43. ಸಾರಾ ಅಬೂಬಕ್ಕರ್: ಚಂದ್ರಗಿರಿ ತೀರದಲ್ಲಿ: ಪು.89: ಚಂದ್ರಗಿರಿ ಪ್ರಕಾಶನ, ಮಂಗಳೂರು 2003
44. ಸಾರಾ ಅಬೂಬಕ್ಕರ್: ಚಂದ್ರಗಿರಿ ತೀರದಲ್ಲಿ: ಪು. 90: ಚಂದ್ರಗಿರಿ ಪ್ರಕಾಶನ, ಮಂಗಳೂರು 2003
45. ಸಾರಾ ಅಬೂಬಕ್ಕರ್: ಚಂದ್ರಗಿರಿ ತೀರದಲ್ಲಿ: ಪು. 98: ಚಂದ್ರಗಿರಿ ಪ್ರಕಾಶನ, ಮಂಗಳೂರು 2003
46. ಸಾರಾ ಅಬೂಬಕ್ಕರ್: ಚಂದ್ರಗಿರಿ ತೀರದಲ್ಲಿ: ಪು.110: ಚಂದ್ರಗಿರಿ ಪ್ರಕಾಶನ, ಮಂಗಳೂರು 2003
47. ಸಾರಾ ಅಬೂಬಕ್ಕರ್: ಸಹನಾ: ಪು 135: ಚಂದ್ರಗಿರಿ ಪ್ರಕಾಶನ, ಮಂಗಳೂರು 2002
48. ಸಾರಾ ಅಬೂಬಕ್ಕರ್: ಸುಳಿ: ಪು. 41: ಚಂದ್ರಗಿರಿ ಪ್ರಕಾಶನ, ಮಂಗಳೂರು 2004
49. ಸಾರಾ ಅಬೂಬಕ್ಕರ್: ಸುಳಿ: ಪು. 168: ಚಂದ್ರಗಿರಿ ಪ್ರಕಾಶನ, ಮಂಗಳೂರು: 2004

# ಆಕರ ಗ್ರಂಥಸೂಚಿ


1. ಅಬ್ದುಲ್ ರಶೀದ್: - 1996 ಸಣ್ಣಕಥೆಗಳು-1995, ಕರ್ನಾಟಕ ಸಾಹಿತ್ಯ ಅಕಾಡಮಿ
2. ಅಮೂರ ಜಿ.ಎಸ್.: -2003 ಕನ್ನಡ ಕಥನ ಸಾಹಿತ್ಯ:ಸಣ್ಣಕಥೆ: ಪ್ರಿಯದರ್ಶಿನ ಪ್ರಕಾಶನ,
3. ಅವಧಾನಿ ಜಿ.ಎಸ್. (ಸಂ.): -1992 ಸಾಹಿತ್ಯ ವಿಮರ್ಶೆ-ಕರ್ನಾಟಕ ಸಾಹಿತ್ಯ ಅಕಾಡಮಿ, ಬೆಂಗಳೂರು
4. ಆರ್ಯಾಂಭ ಪಟ್ಟಾಭಿ(ಸಂ.): -2004 ಮಹಿಳಾ ಸಾಹಿತ್ಯ ಸಮೀಕ್ಷೆ: ಸಂವಹನ ಪ್ರಕಾಶನ, ಮೈಸೂರು
5. ಇಬ್ರಾಹಿಮ್ ಸಈದ್: 1993 ತಪ್ಪುಕಲ್ಪನೆಗಳು: ಶಾಂತಿ ಪ್ರಕಾಶನ, ಮಂಗಳೂರು:
6. ಕೋದಂಡರಾಮ ಎನ್.ಕೆ.: -1996 ಕನ್ನಡ ಕಥಾ ಸಾಹಿತ್ಯದಲ್ಲಿ ಸಾಂಸ್ಕೃತಿಕ ಸಂಘರ್ಷ, ಗಾಯಿತ್ರಿ ಸ್ಮಾರಕ ಗ್ರಂಥಮಾಲೆ, ಮೈಸೂರು
7. ಕೇಶವಶರ್ಮ.ಕೆ. (ಸಂ.): - 1997 ಸಾಹಿತ್ಯ ವಿಮರ್ಶೆ:೧೯೯೩: ಕರ್ನಾಟಕ ಸಾಹಿತ್ಯ ಅಕಾಡೆಮಿ
8. ಕೃಷ್ಣಪ್ಪ. ಜಿ., ಬೇದ್ರ ಸಾಹಿತ್ಯದಲ್ಲಿ ಸ್ತ್ರೀ ಒಂದು ಅಧ್ಯಯನ: ಶ್ರೀರಂಗಪ್ರಕಾಶನ, ಮೈಸೂರು-2001.
9. ಕಿಶೋರಿ ನಾಯಕ್: 2000 ಸ್ತ್ರೀವಾದಿ ನೆಲೆಗಳು ಮತ್ತು ನಿಲುವುಗಳು: ಕೆ.ಪ್ರ.ಪಂ.ವಿ.ವಿ.
10. ಗೊರೂರು ರಾಮಸ್ವಾಮಿ ಅಯ್ಯಂಗಾರ್: - 2000 ನಮ್ಮ ಊರಿನ ರಸಿಕರು: ಐ.ಬಿ.ಎಚ್. ಪ್ರಕಾಶನ, ಬೆಂಗಳೂರು
11. ಗಿರಿಜಾ ಶಾಸ್ತ್ರಿ: 2000 ಆಧುನಿಕ ಕನ್ನಡ ಸಣ್ಣ ಕಥೆಗಳು: ಒಂದು ಸ್ತ್ರೀವಾದಿ ಅಧ್ಯಯನ: ಕನ್ನಡ ವಿಶ್ವವಿದ್ಯಾಲಯ, ಹಂಪಿ:
12. ಗಾಯಿತ್ರಿ ಎನ್.: 1991 ಮಹಿಳೆ- ಬಿಡುಗಡೆಯ ಹಾದಿಯಲ್ಲಿ, ನವಕರ್ನಾಟಕ ಪ್ರಕಾಶನ, ಬೆಂಗಳೂರು
13. ಚಂದ್ರಮತಿ ಸೋಂದಾ: -2005 ಚಿಪ್ಪೊಡೆದ ಮೌನ: ಅಭಿರುಚಿ ಪ್ರಕಾಶನ, ಮೈಸೂರು
14. ಜ್ಯೋಸ್ನಾ ಕಾಮತ್: 1999 ಮಹಿಳೆ ಒಂದು ಅಧ್ಯಯನ: ನವಕರ್ನಾಟಕ ಪ್ರಕಾಶನ, ಬೆಂಗಳೂರು
15. ನಿಸಾರ್ ಅಹಮದ್ ಕೆ.ಎಸ್.: ಸಮಗ್ರ ಕಾವ್ಯ:
16. ನೇಮಿಚಂದ್ರ: - 2001 ಮಹಿಳಾ ಅಧ್ಯನ: ಅಂಕಿತ ಪುಸ್ತಕ ಪ್ರಕಾಶನ, ಬೆಂಗಳೂರು
17. ಪುಟ್ಟಸ್ವಾಮಿ: 2002 ಆಧುನಿಕ ಕನ್ನಡ ಸಾಹಿತ್ಯ ಸಂದರ್ಭ ಮತ್ತು ಇಸ್ಲಾಂ ಸಂವೇದನೆ : ನವಕರ್ನಾಟಕ ಪ್ರಕಾಶನ,ಬೆಂಗಳೂರು
18. ಬಸವರಾಜ ಸಬರದ: - 1990 ಹೊಸ ದಿಕ್ಕು: ಪಲ್ಲವಿ ಪ್ರಕಾಶನ, ಬೀದರ್
19. ಬರಗೂರು ರಾಮಚಂದ್ರಪ್ಪ (ಸಂ.): - 1993 ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆಯ ಸ್ವರೂಪ: ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು
20. ಬೊಳುವಾರು ಮಹಮದ್ ಕುಂಞ: -1979ಅತ್ತ ಇತ್ತಗಳ ಸುತ್ತ ಮುತ್ತ: ನೆಲಮನೆ ಪ್ರಕಾಶನ, ಮೈಸೂರು
21. ಬೊಳುವಾರು ಮಹಮದ್ ಕುಂಞ: - 2001ಶತಮಾನದ ಸಣ್ಣಕಥೆ: ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

22. ಬೊಳುವಾರು ಮಹಮದ್ ಕುಂಞ: - 1991 ದೇವರುಗಳ ರಾಜಧ್ಯದಲ್ಲಿ: ಅರ್ಪಿತ ಪ್ರಕಾಶನ, ಹೆಗ್ಗೋಡು, ಸಾಗರ, ಕರ್ನಾಟಕ

23. ಬೊಳುವಾರು ಮಹಮದ್ ಕುಂಞ: -1987 ಜೆಹಾದ್: ನವಕರ್ನಾಟಕ ಪ್ರಕಾಶನ, ಬೆಂಗಳೂರು

24. ಬಾನುಮುಸ್ತಾಕ್: - 1990 ಹೆಜ್ಜೆ ಮೂಡದ ಹಾದಿ: ಸಂವಾದ ಪ್ರಕಾಶನ, ಮಲ್ಲಾಡಿ ಹಳ್ಳಿ

25. ಮಲ್ಲೇಪುರಂ ಜಿ.ವೆಂಕಟೇಶ (ಸಂ.): - 1998. ಸಾಹಿತ್ಯ ವಿಮರ್ಶೆ:1997, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

26. ರಹಮತ್ ತರೀಕೆರೆ(ಸಂ.): 1993 ಸಾಹಿತ್ಯ ವಿಮರ್ಶೆ- 1992: ಕರ್ನಾಟಕ ಸಾಹಿತ್ಯ ಅಕಾಡಮಿ, ಬೆಂಗಳೂರು

27. ರಾಘವೇಂದ್ರ ರಾವ್ ಎಚ್.ಎಸ್.(ಸಂ.): 2001 ಶತಮಾನದ ಸಾಹಿತ್ಯ ವಿಮರ್ಶೆ: ಕರ್ನಾಟಕ ಸಾಹಿತ್ಯ ಅಕಾಡಮಿ, ಬೆಂಗಳೂರು

28. ರಾಮಚಂದ್ರನ್(ಸಂ.): -2000 ವಸಾಹತೋತ್ತರ ಚಿಂತನೆ ಕರ್ನಾಟಕ ಸಾಹಿತ್ಯ ಅಕಾಡಮಿ, ಬೆಂಗಳೂರು

29. ಲೀಲಾವತಿ ಎಸ್. ರಾವ್ : 2000 ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಮಹಿಳೆ : ಸಂವಹನ ಪ್ರಕಾಶನ, ಮೈಸೂರು

30. ವಿಜಯಾ ದಬ್ಬೆ : 1989 ಮಹಿಳಾ ಸಾಹಿತ್ಯ ಸಮಾಜ : ರಚನಾ ಪ್ರಕಾಶನ, ಮೈಸೂರು

31. ವಿಜಯಾ ದಬ್ಬೆ : 1989 ನಾರಿ : ದಾರಿ ದಿಗಂತ, ರಚನಾ ಪ್ರಕಾಶನ, ಮೈಸೂರು

32. ವಿಜಯಾ ದಬ್ಬೆ : 1989 ಮಹಿಳೆ ಮತ್ತು ಮಾನವತೆ : ರಚನಾ ಪ್ರಕಾಶನ, ಮೈಸೂರು

33. ಶ್ರೀಕಂಠಯ್ಯ ಬಿ.ಎಂ. (ಅನು.) (ಕೆ.ವಿ.ಪುಟ್ಟಪ್ಪ ಸಂ.)-1948. : ಇಸ್ಲಾಂ ಸಂಸ್ಕೃತಿ, ಮೈಸೂರು ವಿ.ವಿ.

34. ಶ್ರೀಮತಿ ಎಚ್.ಎಸ್. (ಸಂ.): - 2006 ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ.

35. ಶ್ರೀಮತಿ ಎಚ್.ಎಸ್. (ಸಂ.): - 1999 ಕನ್ನಡ ಮಹಿಳೆ ಮತ್ತು ಸ್ವಾತಂತ್ರ್ಯ ಹೋರಾಟ, ಪ್ರಸಾರಾಂಗ, ಹಂಪಿ

36. ಶಶಿಕಲಾ ವೀರಸ್ವಾಮಿ (ಸಂ.): -1995 ಸಂವೇದನೆ: ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

37. ಸಂಧ್ಯಾ ರೆಡ್ಡಿ ಕೆ.ಆರ್.: -2003 ಮಹಿಳಾ ಜಾನಪದ: ಕರ್ನಾಟಕ ಜದಾನಪದ ಮತ್ತು ಯಕ್ಷಗಾನ ಮಂಡಳಿ, ಬೆಂಗಳೂರು

38. ಸುಮಿತ್ರಾಬಾಯಿ ಬಿ.ಎನ್. : - 1999 ಸ್ತ್ರೀವಾದ: ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

39. ಸಬಿಹಾ ಭೂಮಿಗೌಡ : 2001 ಬಗೆ : ಲೋಹಿಯಾ ಪ್ರಕಾಶನ, ಬಳ್ಳಾರಿ

